# ಹಿತೋಪದೇಶ

ವಿದ್ವಾನ್ ಏ. ಸುಂದರ ಶಾಸ್ತ್ರಿ
ಸಾಹಿತ್ಯ ರತ್ನ

ತಿದ್ದಿದ ಎರಡನೆಯ ಆವೃತ್ತಿ
1932
ಬಾಸೆಲ್ ಮಿಶನ್ ಪ್ರೆಸ್

# HITŌPADĒŠA

## IN KANARESE

BY

Vidvan P. SUNDARA SASTRY

(Sahitya Ratnam)

SECOND EDITION, REVISED

# ಹಿತೋಪದೇಶ

ವಿದ್ವಾನ್ ಪಿ. ಸುಂದರ ಶಾಸ್ತ್ರಿ

(ಸಾಹಿತ್ಯರತ್ನಂ)

ಇವರಿಂದ ರಚಿಸಲ್ಪಟ್ಟದ್ದು

ತಿದ್ದಿದ ೨ನೇ ಆವೃತ್ತಿ



PUBLISHED BY THE

BASEL MISSION BOOK AND TRACT DEPOT MANGALORE

1932

e-28

## ಪೀಠಿಕೆ

ಲೋಕದಲ್ಲಿ ಪಂಡಿತರು—ಪಾಮರರು, ಹುಡುಗರು—ಮುದುಕರು, ಬಡವರು—ಬಲ್ಲಿದರು, ಹೆಂಗಸರು—ಗಂಡಸರು, ಎಂಬ ಭೇದವಿಲ್ಲದೆ ಎಲ್ಲರೂ ತಿಳಿಯಬೇಕಾದ ಹಲವು ವಿಷಯಗಳಲ್ಲಿ ನೀತಿಯು ಮುಖ್ಯವಾದುದೆಂಬುದು ನಿರ್ವಿವಾದ ವಿಷಯವಾಗಿದೆ. ವಿಷ್ಣುಶರ್ಮ ವಿರಚಿತವಾದ ಸಂಸ್ಕೃತ ಹಿತೋಪದೇಶವನ್ನು ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳ ಉಪಯೋಗಾರ್ಥವಾಗಿ ಕನ್ನಡ ಭಾಷೆಗೆ ಪರಿವರ್ತಿಸುವಂತೆ ಪ್ರೋತ್ಸಾಹಗೊಳಿಸಿದ ಮ. ರಾ. ರಾ. ಶ್ರೀ ಪಂಜೆ ಮಂಗೇಶರಾವ್, ಬಿ. ಎ., ಎಲ್. ಟಿ., ಯವರ ಸೂಚನೆಯನ್ನು ಅನುಸರಿಸಿ, ಕಥಾಸರಣಿಗೆ ಲೋಪಬಾರದಂತೆ (ಮೂಲಗ್ರಂಥದಲ್ಲಿ ಕಂಡುಬರುವ ಕೆಲವು ಅಸಭ್ಯಾಂಶಗಳನ್ನು ಬಿಟ್ಟು) ನನ್ನ ಬುದ್ಧಿಶಕ್ತಿಗೆ ಸೂಕ್ತವಾಗಿ ಕಂಡುಬಂದ ರೀತಿಯಲ್ಲಿ ಈ ಗ್ರಂಥವನ್ನು ತಿಳಿಗನ್ನಡದಲ್ಲಿ ಬರೆದಿರುವೆನು. ಸಂಸ್ಕೃತವನ್ನು ಅರಿಯದವರು ಮೂಲ ಗ್ರಂಥದ ಅಪೇಕ್ಷೆಯಿಲ್ಲದೆಯೇ ಈ ಗ್ರಂಥವನ್ನು ಪಠನಮಾಡಿದಲ್ಲಿ ನೀತಿ ರಹಸ್ಯವನ್ನು ಮನದಟ್ಟು ಮಾಡಿಕೊಳ್ಳಲಾಗುವುದು. ಈ ಗ್ರಂಥರಚನೆಗೆ ಇದೇ ಮುಖ್ಯವಾದ ಉದ್ದೇಶವು. ಇದರಲ್ಲಿ ಕಂಡುಬರುವ ಲೋಪಗಳನ್ನು ವಿಚಕ್ಷಣಶೀಲರಾದ ವಾಚಕರು ತಿಳಿಯಪಡಿಸಿದಲ್ಲಿ ಕೃತಜ್ಞತೆಯಿಂದ ಬರಮಾಡಿ, ಮುಂದಣ ಮುದ್ರಣಗಳಲ್ಲಿ ಸವರಿಸಲು ಅನುಕೂಲವಾಗುವುದು. ಈ ಗ್ರಂಥವನ್ನು ಪ್ರಕಟಿಸಿ ಪ್ರೋತ್ಸಾಹಗೊಳಿಸಿದ ಮಂಗಳೂರು ಬಾಸೆಲ್ ಮಿಶ್ಯನ್ ಪುಸ್ತಕ ಶಾಲಾಧಿಕಾರಿಗಳ ಭಾಷಾಭಿಮಾನವು ಶ್ಲಾಘನೀಯವಾಗಿರುವುದು.

ಇಂತು

ಮದ್ರಾಸು,
೨೦—೭—೨೮.

ಪಾನ್ಯಂ ಸುಂದರಶಾಸ್ತ್ರೀ.

# ಹಿತೋಪದೇಶ

## ಪ್ರಸ್ತಾವನೆ

ಗಂಗೆಯ ನೊರೆಯಂತೆ ಚಂದ್ರಕಳೆಯನ್ನು ತಲೆಯ ಮೇಲೆ ಧರಿಸಿದ ಪರಮೇಶ್ವರನ ಅನುಗ್ರಹದಿಂದ ಸಜ್ಜನರಿಗೆ ಸಾಧಿಸಬೇಕಾದ ಸರ್ವ ಕಾರ್ಯಗಳೂ ಕೈಗೂಡಿ ಫಲದಾಯಕಗಳಾಗಲಿ!

ಈ ಹಿತೋಪದೇಶವನ್ನು ಕೇಳಿದರೆ ಭಾಷೆಯನ್ನು ಉಪಯೋಗಿಸು ವುದರಲ್ಲಿ ಪಟುತ್ವವನ್ನೂ ಇತರ ವಿಷಯಗಳಲ್ಲಿ ಚತುರತೆಯನ್ನೂ ನೀತಿ ನಿಪುಣತೆಯನ್ನೂ ಪಡೆಯಬಹುದು.

ಬುದ್ಧಿಶಾಲಿಯು ತನಗೆ ಮುಪ್ಪೂ ಸಾವೂ ಇಲ್ಲವೆಂದು ಭಾವಿಸಿ ವಿದ್ಯೆಯನ್ನೂ ಧನವನ್ನೂ ಸಂಪಾದಿಸಬೇಕು. ಮೃತ್ಯುವು ತಲೆಗೂದಲನ್ನು ಹಿಡಿದು ಸೆಳೆಯುತ್ತಿರುವುದೆಂದು ಭಾವಿಸಿ ಧರ್ಮವನ್ನು ಆಚರಿಸಬೇಕು.

ಸಕಲ ವಿಧವಾದ ದ್ರವ್ಯದಲ್ಲಿಯೂ ವಿದ್ಯೆಯೇ ಶ್ರೇಷ್ಠವಾದ ದ್ರವ್ಯ ವೆಂಬುದಾಗಿ ಹೇಳುವರು. ಅದಕ್ಕೆ ಎಂದಿಗೂ ಕಳ್ಳಕಾಕರ ಭಯವಿಲ್ಲ. ಕ್ಲುಪ್ತವಾದ ಬೆಲೆಯೂ ಇಲ್ಲ. ಅದು ಅಳಿಯತಕ್ಕುದೂ ಅಲ್ಲ. ಹೊಳೆಯು ಹಳ್ಳದಲ್ಲಿ ಹರಿಯುವುದಾ (ನೀಚಗಾಮಿನಿಯಾ) ದರೂ ಹುಗಲಾಗದ ಸಮುದ್ರವನ್ನೂ, ವ್ಯಾಪಾರಾದಿಗಳಿಂದ ಐಶ್ವರ್ಯವನ್ನೂ ಮನುಷ್ಯನಿಗೆ ಹೇಗೆ ಒದವಿಸುವುದೋ ಅಂತೆಯೇ ವಿದ್ಯೆಯು ನೀಚಗಾಮಿನಿಯಾಗಿ (ಹೀನ ಮನುಷ್ಯನನ್ನು ಆಶ್ರಯಿಸಿ)ದ್ದರೂ ಗಂಭೀರನಾದ ಅರಸನ ಆಶ್ರಯವನ್ನೂ, ಆ ಮೂಲಕ ಐಶ್ವರ್ಯವನ್ನೂ ಒದವಿಸುವುದು.

ವಿದ್ಯೆಯು ವಿನಯವನ್ನು ಸಂಪಾದಿಸಿಕೊಡುವುದು. ವಿನಯದಿಂದ ಯೋಗ್ಯತೆಯು ಹೆಚ್ಚುವುದು. ಅರ್ಹತೆಯಿಂದ ಹಣವನ್ನು ಗಳಿಸಲನು ವಾಗುವುದು. ಧನದಿಂವ ಧರ್ಮವೂ ಧರ್ಮದಿಂದ ಸುಖವೂ ದೊರೆಯು ವುವು.

ಶಸ್ತ್ರವಿದ್ಯೆ, ಶಾಸ್ತ್ರವಿದ್ಯೆ—ಎಂಬುದಾಗಿ ಎರಡು ತರದ ವಿದ್ಯೆಗಳನ್ನು ಮುಖ್ಯವಾಗಿ ಕಲಿಯಬೇಕು. ಅವುಗಳಲ್ಲಿ ಮೊದಲನೆಯದು ಮುದಿತನ

ದಲ್ಲಿ ಪರಿಹಾಸಕ್ಕೆ ಗುರಿಮಾಡುವುದು. ಎರಡನೆಯದನ್ನು ಸರ್ವರೂ ಸರ್ವ ಕಾಲದಲ್ಲಿಯೂ ಆದರಿಸುವರು.

ಪಂಡಿತನು ಸುಗುಣಗಳಿಗೆ ಗಣಿ. ಮೂರ್ಖನು ದೋಷಗಳಿಗೆ ತವರ್ಮನೆ. ಈ ಕಾರಣದಿಂದ ಸಾವಿರ ಮಂದಿ ಮೂರ್ಖರಿಗಿಂತಲೂ ಒಬ್ಬ ಪಂಡಿತನು ಶ್ರೇಷ್ಠನೆನಿಸುವನು.

ಹೊಸ ಪಾತ್ರೆಗೆ ಅಂಟಿದ ಸಂಸ್ಕಾರವು ಎಂದಿಗೂ ಕೆಡುವುದಿಲ್ಲ. ಅದೇ ರೀತಿಯಿಂದ ಎಳೆತನದಲ್ಲಿ ಹುಡುಗರ ಮನಸ್ಸಿನಲ್ಲಿ ನಾಟಿದ ತಿಳಿವಳಿಕೆಯು ಬರಿದಾಗುವುದಿಲ್ಲ. ಇದನ್ನರಿತು ವಿದ್ಯಾರ್ಥಿಗಳ ಉಪಯೋಗದ ಸಲುವಾಗಿ ಕಥೆಗಳ ನೆಪದಿಂದ ಈ ಗ್ರಂಥದಲ್ಲಿ ನೀತಿಯನ್ನು ಬಣ್ಣಿಸುವೆನು. ಇದರಲ್ಲಿ ಮಿತ್ರಲಾಭ, ಮಿತ್ರಭೇದ, ವಿಗ್ರಹ, ಸಂಧಿ ಎಂಬ ನಾಲ್ಕು ಪ್ರಕರಣಗಳಿವೆ. ಇವುಗಳನ್ನು ಪಂಚತಂತ್ರ ಮುಂತಾದ ಗ್ರಂಥಗಳಿಂದ ಆಯ್ದು ಬರೆಯುವೆನು.

ಗಂಗೆಯ ದಡ್ಡಿನಲ್ಲಿ ಪಾಟಲೀಪುತ್ರವೆಂಬ ಪಟ್ಟಣವಿದೆ. ಅಲ್ಲಿ ಸಕಲ ವಿಧವಾದ ರಾಜಗುಣಗಳಿಂದ ಒಪ್ಪುವ ಸುದರ್ಶನನೆಂಬ ಅರಸನಿದ್ದನು. ಆ ದೊರೆಯು ಒಂದು ದಿನ ಯಾವನೋ ಒಬ್ಬನು ಓದುತ್ತಿದ್ದ, ಈ ಅರ್ಥವುಳ್ಳ ಎರಡು ಪದ್ಯಗಳನ್ನು ಕೇಳಿದನು. ಅದೆಂತೆಂದರೆ—

"ಸಕಲ ಸಂದೇಹಗಳನ್ನೂ ತೊಲಗಿಸಿ, ಕಣ್ಣಿನಿಂದ ಕಾಣಲಾಗದುದನ್ನೂ ಪ್ರಕಾಶಗೊಳಿಸುವುದರಿಂದ ಶಾಸ್ತ್ರವು ಎಲ್ಲರಿಗೂ ಕಣ್ಣಿನಂತಿರುವುದು. ಶಾಸ್ತ್ರ ಪರಿಚಯವು ಯಾವನಿಗೆ ಇಲ್ಲವೋ ಅವನು ಕುರುಡನೇ ಸರಿ. ಯೌವನ, ಧನಸಂಪತ್ತು, ಪ್ರಭುತ್ವ, ಅವಿವೇಕ— ಈ ನಾಲ್ಕರಲ್ಲಿ ಒಂದೊಂದೇ ಎಷ್ಟೋ ಬಗೆಯಿಂದ ಕೇಡನ್ನು ಒಡ್ಡುವುದು. ಇಂತಿರಲು ಈ ನಾಲ್ಕೂ ಒಬ್ಬನಲ್ಲಿಯೇ ನೆಲೆಯಾಗಿ ಇದ್ದರೆ ಹೇಳತಕ್ಕುದೇನು?"

ಇದನ್ನು ಕೇಳಿ ಆ ಅರಸನು, ತನ್ನ ಮಕ್ಕಳು ಶಾಸ್ತ್ರವನ್ನು ಕಲಿಯದೆ, ದಾರಿತಪ್ಪಿ ನಡೆಯುತ್ತ, ಸನ್ಮಾರ್ಗವನ್ನು ಅನುಸರಿಸದಿರುವುದನ್ನು ಕಂಡು ಮನಮರುಗಿ, ಈ ರೀತಿ ಹೇಳತೊಡಗಿದನು:—"ವಿದ್ಯಾವಿಹೀನನೂ ಧರ್ಮವಿಮುಖನೂ ಎನಿಸಿದ ಮಗನು ಹುಟ್ಟಿ ಫಲವೇನು? ಕುರುಡು ಕಣ್ಣಿನಿಂದ ಬಾಧೆಯೇ ಫಲವಲ್ಲದೆ ಬೇರೆ ಪ್ರಯೋಜನವಿರುವುದೇ? ಹುಟ್ಟಿದವನು,

ಸತ್ತವನು, ಓದದವನು—ಎಂಬ ಈ ಮೂವರಲ್ಲಿ ಮೊದಲನೆಯ ಇಬ್ಬರೂ ಎಷ್ಟೋ ಮೇಲು. ಕಡೆಯವನಂತೆ ಓದದವನಾಗಿರುವುದು ಎಂದಿಗೂ ತರವಲ್ಲ. ಮೊದಲನೆಯ ಇಬ್ಬರೂ ಒಮ್ಮೆಗೆ ಮಾತ್ರವೇ ದುಃಖಪಡಿಸ ತಕ್ಕವರು. ಕೊನೆಯವನಾದರೋ ಬಾರಿಬಾರಿಗೂ ದುಃಖಪಡಿಸುವನು.''

"ತನ್ನ ಹುಟ್ಟಿನಿಂದ ಯಾವನು ವಂಶಕ್ಕೆ ಕೀರ್ತಿಯನ್ನು ತರುವನೋ ಅವನೇ ಹುಟ್ಟಿದವನು. ಹುಟ್ಟುಸಾವುಗಳಿಂದ ಚಕ್ರದಂತೆ ತಿರುಗುವ ಈ ಸಂಸಾರದಲ್ಲಿ ಸತ್ತ ಬಳಿಕ ಯಾರೂ ಮರಳಿ ಹುಟ್ಟದಿರುವುದಿಲ್ಲ. ಗುಣ ಶಾಲಿಗಳ ಸಮೂಹವನ್ನು ಲೆಕ್ಕಿಸುವಾಗ ಮೊತ್ತಮೊದಲು ಬಳಪವು ಬೇಗನೆ ಯಾವನ ವಿಷಯದಲ್ಲಿ ಮೊದಲನೆಯ ಗೆರೆಯನ್ನು ಎಳೆಯಲಾರದೋ, ಅಂತಹವನ ಜನನಿಯೂ ಪುತ್ರವತಿಯೆನಿಸಿದರೆ ಬಂಜೆಯು ಇನ್ನೆಂತಹವಳು? ಹೇಳು!''

"ದಾನ, ತಪಸ್ಸು, ಶೌರ್ಯ, ವಿದ್ಯೆ, ಧನಾರ್ಜನೆ-ಇವುಗಳಲ್ಲಿ ಆಸಕ್ತಿ ಯಿಲ್ಲದವನು ಜನನಿಯ ಉದರಭಾರನು. ನೂರುಗಟ್ಟಲೆ ಮೂರ್ಖರಿ ಗಿಂತಲೂ ಗುಣಶಾಲಿಯಾದ ಒಬ್ಬನೇ ಮಗನು ಲೇಸು. ಚಂದ್ರನು ಒಬ್ಬನೇ ಆಗಿದ್ದರೂ ಕತ್ತಲೆಯನ್ನು ದೂಡುವನು. ಬರಿಯ ತಾರೆಗಳ ಸಮುದಾಯ ದಿಂದ ಫಲವಿಲ್ಲ. ವಿನೀತನೂ ಧಾರ್ಮಿಕನೂ ಸಂಪನ್ನನೂ ವಿದ್ಯಾವಂತನೂ ಎನಿಸಿದ ಮಗನನ್ನು ಪಡೆಯಬೇಕಾದರೆ, ಯಾವುದಾದರೊಂದು ಪುಣ್ಯಕ್ಷೇತ್ರ ದಲ್ಲಿ ಅತಿ ದುಷ್ಕರವಾದ ತಪಸ್ಸನ್ನು ಮಾಡಿರಬೇಕು.''

"ಎಲೈ ಅರಸನೇ! ಅನುದಿನವೂ ಹಣದ ಆದಾಯ, ಆರೋಗ್ಯ, ಗೆಳೆಯ, ಹಿತವಾದಿನಿಯಾದ ಮಡದಿ, ವಿಧೇಯನಾದ ಮಗ, ಹಣವನ್ನು ದುಡಿಯತಕ್ಕ ವಿದ್ಯೆ—ಈ ಆರೂ ಜೀವಲೋಕದ ಸುಖಗಳು.''

"ಧಾನ್ಯವು ಇಲ್ಲದೆ ಅಳೆಯುವ ಕೊಳಗಗಳಿದ್ದು ಫಲವೇನು? ಗುಣ ಹೀನರಾದ ಮಕ್ಕಳು ಎಷ್ಟು ಮಂದಿ ಇದ್ದರೇನು ಫಲ? ಬರಿಯ ಕೊಳಗ ಗಳಿಂದ ಕಣಜವನ್ನು ತುಂಬಲಾಗುವುದೇ? ತಂದೆಗೆ ಕೀರ್ತಿಯನ್ನೂ, ವಂಶಕ್ಕೆ ಏಳಿಗೆಯನ್ನೂ, ತರತಕ್ಕ ಮಗನು ಒಬ್ಬನಾದರೂ ಸಾಕು.''

"ಸಾಲಗಾರನಾದ ತಂದೆ, ಪತಿವ್ರತೆಯಲ್ಲದ ತಾಯಿ, ಅಂದಗಾತಿ ಯಾದ ಮಡದಿ, ಓದಿಲ್ಲದ ಮಗ—ಇವರೆಲ್ಲರೂ ಶತ್ರುಗಳು.''

"ಅಭ್ಯಾಸವಿಲ್ಲದವನಿಗೆ ಓದು ವಿಷದಂತಿರುವುದು. ಅಜೀರ್ಣವಾಗಿರುವಾಗ ಆಹಾರವು ನಂಜಿನಂತೆ ಕಾಣುವುದು. ಬಡವನಿಗೆ ಸಭೆಯು ವಿಷ . . . ಗುಣವಂತನು ಯಾವ ವಂಶದಲ್ಲಿ ಹುಟ್ಟಿದವನಾದರೂ ಪೂಜನೀಯನು. ಬಿಲ್ಲು ವಂಶವಿಶುದ್ಧವಾಗಿದ್ದರೂ ಗುಣ (ಹೆದೆಯು) ವಿಲ್ಲದಿದ್ದರೆ ಏನು ಮಾಡಬಲ್ಲುದು?"

"ಹಾ! ಹಾ! ಮಗೂ! ಕಾಲವನ್ನು ಬರಿದೆ ಕಳೆದೆಯಲ್ಲಾ! ಕಳೆದ ದಿನಗಳನ್ನೆಲ್ಲಾ ಓದದೆ ಹಾಳುಮಾಡಿದೆಯಲ್ಲವೇ! ಕೆಸರಿನಲ್ಲಿ ಹೂತ ಆಕಳಿನಂತೆ ಮುಂದೆ, ನೀನು ಪಂಡಿತರ ಸಭೆಯಲ್ಲಿ ಕಷ್ಟಪಡುವೆ. ಈ ಕಾರಣದಿಂದ ನನ್ನ ಮಕ್ಕಳನ್ನು ತಿದ್ದಿ ಗುಣವಂತರನ್ನಾಗಿ ಮಾಡಲು ತಕ್ಕ ಉಪಾಯವಾದರೂ ಯಾವುದು?"

"ಊಟ, ನಿದ್ದೆ, ಹೆದರಿಕೆ, ಸುಖ–ಇವು ಪಶುಗಳಿಗೆ ಹೇಗೋ ಹಾಗೆಯೇ ಮನುಷ್ಯರಿಗೂ ಸಮಾನವಾಗಿರುವುದು. ಆದರೆ ಮನುಷ್ಯರಿಗೆ ಧರ್ಮವು ಒಂದು ವಿಶೇಷ. ಧರ್ಮಹೀನನು ಪಶುಸಮಾನನು. ಏಕೆಂದರೆ, ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕರಲ್ಲಿ ಯಾವ ಒಂದನ್ನಾದರೂ ಗಳಿಸಲಾರದವನ ಜನ್ಮವು ಆಡಿನ ಕುತ್ತಿಗೆಯಲ್ಲಿ ನೇತಾಡುವ ಬೋಡುಮೊಲೆಯಂತೆ ನಿಷ್ಪ್ರಯೋಜನವಾದುದು."

"ಆಯುಷ್ಯ, ಕರ್ಮ, ಧನ, ವಿದ್ಯೆ, ಮರಣಗಳೆಂಬ ಈ ಐದನ್ನೂ ಪ್ರಾಣಿಯು ಗರ್ಭದಲ್ಲಿರುವಾಗಲೇ ವಿಧಿಯು ನಿಯಮಿಸುವನು."

"ತಪ್ಪದೆ ನಡೆಯಲೇ ಬೇಕಾದ ದೆಸೆಗಳು ಮಹಾತ್ಮರಿಗೂ ನಡೆಯದಿರಲಾರವು. ಶಿವನು ದಿಗಂಬರನಾಗಿರುವಿಕೆ, ಹರಿಯು ಹೆಬ್ಬಾವಿನ ಮೇಲೆ ಮಲಗಿರುವಿಕೆ, ಇವು ಈ ವಿಷಯದಲ್ಲಿ ಉದಾಹರಣೆಗಳು."

"ಆಗಲಾರದ ಕಾರ್ಯವು ಎಂದಿಗೂ ಆಗುವುದೇ ಇಲ್ಲ. ಆಗತಕ್ಕುದು ಆಗಿ ತೀರದೆ ಇರದು."–ಎಂಬ ಇದು ಚಿಂತೆಯನ್ನೂ ವಿಷವನ್ನೂ ಮುರಿಯತಕ್ಕ ದಿವ್ಯೌಷಧವು. ಇದನ್ನು ಏತಕ್ಕೆ ಕುಡಿಯಬಾರದೆಂದು, ಈ ಮೇಲೆ ಹೇಳಿದ ಮೂರು ವಿಷಯಗಳನ್ನೂ ಕೆಲಸಮಾಡಲೊಲ್ಲದ ಸೋಮಾರಿಗಳು ಒದರಿಕೊಳ್ಳುವರು."

"ಅದೃಷ್ಟವನ್ನೇ ನಂಬಿ ಯಾವನೊಬ್ಬನೂ ತನ್ನ ಪ್ರಯತ್ನವನ್ನು ಬಿಡಬಾರದು. ಉದ್ಯೋಗವಿಲ್ಲದೆಯೇ ಎಳ್ಳಿನಿಂದ ಎಣ್ಣೆಯನ್ನು ಪಡೆಯಲಾಗುವುದೇ? ಉದ್ಯೋಗಿಯನ್ನು ಲಕ್ಷ್ಮಿಯು ಒಲಿಯುವಳು. ಅದೃಷ್ಟವು ತಾನಾಗಿಯೇ ಬರುವುದೆಂಬುದು ನೀಚರ ಮಾತು. ಅದೃಷ್ಟವನ್ನು ಒತ್ತಟ್ಟುಮಾಡಿ, ಶಕ್ತಿಗೆ ತಕ್ಕಂತೆ ಸಾಹಸ ಮಾಡಲೇ ಬೇಕು. ಪ್ರಯತ್ನ ಮಾಡಿದರೂ ಫಲವು ಕೈಗೂಡದಿದ್ದರೆ ದೋಷವೇನು? ಒಂದೇ ಗಾಲಿಯಿಂದ ಬಂಡಿಯು ಹೇಗೆ ಸಾಗಲಾರದೋ ಅದರಂತೆಯೇ ಪುರುಷಪ್ರಯತ್ನವಿಲ್ಲದಿದ್ದರೆ ದೈವವೂ ಕೈಗೂಡುವುದಿಲ್ಲ."

"ಹಿಂದೆ ಮಾಡಿದ ಕರ್ಮವನ್ನೇ ಅದೃಷ್ಟವೆನ್ನುವರು. ಆದುದರಿಂದ ಆಲಸ್ಯವನ್ನು ತೊರೆದು ಪ್ರಯತ್ನ ಮಾಡಬೇಕು. ಕುಂಬಾರನು ಮಣ್ಣುನ್ನುದ್ದೆಯಿಂದ ತನಗೆ ಬೇಕಾದ ಗಡಿಗೆ, ಕುಡಿಕೆ, ಮಡಿಕೆಗಳನ್ನು ಹೇಗೆ ನಿರ್ಮಿಸುವನೋ, ಹಾಗೆಯೇ ಮನುಷ್ಯನು ತಾನು ಮಾಡಿದ ಕರ್ಮಕ್ಕೆ ತಕ್ಕ ಫಲವನ್ನೇ ಪಡೆಯುವನು.

"ಕಾಕತಾಳನ್ಯಾಯದಂತೆ ನಿಧಿಯು ತಾನಾಗಿ ಕಂಡುಬಂದರೂ ಅದೃಷ್ಟವು ಅದನ್ನು ತೆಗೆದು ಜೋಪಾನ ಪಡಿಸಲಾರದು. ಆ ವಿಷಯದಲ್ಲಿ ಪುರುಷ ಪ್ರಯತ್ನವು ಬೇಕಾಗಿರುವುದು. ಕಾರ್ಯಗಳು ಪುರುಷಪ್ರಯತ್ನದಿಂದಲೇ ಕೈಗೂಡುವುವಲ್ಲದೆ ಬರಿಯ ಬಯಕೆಗಳಿಂದ ಸಿದ್ಧಿಸಲಾರವು. ಸಿಂಹವು ಮಲಗಿ ನಿದ್ರಿಸುವಾಗ ಮೃಗಗಳು ತಾವಾಗಿಯೇ ಅದರ ಬಾಯೊಳಗೆ ಹುಗಲಾರವು. ಹುಡುಗರು ಅಡಿಗಡಿಗೂ ಹೆತ್ತವರ ಶಿಕ್ಷಣದಿಂದಲೇ ಗುಣವಂತರಾಗಬೇಕು. ಹೊಟ್ಟೆಯಿಂದ ಬಿದ್ದ ಮಾತ್ರಕ್ಕೇನೇ ಮಕ್ಕಳು ಪಂಡಿತರಾಗಲಾರರು."

ವಿದ್ಯೆಯನ್ನು ಕಲಿಯದ ಹುಡುಗನಿಗೆ ತಾಯಿ ಶತ್ರು, ತಂದೆ ಹಗೆ. ಆ ಬಾಲಕನು ಹಂಸೆಗಳ ನಡುವೆ ಸಿಲುಕಿದ ಕಾಗೆಯಂತೆ ಇರುವನೇ ವಿನಾ, ಪಂಡಿತರ ಸಭೆಯಲ್ಲಿ ಶೋಭಿಸಲಾರನು. ವಿದ್ಯೆಯಿಲ್ಲದವರು ರೂಪವಂತರಾಗಿದ್ದರೂ, ದೊಡ್ಡ ಮನೆತನದಲ್ಲಿ ಹುಟ್ಟಿದ್ದರೂ, ಕಾಡಿನಲ್ಲಿ ವಿಶಾಲವಾಗಿ ಬೆಳೆದ, ಪರಿಮಳವಿಲ್ಲದ ಮುತ್ತುಗ ಮರದ ಹೂಗಳಂತೆ ಕಂಗೊಳಿಸಲಾರರು. ಗುರುಶುಶ್ರೂಷೆ ಮಾಡಿ, ಪುಸ್ತಕವನ್ನು ಹಿಡಿದು ಓದು ಕಲಿಯದವನು ಸಭೆ

ಯಲ್ಲಿ ಗಣನೆಗೆ ಬರಲಾರನು. ಮೂರ್ಖನು ವಸ್ತ್ರಭೂಷಿತನಾಗಿ ಸಭೆಯಲ್ಲಿ ಕುಳಿತರೆ ಫಲವೇನು? ಬಾಯ್ದೆರೆದು ಮಾತನಾಡುವ ವರೆಗೆ ಮಾತ್ರವೇ ಪಂಡಿತನಂತೆ ತೋರುವನು. ಮಾತನಾಡಿದನೆಂದರೆ ಗುಟ್ಟು ರಟ್ಟಾಗುವುದು''.

ಈ ರೀತಿ ಮರುಗಿ, ಆ ಅರಸನು ಪಂಡಿತರನ್ನು ತನ್ನ ಒಡ್ಡೋಲಗಕ್ಕೆ ಬರಮಾಡಿ, ಅವರೊಡನೆ ಇಂತೆಂದನು—''ಎಲೈ ಪಂಡಿತರೇ! ಲಾಲಿಸಿರಿ! ನನ್ನ ಮಕ್ಕಳು ಓದು ಕಲಿಯದೆ ಯಾವಾಗಲೂ ಕೆಟ್ಟ ಹಾದಿಯನ್ನೇ ಹಿಡಿದಿರುವರು. ಇವರನ್ನು ನೀತಿಶಾಸ್ತ್ರಪಾರಂಗತರನ್ನಾಗಿ ಮಾಡಿ, ವಿದ್ಯೆಯನ್ನು ಕಲಿಸಿ ಕೊಡುವುದರ ಮೂಲಕ ಇವರಿಗೆ ಎರಡನೆಯ ಜನ್ಮವನ್ನು ಕೊಡತಕ್ಕ ಪಂಡಿತರು ಈ ಸಭೆಯಲ್ಲಿ ಯಾರಾದರೂ ಇರುವರೇ? ಏಕೆಂದರೆ, ಗಾಜಿನ ಚೂರು ಚಿನ್ನದೊಂದಿಗೆ ಸೇರಿ ಪಚ್ಚೆಯ ಕಾಂತಿಯನ್ನು ಪಡೆಯುವುದು. ಅಂತೆಯೇ ಪಂಡಿತರ ಸಹವಾಸದಿಂದ ಮೂರ್ಖರೂ ತಿಳಿವಳಿಕೆಯನ್ನು ಪಡೆಯುವರು. ಅಲ್ಪರ ಸಂಗದಿಂದ ಬುದ್ಧಿಯು ಕೆಡುವುದು. ಸಮಾನರೊಂದಿಗೆ ಸೇರಿದರೆ ಹೆಚ್ಚುಕಡಿಮೆಗಳಿಲ್ಲದೆ ಸಮಾನವಾಗಿಯೇ ಇರುವುದು. ಉತ್ತಮರೊಂದಿಗೆ ಸಹವಾಸ ಮಾಡಿದರೆ ಬುದ್ಧಿಯು ವಿಶೇಷವಾಗುವುದು.''

ಇಷ್ಟರಲ್ಲಿ ಬೃಹಸ್ಪತಿಯಂತೆ ಸಕಲ ಶಾಸ್ತ್ರ ರಹಸ್ಯಗಳನ್ನು ಬಲ್ಲ ವಿಷ್ಣುಶರ್ಮನೆಂಬ ಮಹಾಪಂಡಿತನು ಇಂತೆಂದನು—''ಅರಸನೇ! ರಾಜಪುತ್ರರು ದೊಡ್ಡ ಮನೆತನದವರು. ಅದರಿಂದ ನಾನು ಅವರಿಗೆ ನೀತಿಯನ್ನು ಕಲಿಸಬಲ್ಲೆನು. ಹೇಗೆಂದರೆ-ಕೆಲಸಕ್ಕೆ ಬಾರದ ವಸ್ತುವಿಗಾಗಿ ಸಾವಿರ ಬಗೆಯಿಂದ ಪಾಡುಪಟ್ಟರೂ ಫಲವಿಲ್ಲ. ಎಷ್ಟು ಸಾಹಸಪಟ್ಟರೂ ಬಕವನ್ನು ಗಿಳಿಯಂತೆ ಮಾತನಾಡಿಸಲಾಗುವುದೇ? ಸರ್ವಥಾ ಸಾಧ್ಯವಾಗದು. ಪದ್ಮರಾಗಮಣಿಗಳ ಗಣಿಯಲ್ಲಿ ಗಾಜಿನ ಪೊದರು ಹುಟ್ಟುವುದಾದರೂ ಉಂಟೇ? ಅಂತೆಯೇ, ನಿಮ್ಮ ಈ ವಂಶದಲ್ಲಿ ಗುಣಹೀನರಾದ ಮಕ್ಕಳು ಹುಟ್ಟಲಾರರು. ಈ ಕಾರಣದಿಂದ, ಆರು ತಿಂಗಳ ಅವಧಿಯೊಳಗೆ ನಾನು ನಿನ್ನ ಮಕ್ಕಳನ್ನು ನೀತಿಶಾಸ್ತ್ರಪಾರಂಗತರನ್ನಾಗಿ ಮಾಡಬಲ್ಲೆನು.''

ಈ ಮಾತನ್ನು ಲಾಲಿಸಿ, ಅರಸನು ವಿನಯದಿಂದ ಇಂತೆಂದನು—''ಹೂವಿನ ಸಂಗದಿಂದ ಹುಳವೂ ಸತ್ಪುರುಷರ ತಲೆಯನ್ನು ಏರುವುದು. ಮಹಾಪುರುಷರು ಶಾಸ್ತ್ರೋಕ್ತವಾಗಿ ಪ್ರತಿಷ್ಠೆಮಾಡಿದ ಶಿಲೆಯೂ ದೇವತ್ವ

ವನ್ನು ಪಡೆಯುವುದು. ಸೂರ್ಯನು ಮೂಡಿದೊಡನೆಯೇ ಮೂಡಣ ಬೆಟ್ಟದಲ್ಲಿರುವ ವಸ್ತುಗಳು ಹೇಗೆ ಬೆಳಗುವುವೋ ಹಾಗೆಯೇ ಮಹಾಪುರುಷರ ಸಹವಾಸದಿಂದ ನೀಚಕುಲಸಂಭೂತನೂ ಪ್ರಕಾಶಿಸುವನು. ಗುಣಗಳು ಗುಣಜ್ಞರಲ್ಲಿ ಗುಣಗಳೆನಿಸುವುವು. ಅವುಗಳು ಗುಣಹೀನರನ್ನು ಆಶ್ರಯಿಸಿದರೆ ದೋಷಗಳಾಗಿ ಪರಿಣಮಿಸುವುವು. ನೀರು ನದಿಯಲ್ಲಿ ಬಿದ್ದರೆ ಪಾನೀಯವಾಗುವುದು. ಆದರೆ, ಅದೇ ನೀರು ಸಮುದ್ರಕ್ಕೆ ಸೇರಿದ ಬಳಿಕ ಕುಡಿಯಲಾಗುವುದೇ? ಇಲ್ಲ. ಅದರಿಂದ ನನ್ನ ಮಕ್ಕಳಿಗೆ ನೀತಿಶಾಸ್ತ್ರವನ್ನು ಕಲಿಸುವ ಭಾರವು ತಮಗೇ ಸೇರಿದುದು.'' ಈ ಪ್ರಕಾರವಾಗಿ ಅರಸನು ಹೇಳಿ, ಮನ್ನಿಸಿ, ತನ್ನ ಮಕ್ಕಳನ್ನು ವಿಷ್ಣುಶರ್ಮನಿಗೆ ಒಪ್ಪಿಸಿದನು.

ಇಂತಿದು ಪ್ರಸ್ತಾವನೆ

---

# ಹಿತೋಪದೇಶ

## ಮಿತ್ರಲಾಭ

ಬಳಿಕ ಆ ಪಂಡಿತನು ಅರಸುಮಕ್ಕಳನ್ನು ಕರೆದೊಯ್ದು ಅರಮನೆಯ ಉಪ್ಪರಿಗೆಯ ಮೇಲೆ ಕುಳ್ಳಿರಿಸಿ, ಪ್ರಸ್ತಾವದಿಂದ ಇಂತೆಂದನು:—

"ವಿದ್ಯೆಯೆಂಬುದು ಮನುಜನಿಗೆ ಮಿಗಿಲಾದ ಸೌಂದರ್ಯ; ರಹಸ್ಯವಾಗಿ ಬೈತಿಟ್ಟ ಹಣ; ದೇಶಾಂತರ ಸಂಚಾರದಲ್ಲಿ ಒತ್ತಾಸೆ ಮಾಡುವ ಆಪ್ತಮಿತ್ರ. ವಿದ್ಯೆಯಿಂದ ಕೀರ್ತಿಯು ದೊರೆಯುವುದು, ಸಭೆಯು ವಶವಾಗುವುದು. ವಿದ್ಯೆಯು ಉತ್ತಮವಾದ ಕಣ್ಣು; ಲೋಕದಲ್ಲಿ ವಿದ್ಯೆಯೇ ಬದುಕುವುದಕ್ಕೆ ಹಾದಿ. ವಿದ್ಯೆಯಿಲ್ಲದವನು ಪಶುಸಮಾನನು. ಗಂಗೆಯಂತಹ ನದಿಯಿಲ್ಲದ ದೇಶದಂತೆಯೂ, ಮಕ್ಕಳಿಲ್ಲದ ಮಡದಿಯಂತೆಯೂ, ದಕ್ಷಿಣೆಯಿಲ್ಲದ ಯಜ್ಞದಂತೆಯೂ ವಿದ್ಯೆಯಿಲ್ಲದ ಕುಲವು ವ್ಯರ್ಥ. ವಿದ್ಯಾವಂತರು ಕಾವ್ಯಶಾಸ್ತ್ರವಿನೋದಾನುಭವದಿಂದ ಕಾಲವನ್ನು ಕಳೆಯುವರು. ಮೂರ್ಖರು ಕುಡಿತ, ಜೂಜು ಮುಂತಾದ ದುರ್ವ್ಯಸನ (ದುರಭ್ಯಾಸ) ಗಳಿಂದಲೋ, ನಿದ್ದೆಯಿಂದಲೋ, ಅಥವಾ ಜಗಳದಿಂದಲೋ ಹೊತ್ತು ಕಳೆಯುವರು. ಈ ಕಾರಣದಿಂದ ಈಗ ನಿಮಗೆ ವಿನೋದಾರ್ಥವಾಗಿ 'ಕಾಗೆ ಮತ್ತು ಆಮೆ' ಮುಂತಾದುವುಗಳ ಕಥೆಯನ್ನು ಹೇಳುವೆನು." ಆ ಮಾತನ್ನು ಕೇಳಿ ರಾಜಪುತ್ರರು "ಆರ್ಯಾ! ಅಪ್ಪಣೆಯಾಗಲಿ" ಎಂದರು.

ಆಗ ವಿಷ್ಣುಶರ್ಮನು ನಾನೀಗ **ಮಿತ್ರಲಾಭ**ವನ್ನು ತಿಳಿಸುವೆನು. ವಿವೇಕಿಗಳಾದವರು ಸಾಧನಸಂಪತ್ತಿಯೂ ಹಣದ ಒತ್ತಾಸೆಯೂ ತಮಗೆ ಇಲ್ಲದಿದ್ದರೂ ಕೇವಲ ಸ್ನೇಹಿತರ ಸಹಾಯದಿಂದಲೇ ಕಾಗೆ, ಆಮೆ, ಇಲಿಗಳಂತೆ ತಮ್ಮ ಕಾರ್ಯಗಳನ್ನು ಬೇಗನೆ ಉಪಾಯಾಂತರದಿಂದ ಸಾಧಿಸಿಕೊಳ್ಳುವರು ಎನಲು, ರಾಜಪುತ್ರರು—"ಅದು ಹೇಗೆ?" ಎಂದು ಪ್ರಶ್ನೆ ಮಾಡಲಾಗಿ ವಿಷ್ಣುಶರ್ಮನು ಹೀಗೆ ಹೇಳ ತೊಡಗಿದನು:—

ಗೋದಾವರಿಯ ತೀರದಲ್ಲಿ ಒಂದು ದೊಡ್ಡ ಬೂರಗಮರವಿದ್ದಿತು. ಅದರಲ್ಲಿ ರಾತ್ರಿಯ ವೇಳೆ ನಾನಾ ದಿಕ್ಕುಗಳಿಂದಲೂ ಹಕ್ಕಿಗಳು ಬಂದು

ಸೇರುತ್ತಿದ್ದುವು. ಇಂತಿರುವಾಗ ಒಮ್ಮೆ ಮುಂಜಾನೆ ನೈದಿಲೆಯ ಗೆಳೆಯ ನಾದ ಚಂದಿರನು ಮುಳುಗುತ್ತಿರುವ ಸಮಯದಲ್ಲಿ ಲಘುಪತನಕವೆಂಬ ಕಾಗೆಯು ಎಚ್ಚತ್ತು, ಸುತ್ತಲೂ ನೋಡುವಲ್ಲಿ, ಯಮನ ಅವತಾರವೋ ಎಂಬಂತೆ ನಡೆತಂದ ಒಬ್ಬ ಬೇಡನನ್ನು ಕಂಡು ಈ ರೀತಿ ಯೋಚಿಸಿತು:- 'ಇಂದು ಬೆಳಗಾಗುತ್ತಲೇ ಅನಿಷ್ಟದರ್ಶನವಾಯಿತು. ಇದು ಯಾವ ಕೇಡನ್ನು ಸೂಚಿಸುವುದೋ ಕಾಣೆನು' ಎಂಬುದಾಗಿ ಚಿಂತಿಸುತ್ತ ಅವನ ಹಿಂದೆಯೇ ಹಾರಿ ಹೋಯಿತು.

(ಮೂರ್ಖನಿಗೆ ಬೆಳಗಾದರೆ ಸಾವಿರಾರು ಚಿಂತೆಗಳು. ನೂರಾರು ಹೆದರಿಕೆಗಳು. ವಿವೇಕಿಗೆ ಅದರ ಗೊಡವೆಯೇ ಇಲ್ಲ. ಅದರಿಂದ ವಿಷಯಾ ಸಕ್ತರಾದವರು ಅವಶ್ಯವಾಗಿಯೂ ಈ ರೀತಿ ಮಾಡಲೇ ಬೇಕು. ಪ್ರತಿ ದಿನವೂ ನಿದ್ದೆಯಿಂದ ಎಚ್ಚತ್ತ ಕೂಡಲೇ "ಈ ದಿನದಲ್ಲಿ ಸಾವು, ಬೇನೆ, ದುಃಖ-ಇವುಗಳಲ್ಲಿ ಯಾವ ವಿಪತ್ತು ತಮಗೆ ಸಂಭವಿಸುವುದೋ" ಎಂಬು ದಾಗಿ ಆಲೋಚಿಸಬೇಕು.)

ತರುವಾಯ ಆ ಬೇಡನು ಅಕ್ಕಿಯ ನುಚ್ಚನ್ನು ಎರಚಿ, ಬಲೆಯನ್ನು ಬೀಸಿ, ತಾನು ಮರೆಯಾಗಿದ್ದನು. ಆ ವೇಳೆಗೆ ಚಿತ್ರಗ್ರೀವನೆಂಬ ಕಪೋತ ರಾಜನು ಪರಿವಾರದೊಂದಿಗೆ ಆಕಾಶದಲ್ಲಿ ಹಾರಿ ಹೋಗುತ್ತ ಆ ಅಕ್ಕಿಯ ನುಚ್ಚನ್ನು ಕಂಡನು. ಅಷ್ಟರಲ್ಲಿ ಆ ಪಾರಿವಾಳಗಳು ಆ ನುಚ್ಚಿಗೆ ಆಸೆ ಪಟ್ಟುವು. ಆಗ ಚಿತ್ರಗ್ರೀವನು—'ಇದು ಜನಸಂಚಾರವಿಲ್ಲದ ಕಾಡು. ಇಲ್ಲಿ ಅಕ್ಕಿಯ ನುಚ್ಚು ಎಲ್ಲಿಂದ ಬರಬೇಕು? ಆದುದರಿಂದ ಚೆನ್ನಾಗಿ ಪರೀಕ್ಷಿಸಿ ನೋಡಿರಿ. ಈ ನುಚ್ಚಿನ ಆಸೆಯಿಂದ ನಮಗೆ ಮೇಲ್ಮೆ ಯುಂಟೆಂಬುದಾಗಿ ನಾನು ತಿಳಿಯಲಾರೆನು. ಒಂದು ವೇಳೆ ನಾವು ಇಲ್ಲಿ ಇಳಿಯ ಬಿದ್ದರೆ—ಕಡಗದ ಆಶೆಯಿಂದ ಏಳಲಾಗದ ಕೆಸರಿನಲ್ಲಿ ಹೂತುಹೋಗಿ, ಮುದಿಹುಲಿಯ ಬಾಯಿಗೆ ತುತ್ತಾದ ಪ್ರಯಾಣಿಕನಂತೆಯೇ ಆಗಬೇಕಾಗುವುದು' ಎಂದನು. ಆಗ ಅದರ ಪರಿ ಎಂತೆಂದು ಕಪೋತ ಗಳು ಪ್ರಶ್ನೆಮಾಡಲಾಗಿ ಚಿತ್ರಗ್ರೀವನು ಹೇಳತೊಡಗಿದನು.

## ೧ನೆಯ ಕಥೆ

ಒಮ್ಮೆ ನಾನು ತೆಂಕಣ ಅಡವಿಯಲ್ಲಿ ತಿರುಗುವಾಗ ಈ ದೃಶ್ಯವನ್ನು ಕಂಡೆನು. ಒಂದು ಮುದಿ ಹುಲಿಯು ಮಿಂದು, ಕೈಯಲ್ಲಿ ದರ್ಭೆಯನ್ನು

ಹಿಡಿದು, ಒಂದು ಮಡುವಿನ ಬದಿಯಲ್ಲಿ ಕುಳಿತುಕೊಂಡು ದಾರಿಗನೊಬ್ಬ ನನ್ನು ಕಂಡು—"ಎಲೈ ದಾರಿಗನೆ! ಇಗೋ ಈ ಚಿನ್ನದ ಕಡಗವನ್ನು ತೆಗೆದುಕೊಳ್ಳು" ಎಂದಿತು. ಇಷ್ಟರಲ್ಲಿ ಆಶಾಪೀಡಿತನಾದ ಆ ದಾರಿಗನು ಈ ಪರಿ ಯೋಚಿಸಿದನು—"ಇಂತಹ ಲಾಭವು ಅದೃಷ್ಟದಿಂದಲೇ ದೊರೆಯು ಬೇಕು. ಆದರೆ ಪ್ರಾಣಕ್ಕೆ ಸಂಚಕಾರವನ್ನು ಕೇಳುವ ಈ ಕಾರ್ಯದಲ್ಲಿ ಪ್ರವರ್ತಿಸುವುದು ತರವಲ್ಲ. ಏಕೆಂದರೆ ಅನಿಷ್ಟದಿಂದ ಇಷ್ಟವು ಕೈಗೂಡಿ ದರೂ ಅದೊಂದು ಮೇಲ್ಮೆಯಲ್ಲ. 'ಅಮೃತವೇ ಆದರೂ ವಿಷಮಿಶ್ರಿತವಾದರೆ ಅದು ಮೃತ್ಯುವನ್ನೇ ಒದವಿಸುವುದು. ಆದರೆ ಹಣವನ್ನು ಗಳಿಸುವ ಸಲು ವಾಗಿ ಮಾಡುವ ಪ್ರಯತ್ನಗಳೆಲ್ಲವೂ ಪ್ರಾಣಾಪಾಯವನ್ನೇ ಒಳಗೊಂಡಿರು ವುವು' ಎಂಬುದು ಹಿರಿಯರ ಮಾತು. ಮನುಷ್ಯನು ಸಂದೇಹಕ್ಕೆ ಸಿಲು ಕದೆ ಮೇಲ್ಮೆಯನ್ನು ಪಡೆಯಲಾರನು. ಈ ರೀತಿ ಸಂಶಯದಲ್ಲಿ ಮುಳು ಗಿದ ಮೇಲೆಯೂ ಬದುಕಿದನಾದರೆ ಸುಖವನ್ನು ಅನುಭವಿಸುವನು. ಆ ಕಾರಣ ಇದನ್ನು ಪರೀಕ್ಷಿಸುವೆನು." ಹೀಗೆ ಯೋಚಿಸಿ,—"ನಿನ್ನ ಕಡಗವು ಎಲ್ಲಿದೆ?" ಎಂದು ಹುಲಿಯನ್ನು ಕೇಳಿದನು. ಹುಲಿಯು ಮುಂಗಾ ಲನ್ನು ಚಾಚಿ ತೋರಿಸಿತು. ಆಗ ದಾರಿಗನು "ಘಾತುಕ ಸ್ವಭಾವ ವುಳ್ಳ ನಿನ್ನನ್ನು ನಂಬುವುದೆಂತು?" ಎಂದು ಪ್ರಶ್ನೆ ಮಾಡಲು, ಶಾರ್ದೂ ಲವು "ಕೇಳೈ ಪ್ರಯಾಣಿಕನೇ! ಮೊದಲು ನಾನು ವಯಸ್ಸಿನಲ್ಲಿದ್ದಾಗ ತುಂಬ ಕೆಟ್ಟ ನಡೆವಳಿಯಿಂದ ನಡೆದೆನು. ಮನುಜರನ್ನೂ ಆಕಳುಗಳನ್ನೂ ಲೆಕ್ಕವಿಲ್ಲದೆ ಕೊಂದೆನು. ಆ ಪಾಪದ ಪರಿಣಾಮದಿಂದ ನನ್ನ ಹೆಂಡಿರು ಮಕ್ಕಳೆಲ್ಲರೂ ಮಡಿದರು. ನನ್ನ ವಂಶವೇ ನಾಶವಾಯಿತು. ಇದಕ್ಕೆ ಪ್ರತೀಕಾರ ರೂಪವಾಗಿ ಅನೇಕ ದಾನಧರ್ಮಗಳನ್ನು ಮಾಡುವಂತೆ ಒಬ್ಬ ಮಹಾತ್ಮನು ನನಗೆ ಉಪದೇಶ ಮಾಡಿದನು. ಆತನ ಉಪದೇಶ ದಂತೆ ಈಗ ನಾನು ಅನುದಿನವೂ ಮಿಂದು, ದಾನ ಮಾಡುತ್ತಿರುವೆನು. ಇತ್ತ ನೋಡು! ಒಂದು ಉಗುರಾದರೂ ಇಲ್ಲ. ಹಲ್ಲುಗಳೆಲ್ಲ ಬಿದ್ದು ಹೋಗಿವೆ. ನನ್ನನ್ನು ಏತಕ್ಕೆ ನಂಬಬಾರದು?"

ಯಜ್ಞಗಳನ್ನು ಮಾಡುವಿಕೆ, ವೇದಗಳನ್ನು ಓದುವಿಕೆ, ದಾನ ಮಾಡುವಿಕೆ, ತಪಸ್ಸು, ದಿಟವನ್ನೇ ನುಡಿಯುವಿಕೆ, ಧೈರ್ಯಗುಂದದೆ ಇರು

ವಿಕೆ, ತಾಳ್ಮೆ, ಲೋಭವಿಲ್ಲದಿರುವಿಕೆ—ಎಂಬ ಈ ಎಂಟೂ ಧರ್ಮಾಚರಣೆಯ ಮಾರ್ಗಗಳು. ಇವುಗಳಲ್ಲಿ ಮೊದಲನೆಯ ನಾಲ್ಕನ್ನೂ ದಂಭದಿಂದಲಾದರೂ ಆಚರಿಸಬಹುದು. ಕಡೆಯ ನಾಲ್ಕು ಮಾತ್ರ ಮಹಾತ್ಮನಲ್ಲಿಯೇ ನೆಲೆಗೊಂಡಿರುವುವು.''

"ಈಗ ನಾನು ಲೋಭವನ್ನು ಸಂಪೂರ್ಣವಾಗಿ ತೊರೆದಿರುವೆನು. ನನ್ನ ಕೈಬಳೆಯನ್ನು ಯಾರಿಗಾದರೂ ಕೊಡಬೇಕೆಂದು ಯೋಚಿಸಿರುವೆನು. ಇಂತಿದ್ದರೂ 'ಹುಲಿಯು ಮನುಷ್ಯರನ್ನು ಕೊಲ್ಲುವುದು' ಎಂಬ ಲೋಕಾಪವಾದವು ಮಾತ್ರ ತಪ್ಪಲಿಲ್ಲ. ಏಕೆಂದರೆ-ಒಬ್ಬರ ಹಾದಿಯನ್ನೇ ಇನ್ನೊಬ್ಬರು ಅನುಸರಿಸುವುದು ಲೋಕದ ಸ್ವಭಾವ. ದಾದಿಯು ಧರ್ಮವನ್ನೇ ಉಪದೇಶಿಸಿದರೂ, ಅವಳ ಮಾತಿನಲ್ಲಿ ಜನಗಳಿಗೆ ನಂಬಿಕೆ ಇಲ್ಲ. ಬ್ರಾಹ್ಮಣನು ಗೋಹತ್ಯೆ ಮಾಡಿದವನಾದರೂ, ಅವನ ಮಾತನ್ನು ಪ್ರಮಾಣವನ್ನಾಗಿ ತಿಳಿದು ಅದರಂತೆಯೇ ನಡೆಯುವರು. ನಾನೂ ಧರ್ಮಶಾಸ್ತ್ರಗಳನ್ನು ಓದಿರುವೆನು, ಕೇಳು.''

"ಎಲೇ ಬ್ರಾಹ್ಮಣನೆ! ನಿರ್ಜಲ ಪ್ರದೇಶದಲ್ಲಿ ಸುರಿದ ಮಳೆಯಂತೆಯೂ, ಹಸಿದವನಿಗೆ ಇಟ್ಟ ಅನ್ನದಂತೆಯೂ, ಬಡವನಿಗೆ ಕೊಟ್ಟ ದಾನವು ಸಫಲವೆನಿಸುವುದು. ತನ್ನ ಪ್ರಾಣಗಳು ತನಗೆ ಹೇಗೆ ಪ್ರೇಮಾಸ್ಪದಗಳೋ, ಇತರ ಜಂತುಗಳಿಗೂ ಅವುಗಳ ಪ್ರಾಣಗಳೂ ಹಾಗೆಯೇ ಅಲ್ಲವೇ? ಆದುದರಿಂದ ಸಾಧುಗಳು ತಮ್ಮಂತೆಯೇ ಲೋಕವನ್ನೆಲ್ಲ ಭಾವಿಸಿ, ಇತರ ಪ್ರಾಣಿಗಳಲ್ಲಿಯೂ ದಯೆತೋರುವರು.''

"ಕೊಡುವಿಕೆ-ಇಲ್ಲವೆಂದು ಹೇಳುವಿಕೆ, ಸುಖ-ದುಃಖ, ಪ್ರೀತಿ-ದ್ವೇಷ, ಇವುಗಳ ವಿಷಯದಲ್ಲಿ ಮನುಷ್ಯನು ತನ್ನನ್ನೇ ಉದಾಹರಣೆಯಾಗಿಟ್ಟು ಕೊಂಡಲ್ಲದೆ ಅವನಿಗೆ ಅವುಗಳಲ್ಲಿ ನಂಬಿಕೆ ಹುಟ್ಟಲಾರದು. ಪರನಾರಿಯರನ್ನು ಜನನಿಯಂತೆಯೂ, ಹೆರರ ಸೊತ್ತನ್ನು ಮಣ್ಣಿನಂತೆಯೂ, ಮಿಕ್ಕ ಎಲ್ಲ ಪ್ರಾಣಿಗಳನ್ನು ತನ್ನಂತೆಯೂ ಯಾವನು ತಿಳಿಯುವನೋ, ಅವನೇ ತಿಳಿವಳಿಕೆಯುಳ್ಳವನು.''

"ಈಗ ನೀನಾದರೆ ಕಡು ಬಡವನು. ಈ ಕಾರಣದಿಂದಲೇ ನಾನು ಇದನ್ನು ನಿನಗೆ ದಾನಮಾಡಬೇಕೆಂದಿರುವೆನು. ಮಹಾತ್ಮರ ಅಭಿಪ್ರಾಯವೂ

ಇಂತೆಯೇ ಇರುವುದು. ಬಡವರನ್ನು ಸಲಹು. ಬಲ್ಲಿದರಿಗೆ ಹಣವನ್ನು ಕೊಡಬೇಡ. ಬೇನೆಯುಳ್ಳವನಿಗೆ ಔಷಧವು ಹಿತಕಾರಿಯಾಗುವುದು. ರೋಗವಿಲ್ಲದವನಿಗೆ ಔಷಧದಿಂದ ಫಲವೇನು? ಇನ್ನೂ ಹೇಳುವೆನು, ಕೇಳು. ದಾನಮಾಡಬೇಕೆಂಬ ಒಂದು ಅಭಿಪ್ರಾಯವನ್ನುಳಿದು, ಮನಸ್ಸಿನಲ್ಲಿ ಬೇರೆ ಯಾವ ಎಣಿಕೆಯೂ ಇಲ್ಲದೆ, ಯಾವ ಬಗೆಯ ಪ್ರತ್ಯುಪಕಾರವನ್ನೂ ನಿರೀಕ್ಷಿಸದೆ, ದೇಶ, ಕಾಲ, ಪಾತ್ರಗಳನ್ನರಿತು ದಾನಮಾಡುವುದು ಸಾತ್ವಿಕ ದಾನವೆನಿಸುವುದು. ಈ ಕಾರಣದಿಂದ, ನೀನು ಬೇಗನೆ ಈ ಕೆರೆಯಲ್ಲಿ ಮಿಂದು ಬಂದು, ಈ ಚಿನ್ನದ ಕಡಗವನ್ನು ತೆಗೆದುಕೊ" ಎಂದಿತು.

ಇಂತು ಹುಲಿಯ ಮಾತನ್ನು ಕೇಳಿದ ಆ ಬ್ರಾಹ್ಮಣನು ನಂಬಿಕೆಯಿಂದಲೂ ಅತ್ಯಾಶೆಯಿಂದಲೂ ಆ ಮಡುವಿನಲ್ಲಿ ಮಿಾಯಲು ಇಳಿದು ಕೆಸರಿನಲ್ಲಿ ಹೂತು ಬಿದ್ದು, ಅತ್ತಿತ್ತ ಅಲುಗಲಾರದೆ, ನಿಂತುಬಿಟ್ಟನು. ಆಗ ಹುಲಿಯು ಅವನನ್ನು ಕಂಡು ಇಂತೆಂದಿತು—"ಅಯ್ಯೋ, ಪಾಪ! ಎಂತಹ ಕಷ್ಟಕ್ಕೆ ಗುರಿಯಾದೆ! ನಾನು ನಿನ್ನನ್ನು ಮೇಲಕ್ಕೆ ಎತ್ತುವೆನು" ಎನ್ನುತ್ತ ಮೆಲ್ಲನೆ ಹತ್ತಿರ ಬಂದು ಹಿಡಿದುಕೊಂಡಿತು. ಆಗ ಆ ಭೂಸುರನು ಈ ರೀತಿ ಯೋಚಿಸಿದನು:—

"ದುರುಳನು ವೇದವನ್ನೇ ಓದಲಿ, ಧರ್ಮಶಾಸ್ತ್ರಗಳನ್ನೇ ಅಧ್ಯಯನ ಮಾಡಲಿ, ಹೇಗೂ ಅವನನ್ನು ನಂಬಬಾರದು. ಆಕಳ ಹಾಲು ಸಹಜವಾಗಿಯೇ ಹೇಗೆ ಮಧುರವಾಗಿದೆಯೋ, ಹಾಗೆಯೇ ಸ್ವಭಾವವು ಬಲವತ್ತರವಾಗಿರುವುದು. ಇಂದ್ರಿಯಗಳನ್ನೂ ಮನಸ್ಸನ್ನೂ ಗೆಲ್ಲಲಾರದವನ ನಡೆವಳಿಯು ಆನೆಯ ಸ್ನಾನಕ್ಕೆ ಸಮಾನವಾದುದು. ಸದ್ವರ್ತನವಿಲ್ಲದ ತಿಳಿವಳಿಕೆಯು ಕುರೂಪಿಗೆ ಸಿಂಗರಿಸಿದ ಆಭರಣಗಳಂತೆ ಕೇವಲ ಭಾರವಾದುದು."

"ಆಹಾ! ನಾನೆಂತಹ ಅಯುಕ್ತ ಕಾರ್ಯವನ್ನು ನಡೆಯಿಸಿದೆನು. ಈ ಹುಲಿಯ ಬೇಳುವೆಯ ಮಾತುಗಳನ್ನು ನಂಬಬಾರದಾಗಿದ್ದಿತು. ಹಿರಿಯರೂ ಅಂತೆಯೇ ಹೇಳಿರುವರು. ಹೊಳೆಯನ್ನೂ, ಆಯುಧ ಹಿಡಿದಿರುವವನನ್ನೂ, ಉಗುರುಳ್ಳ ಪ್ರಾಣಿಯನ್ನೂ, ಕೊಂಬುಗಳಿರುವ ಜಂತುವನ್ನೂ,

ಅರಸನನ್ನೂ ನಂಬಬಾರದು. ಏಕೆಂದರೆ—'ಮನುಷ್ಯನ ಯೋಗ್ಯತೆಯನ್ನು ಸ್ವಭಾವದಿಂದಲೇ ಕಂಡುಹಿಡಿಯಬೇಕಲ್ಲದೆ, ಇತರ ಗುಣಗಳಿಂದ ಫಲವಿಲ್ಲ.' ಸ್ವಭಾವವು ಮಿಕ್ಕ ಗುಣಗಳನ್ನೆಲ್ಲ ಮೆಟ್ಟಿ ನೆತ್ತಿಯ ಮೇಲೆ ಏರಿರುವುದು".

"ಗಗನಮಂಡಲದಲ್ಲಿ ಸಂಚರಿಸುವ, ಲೋಕದ ಪಾಪಗಳನ್ನು ನೀಗುವ, ಸಾವಿರ ಕಿರಣಗಳಿಂದೊಪ್ಪುವ, ಗ್ರಹಗಳ ನಡುವೆ ಸಂಚರಿಸತಕ್ಕ ಆ ಸೂರ್ಯನನ್ನೂ, ಚಂದ್ರನನ್ನೂ ವಿಧಿಯೋಗದಿಂದ ರಾಹುವು ನುಂಗುವುದಿಲ್ಲವೇ? ವಿಧಿಯ ಬರೆಹವನ್ನು ಅಳಿಸಲು ಯಾವನೂ ಸಮರ್ಥನಲ್ಲ." ಈ ರೀತಿ ಯೋಚಿಸುತ್ತಿರುವಷ್ಟರಲ್ಲಿಯೇ ಹುಲಿಯು ಬಂದು ಅವನನ್ನು ಹಿಡಿದು, ಕೊಂದು ತಿಂದಿತು. ಆದರಿಂದ ಚೆನ್ನಾಗಿ ಯೋಚಿಸದೆ ಯಾವ ಕೆಲಸವನ್ನೂ ಮಾಡಬಾರದು. ಏಕೆಂದರೆ—'ಚೆನ್ನಾಗಿ ಅರಗಿದ ಊಟ, ವಿವೇಕಿಯಾದ ಮಗ, ಯುಕ್ತವಾದ ಆಳ್ವಿಕೆಗೆ ಒಳಪಟ್ಟ ಮಡದಿ, ನಿರ್ವಂಚನೆಯಿಂದ ಸೇವೆಯನ್ನು ಕೈಕೊಂಡ ಅರಸು, ದೂರವಾಗಿ ಆಲೋಚಿಸಿ ನುಡಿದ ಮಾತು, ಮುಂದಿನ ಪರಿಣಾಮವನ್ನು ಯೋಚಿಸಿ ಮಾಡಿದ ಕೆಲಸ' ಇವುಗಳು ಎಷ್ಟು ದಿನಗಳಾದರೂ ವ್ಯತ್ಯಾಸವಾಗಲಾರವು ಎಂಬುದಾಗಿ ಕಪೋತರಾಜನಾದ ಚಿತ್ರಗ್ರೀವನು ಹೇಳಿದ ಮಾತುಗಳನ್ನೆಲ್ಲ ಕೇಳಿದ ಒಂದು ಪಾರಿವಾಳವು ಹೆಮ್ಮೆಯಿಂದ ಹೀಗೆಂದಿತು:—"ಛೀ! ಛೀ! ಇದೇನು? ಹೀಗೆ ಹೇಳುತ್ತಿರುವೆ? ಆಪತ್ಕಾಲದಲ್ಲಿ ಮಾತ್ರವೇ ಮುದುಕರ ಮಾತನ್ನು ಕೇಳಬೇಕು. ಎಲ್ಲ ಕೆಲಸಗಳಲ್ಲಿಯೂ ಹಿರಿಯರ ಮಾತಿನಂತೆಯೇ ನಡೆಯಬೇಕಾದರೆ, ಊಟದ ವಿಷಯದಲ್ಲಿಯೂ ಸ್ವಾತಂತ್ರ್ಯವು ಬೇಡವೇ? ಲೋಕದಲ್ಲಿ ತಿಂಡಿ ತೀರ್ಥ ಮುಂತಾದುವುಗಳೆಲ್ಲವೂ ಸಂಶಯಗಳಿಂದಲೇ ತುಂಬಿ ಹೋಗಿವೆ. ಹೀಗಾದರೆ ಹೇಗೆ ನಡೆಯಬೇಕೋ? ಹೇಗೆ ಬದುಕಬೇಕೋ? ತಿಳಿಯದು. ಅಸೂಯಾಪರನೂ, ಅತ್ಯಾಶೆಯುಳ್ಳವನೂ, ತೃಪ್ತಿಯಿಲ್ಲದವನೂ, ಕೋಪಸ್ವಭಾವದವನೂ, ಸಂದೇಹಪ್ರಕೃತಿಯವನೂ, ಹೆರರ ಆಸ್ತಿಯಿಂದ ಬದುಕತಕ್ಕವನೂ ಈ ಆರುಮಂದಿಯೂ ಲೋಕದಲ್ಲಿ ದುಃಖಭಾಗಿಗಳೆನಿಸುವರು."

ಈ ಮಾತುಗಳನ್ನು ಕೇಳಿದೊಡನೆಯೇ ಮಿಕ್ಕ ಪಾರಿವಾಳಗಳೂ ಅದರೊಂದಿಗೆ ಸೇರಿ, ಆ ಅಕ್ಕಿಯ ನುಚ್ಚನ್ನು ತಿನ್ನುವ ಸಲುವಾಗಿ ಇಳಿಯಬಿದ್ದುವು.

ಶಾಸ್ತ್ರಪಾರಂಗತರೂ, ವಿವೇಕಸಂಪನ್ನರೂ, ಇತರರ ಸಂದೇಹಗಳನ್ನು ಹೋಗಲಾಡಿಸತಕ್ಕವರೂ ಕೂಡ ಲೋಭಕ್ಕೆ ಮರುಳಾಗಿ ಈ ರೀತಿ ಕಷ್ಟಪಡುವರು. ಲೋಭದಿಂದ ಕೋಪವೂ, ಕಾಮವೂ, ಮೋಹವೂ ಉಂಟಾಗುತ್ತವೆ. ಲೋಭವೇ ಪ್ರಾಣಿಗಳ ಸರ್ವನಾಶಕ್ಕೂ ಕಾರಣವು. ಪಾಪವೂ ಲೋಭದಿಂದಲೇ ಹುಟ್ಟುವುದು. ಚಿನ್ನದ ಜಿಂಕೆಯು ಜನ್ಮವೇ ಅಸಂಭವವಾದುದು. ಆದರೂ ಶ್ರೀರಾಮನು ಅದಕ್ಕೆ ಮರುಳಾದನು. ಸಾಮಾನ್ಯವಾಗಿ ವಿನಾಶಕಾಲವು ಒದವಿತೆಂದರೆ ಎಂತಹ ಮನುಷ್ಯನಾದರೂ ಬುದ್ಧಿಶಕ್ತಿಯನ್ನು ಹೋಗಲಾಡಿಸಿಕೊಳ್ಳುವನು.

ಬಳಿಕ ಆ ಹಕ್ಕಿಗಳೆಲ್ಲವೂ ಬಲೆಯಲ್ಲಿ ಸಿಕ್ಕುಬಿದ್ದುವು. ತರುವಾಯ ಮಿಕ್ಕ ಹಕ್ಕಿಗಳು ಯಾವ ಪಾರಿವಾಳದ ಮಾತಿನ ಮೇಲೆ ತಾವು ಇಳಿಯಬಿದ್ದುವೋ ಆ ಹಕ್ಕಿಯನ್ನು ನಿಂದಿಸತೊಡಗಿದುವು. ಇದೂ ಯುಕ್ತವೇ? ಎಂದೆಂದಿಗೂ ಗುಂಪಿನಲ್ಲಿ ಮುಂದಾಳಾಗಿ ಹೋಗಬಾರದು. ಕಾರ್ಯವು ಕೈಗೂಡಿತೆಂದರೆ ಫಲದಲ್ಲಿ ಎಲ್ಲರೂ ಸಮಭಾಗಿಗಳಾಗುವರು. ಒಂದು ವೇಳೆ ಕೆಲಸ ಕೆಟ್ಟಿತೆಂದರೆ ಮುಂದಾಳನ್ನು ಕೊಂದುಬಿಡುವರು. ಇಂದ್ರಿಯಗಳನ್ನು ಬಿಗಿಹಿಡಿಯದಿರುವುದು ಆಪತ್ತಿಗೆ ದಾರಿ. ಅವುಗಳನ್ನು ಗೆದ್ದರೆ ಸಂಪತ್ತಿಗೆ ಮಾರ್ಗವಾಗುವುದು. ಇವೆರಡರಲ್ಲಿ ಮನುಷ್ಯನು ಯಾವ ಮಾರ್ಗವನ್ನಾದರೂ ಅನುಸರಿಸಬಹುದು.

ಈ ರೀತಿ ಆ ಒಂದು ಬಡ ಹಕ್ಕಿಯನ್ನು ಮಿಕ್ಕ ಪಾರಿವಾಳಗಳೆಲ್ಲವೂ ನಿಂದಿಸುವುದನ್ನು ಕಂಡು ಕಪೋತರಾಜನಾದ ಚಿತ್ರಗ್ರೀವನು ಈ ರೀತಿ ಹೇಳತೊಡಗಿದನು—“ಇದು ಅದರ ಅಪರಾಧವಲ್ಲ. ನೀವೇಕೆ ಅದನ್ನು ವ್ಯರ್ಥವಾಗಿ ನಿಂದಿಸುವಿರಿ? ಆಪತ್ತು ಬರುವಾಗ ಆಪ್ತರೂ ಅದಕ್ಕೆ ಕಾರಣಭೂತರಾಗಿ ಕಾಣುವರು. ಹಾಲು ಕರೆವಾಗ ಕರುವನ್ನು ಆಕಳ ಮುಂಗಾಲಿಗೆ ಬಿಗಿಯುವುದಿಲ್ಲವೇ? ಎಡರಿನಿಂದ ಬಿಡಿಸತಕ್ಕವನೇ ಬಂಧುವಲ್ಲದೆ, ಅಂಜಿದವರನ್ನು ಮತ್ತಷ್ಟು ಹೆದರಿಸಿ, ಕಾಪಾಡುವುದಕ್ಕೆ ಕೈಸಾಗದೆ ಅವರನ್ನು ಹಳಿಯುವುದರಲ್ಲಿಯೇ ಪಾಂಡಿತ್ಯವನ್ನು ಪ್ರಕಟಗೊಳಿಸತಕ್ಕವನು ಎಂದಿಗೂ ಬಂಧುವೆನಿಸಲಾರನು. ಆಪತ್ಕಾಲದಲ್ಲಿ ಹೆದರಿ ಕುಳಿತುಕೊಳ್ಳುವುದು ಹೇಡಿಯ ಲಕ್ಷಣ. ಈ ಕಾರಣದಿಂದ ಈಗ ನಾವೆಲ್ಲರೂ ಎದೆಗುಂದದೆ

ಇದಕ್ಕೆ ತಕ್ಕ ಪ್ರತೀಕಾರವನ್ನು ಮಾಡಬೇಕು. ಏಕೆಂದರೆ-'ವಿಪತ್ತು ಬಂದಾಗ ಧೈರ್ಯವನ್ನು ತಳೆಯಬೇಕು. ಸಂಪತ್ತಿನಲ್ಲಿ ತಾಳ್ಮೆಯಿಂದಿರಬೇಕು. ಸಭೆಯಲ್ಲಿ ಮಾತಿನ ಚಮತ್ಕಾರವನ್ನು ಹೊರಪಡಿಸಬೇಕು. ಯುದ್ಧದಲ್ಲಿ ಪರಾಕ್ರಮವನ್ನು ತೋರಬೇಕು. ಕೀರ್ತಿಯಲ್ಲಿ ಆಶೆಯನ್ನಿಡಬೇಕು. ಶಾಸ್ತ್ರ ವಿಷಯದಲ್ಲಿ ಯಾವಾಗಲೂ ಚಿಂತೆಯಿರಬೇಕು. ಇವು ಮಹಾತ್ಮರಿಗೆ ಸಹಜವಾದ ಲಕ್ಷಣಗಳು."

ಸಂಪತ್ತಿನಲ್ಲಿ ಹಿಗ್ಗದೆಯೂ, ವಿಪತ್ತಿನಲ್ಲಿ ಮರುಗದೆಯೂ, ರಣರಂಗದಲ್ಲಿ ಹೆದರದೆಯೂ ಇರುವಂತಹ, ಲೋಕತ್ರಯತಿಲಕನೆನಿಸಿದ ಕುವರನನ್ನು ಜನನಿಯು ಹೆರುವುದು ಅತಿ ವಿರಳ. ಮತ್ತು, ಐಶ್ವರ್ಯವನ್ನು ಬಯಸತಕ್ಕವನು ನಿದ್ದೆ, ಸೋಮಾರಿತನ, ಹೆದರಿಕೆ, ಸಿಟ್ಟು, ಆಲಸ್ಯ, ಕಾಲಹರಣ-ಈ ಆರು ದೋಷಗಳಿಗೂ ಎಡೆಕೊಡಬಾರದು. ಈಗಲಾದರೂ ನಾವೆಲ್ಲರೂ ಒಟ್ಟುಗೂಡಿ ಈ ಬಲೆಯನ್ನು ಎತ್ತಿಕೊಂಡು ಹಾರಿಹೋಗುವ!"

"ಸಣ್ಣ ವಸ್ತುಗಳಾದರೂ ಒಟ್ಟುಗೂಡಿದರೆ ಕಾರ್ಯವನ್ನು ನೆರವೇರಿಸಬಹುದು. ಹಗ್ಗವನ್ನು ಹುಲ್ಲಿನ ಪಾಸೆಗಳಿಂದಲೇ ಹೆಣೆಯುವರು. ಆದರೆ ಅದೇ ಹಗ್ಗದಿಂದ ದೊಡ್ಡ ದೊಡ್ಡ ಸೊಕ್ಕಾನೆಗಳನ್ನೂ ಕಟ್ಟುವುದಿಲ್ಲವೇ? ಅತ್ಯಲ್ಪವಾಗಿದ್ದರೂ ತಮ್ಮ ಜಾತಿಯವರೊಂದಿಗೆ ಸೇರಿರುವುದು ಮನುಷ್ಯರಿಗೆ ಕಾರ್ಯಸಾಧನೆಗೆ ಮುಖ್ಯವಾದ ಉಪಾಯ. ಬತ್ತವನ್ನು ಕುಟ್ಟಿದ ಬಳಿಕ ಹೊಟ್ಟು ಇಲ್ಲದ ಮೇಲೆ ಅಕ್ಕಿಯು ಮೊಳೆಯಲಾರದಷ್ಟೆ!"

ಹೀಗೆ ಯೋಚಿಸಿ ಆ ಹಕ್ಕಿಗಳೆಲ್ಲವೂ ಒಟ್ಟುಗೂಡಿ, ಬಲೆಯನ್ನು ಎತ್ತಿಕೊಂಡು ಹಾರಿಹೋದುವು. ಆಗ ಬೇಟೆಗಾರನು ಬಹಳ ದೂರದ ವರೆಗೂ ಅವುಗಳನ್ನು ಹಿಂಬಾಲಿಸಿ ಓಡುತ್ತ ಹೀಗೆ ಯೋಚಿಸಿದನು. "ಇವುಗಳೆಲ್ಲವೂ ಈಗ ಐಕಮತ್ಯದಿಂದ ಬಲೆಯನ್ನು ಎತ್ತಿಕೊಂಡು ಹಾರುತ್ತಿವೆ. ಒಮ್ಮೆ ನೆಲಕ್ಕೆ ಬಿದ್ದಕೂಡಲೇ ನನ್ನ ಕೈಸೇರುವುವು."

ತರುವಾಯ ಆ ಹಕ್ಕಿಗಳೆಲ್ಲವೂ ಕಣ್ಣಿಗೆ ಕಾಣದಷ್ಟು ದೂರವಾಗಿ ಹೋದುವು. ಆಗ ಬೇಡನು ಹಿಂದಿರುಗಿದನು. ಇದನ್ನು ಕಂಡು ಪಾರಿವಾಳಗಳು—"ಈಗ ಏನು ಮಾಡಬೇಕು" ಎಂದು ಕೇಳಿದುವು. ಆಗ ಚಿತ್ರಗ್ರೀವನು ಇಂತೆಂದನು—"ತಾಯಿ, ತಂದೆ, ಗೆಳೆಯರೆಂಬ ಈ ಮೂರು ಮಂದಿ

ಮಾತ್ರವೇ ನಿಜವಾದ ಮಿತ್ರರು. ಇವರ ಪ್ರೀತಿಗೆ ಎಂದಿಗೂ ಕೊರತೆಯಿಲ್ಲ. ಮಿಕ್ಕವರೆಲ್ಲರೂ ಕಾರ್ಯವನ್ನು ಅನುಸರಿಸಿ ಹಿತಬುದ್ಧಿಯಿಂದ ನಡೆಯ ತಕ್ಕವರು.

"ಈ ಕಾರಣದಿಂದ, ನನ್ನ ಮಿತ್ರನಾದ ಹಿರಣ್ಯಕನೆಂಬ ಇಲಿಗಳ ಅರಸನ ಬಳಿಗೆ ಹೋಗೋಣ! ಆತನು ಗಂಡಕೀನದಿಯ ತೀರದಲ್ಲಿರುವ ಚಿತ್ರವನ ದಲ್ಲಿ ಬಿಡಾರ ಮಾಡಿಕೊಂಡಿರುವನು. ಆತನು ತನ್ನ ಹಲ್ಲುಗಳ ಸಹಾಯ ದಿಂದ ನಮ್ಮ ಕಟ್ಟುಗಳನ್ನು ಕಡಿದು ಬಿಡಿಸಬಲ್ಲನು." ಈ ರೀತಿ ಯೋಚಿಸಿ ಹಕ್ಕಿಗಳೆಲ್ಲವೂ ಹಿರಣ್ಯಕನ ಬಿಲದ ಬಳಿಗೆ ಬಂದುವು. ಹಿರಣ್ಯಕನಾದರೋ ಯಾವಾಗಲೂ ಅಪಾಯಶಂಕೆಯಿಂದ ನೂರಾರು ತೂತುಗಳುಳ್ಳ ಬಿಲವನ್ನು ಮಾಡಿ ಅದರಲ್ಲಿ ವಾಸಮಾಡುತ್ತಿದ್ದನು. ಆಗ ಈ ಪಾರಿವಾಳಗಳೆಲ್ಲವೂ ಒಮ್ಮೆಯೇ ವೇಗವಾಗಿ ಬಲೆಯೊಂದಿಗೆ ನೆಲಕ್ಕೆ ಇಳಿಯ ಬಿದ್ದುವು. ಈ ಸಪ್ಪಳದಿಂದ ಹಿರಣ್ಯಕನು ಹೆದರಿ ಸದ್ದಿಲ್ಲದೆ ಒಂದು ಮೂಲೆಯಲ್ಲಿ ಅಡಗಿ ಕೊಂಡನು. ಆಗ ಚಿತ್ರಗ್ರೀವನು—"ಗೆಳೆಯಾ, ಹಿರಣ್ಯಕಾ! ಏನಿದು? ನಮ್ಮೊಡನೆ ಮಾತನಾಡುವುದಿಲ್ಲವೇ?" ಎನಲಾಗಿ ಹಿರಣ್ಯಕನು ಕೊರಳದನಿ ಯನ್ನು ಕೇಳಿ ಗುರ್ತಿಸಿ, ಸಂಭ್ರಮದಿಂದ ಹೊರಬಂದು—"ಆಹಾ! ನಾನೇ ಭಾಗ್ಯಶಾಲಿಯು! ನನ್ನ ಪ್ರಿಯ ಮಿತ್ರನಾದ ಚಿತ್ರಗ್ರೀವನು ದಯೆಮಾಡಿಸಿರು ವನು. ಯಾವನು ಯಾವಾಗಲೂ ಮಿತ್ರರೊಂದಿಗೆ ವಾಸಮಾಡುತ್ತಲೂ, ಸರಸಸಲ್ಲಾಪಗಳನ್ನಾಡುತ್ತಲೂ ವಿನೋದದಿಂದ ಕಾಲಕಳೆಯುವನೋ ಅವನಿ ಗಿಂತಲೂ ಪುಣ್ಯಶಾಲಿಯು ಲೋಕದಲ್ಲಿ ಮತ್ತೊಬ್ಬನಿಲ್ಲ" ಎಂದಿತು.

ಬಳಿಕ ಹಿರಣ್ಯಕನು, ಬಲೆಯಲ್ಲಿ ಸಿಲುಕಿದ ಆ ಹಕ್ಕಿಗಳನ್ನು ಕಂಡು, ಆಶ್ಚರ್ಯದಿಂದ ಕ್ಷಣಕಾಲ ಸುಮ್ಮನಿದ್ದು ಬಳಿಕ—"ಗೆಳೆಯಾ! ಏನಿದು?" ಎಂಬುದಾಗಿ ಪ್ರಶ್ನೆ ಮಾಡಲು, ಚಿತ್ರಗ್ರೀವನು–"ಏನೆನ್ನಲಿ! ನಮ್ಮ ಪೂರ್ವ ಜನ್ಮದ ಕರ್ಮಫಲವು. ಯಾವುದರ ದೆಸೆಯಿಂದ, ಏತರಿಂದ, ಯಾವ ವಿಧವಾಗಿ, ಯಾವಾಗ, ಎಷ್ಟರ ಮಟ್ಟಿಗೆ, ಎಲ್ಲಿ, ಯಾವ ಪ್ರಾಣಿಯು ಮಾಡಿದ ಒಳ್ಳೆಯ ಅಥವಾ ಕೆಟ್ಟ ಕೆಲಸವಿರುವುದೋ ಅದರ ದೆಸೆಯಿಂದಲೇ, ಅದರಿಂದಲೇ, ಆ ವಿಧವಾಗಿಯೇ, ಆ ಕಾಲದಲ್ಲಿಯೇ, ಅಷ್ಟರ ಮಟ್ಟಿಗೇ, ಅಲ್ಲಿಯೇ ಆತನು ವಿಧಿನಿಯಮದಂತೆ ಕರ್ಮಫಲವನ್ನು ಪಡೆಯುವನು.

ರೋಗ, ಶೋಕ, ಸಂತಾಪ, ಬಂಧನ, ವ್ಯಸನಗಳೆಂಬಿವು, ಪ್ರಾಣಿಯು ತನ್ನ ಜೀವಿತದಲ್ಲಿ ಬಳೆಯಿಸಿದ ಪಾಪವೃಕ್ಷದ ಫಲಗಳಾಗಿವೆ'' ಎಂದಿತು.

ಈ ಮಾತನ್ನು ಕೇಳಿದೊಡನೆಯೇ ಹಿರಣ್ಯಕನು ಚಿತ್ರಗ್ರೀವನ ಬಲೆಯ ಕಟ್ಟುಗಳನ್ನು ಕತ್ತರಿಸಲು ಬಳಿಸಾರ್ದನು. ಆಗ ಚಿತ್ರಗ್ರೀವನು-''ಮಿತ್ರಾ! ಇದು ಧರ್ಮವಲ್ಲ. ಹಾಗೆ ಮಾಡಲಾಗದು. ನನ್ನ ಆಶ್ರಿತರಾದ ಇವರ ಕುಣಿಕೆಗಳನ್ನು ಮುಂಚಿತವಾಗಿ ಕತ್ತರಿಸು. ಆ ಮೇಲೆ ನನ್ನ ಕುಣಿಕೆಯನ್ನು ಕತ್ತರಿಸುವೆಯಂತೆ'' ಎಂದನು. ''ನನ್ನ ಶಕ್ತಿಯು ಬಹಳ ಸ್ವಲ್ಪ. ನನ್ನ ಹಲ್ಲುಗಳಂತೂ ತುಂಬ ಮೃದುವಾದುವು. ಇವರ ಕಟ್ಟುಗಳನ್ನೆಲ್ಲ ಕಡಿಯಲು ನನ್ನ ಹಲ್ಲುಗಳಿಗೆ ಬಲ ಸಾಲದು. ನನ್ನ ಹಲ್ಲುಗಳು ಗಟ್ಟಿಯಾಗಿರುವಾಗಲೇ ಮೊತ್ತಮೊದಲು ನಿನ್ನ ಬಂಧನವನ್ನು ಕತ್ತರಿಸುವೆನು. ಬಳಿಕ ಶಕ್ತಿಯಿರುವ ವರೆಗೆ ಇವರ ಕಟ್ಟುಗಳನ್ನು ಕಡಿದು ಬಿಡಿಸುವೆನು'' ಎಂಬುದಾಗಿ ಹಿರಣ್ಯಕನು ಉತ್ತರ ಕೊಟ್ಟನು. ಆ ಮಾತಿಗೆ ಚಿತ್ರಗ್ರೀವನು—''ಅದು ಸರಿ, ಆದರೆ ನಿನಗೆ ಶಕ್ತಿಯಿರುವ ವರೆಗೆ ಇವರ ಬಂಧನಗಳನ್ನೇ ಮೊದಲು ಕತ್ತರಿಸು'' ಎಂದನು. ಮೂಷಕರಾಜನು ಈ ಮಾತನ್ನು ಕೇಳಿ—''ಇಂತು ತನ್ನ ಪ್ರಾಣವನ್ನು ಅಸಡ್ಡೆ ಮಾಡಿ, ಆಶ್ರಿತರನ್ನು ಸಲಹುವುದು ನೀತಿಸಮ್ಮತವಲ್ಲವಷ್ಟೆ! ಆಪತ್ಕಾಲದಲ್ಲಿ ಉಪಯೋಗವಾಗುವುದಕ್ಕಾಗಿ ಹಣವನ್ನು ಗಳಿಸಿ ಕಾದಿಡಬೇಕು. ಧನಕ್ಕಿಂತ ಅತಿಶಯವಾಗಿ ಕೈಹಿಡಿದ ಮಡದಿಯನ್ನು ಸಲಹಬೇಕು. ಹೆಂಡತಿಗಿಂತ ಮಿಗಿಲಾಗಿ ತನ್ನನ್ನು ಯಾವಾಗಲೂ ಕಾಪಾಡಿಕೊಳ್ಳಬೇಕು. ಪ್ರಾಣದೊಂದಿಗೆ ಬದುಕಿದ್ದರಲ್ಲವೇ ಧರ್ಮಾರ್ಥ ಕಾಮುಗಳ ಗೊಡವೆ? ಅಂತಹ ಪ್ರಾಣಗಳನ್ನೇ ನೀಗುವುದೆಂದರೆ ಸರ್ವಸ್ವವನ್ನು ಹಾಳುಮಾಡಿಕೊಂಡಂತೆಯೇ ಸರಿ. ಅವುಗಳನ್ನು ಹೇಗಾದರೂ ಉಳಿಸಿಕೊಂಡರೆ ಎಲ್ಲವನ್ನು ಉಳಿಸಿಕೊಂಡಂತೆಯೇ ಭಾವಿಸಬೇಕು'' ಎಂಬುದಾಗಿ ಪ್ರತ್ಯುತ್ತರ ಕೊಟ್ಟನು.

ಈ ಮಾತನ್ನು ಕೇಳಿ ಪಾರಿವಾಳಗಳ ಅರಸು ಹೀಗೆಂದನು-''ಗೆಳೆಯಾ, ಮೂಷಕರಾಜಾ! ನೀತಿರಹಸ್ಯವು ನೀನು ಹೇಳಿದಂತೆಯೇ ದಿಟ. ಅದರೂ ನಾನು ನನ್ನ ಆಶ್ರಿತರ ಕಷ್ಟವನ್ನು ನೋಡಿ ಸ್ವಲ್ಪವೂ ಸಹಿಸಲಾರೆನು. ಆದುದರಿಂದಲೇ ಹೀಗೆ ಹೇಳಿದೆನು. ಏಕೆಂದರೆ, 'ಬುದ್ಧಿವಂತನು ಹೆರರ ಸಲುವಾಗಿ ಹಣ

ವನ್ನೂ ಹರಣವನ್ನೂ ಬಿಡಬೇಕು. ಹುಟ್ಟಿದವನಿಗೆ ಎಂದಿಗಾದರೂ ಸಾವು ತಪ್ಪಿದುದಲ್ಲ ಎಂದ ಮೇಲೆ ಈ ತನುಧನಗಳನ್ನು ಒಳ್ಳೆಯ ಕೆಲಸದಲ್ಲಿ ವಿನಿಯೋಗಗೊಳಿಸುವುದು ಶ್ಲಾಘ್ಯವಲ್ಲವೇ? ಇದಲ್ಲದೆ ಜಾತಿಯಲ್ಲಿಯೂ, ಹಣದಲ್ಲಿಯೂ, ಬಲದಲ್ಲಿಯೂ ಇವರೆಲ್ಲರು ನನಗೆ ಸಮಾನರಾಗಿಯೇ ಇರುವರು. ನಾನು ಅರಸನಾದ ಮಾತ್ರಕ್ಕೆ ಅತಿಶಯವೇನು? ನನ್ನ ಅರಸುತನದ ಫಲವು ಇವರಿಗೆ ದೊರೆಯುವುದಾದರೂ ಎಂದಿಗೆ? ನೀನೇ ಯೋಚಿಸು! ಮಿತ್ರನೆ! ಅಸ್ಥಿ, ಮಾಂಸ, ಮೂತ್ರ, ಪುರೀಷಗಳಿಂದಲೇ ನಿರ್ಮಿತವಾಗಿರುವ ಈ ನನ್ನ ದೇಹದಲ್ಲಿ ಅಭಿಮಾನವನ್ನು ತೊರೆದು ನನ್ನ ಕೀರ್ತಿಯನ್ನು ಉಳಿಸು."

"ಇವರಿಗೆ ನನ್ನಿಂದ ಇಂದಿನ ವರೆಗೆ ಯಾವ ವಿಧವಾದ ಸಂಬಳ ಸಾರಿಗೆಗಳಿಲ್ಲದಿದ್ದರೂ, ಇವರು ಮಾತ್ರ ಅರೆಗಳಿಗೆಯಾದರೂ ನನ್ನನ್ನು ಎಡೆಬಿಡದಿರುವರು. ಈ ಕಾರಣದಿಂದ ನನ್ನ ಪ್ರಾಣವನ್ನಾದರೂ ವೆಚ್ಚಗೊಳಿಸಿ ಆಶ್ರಿತರಾದ ಇವರನ್ನು ಬದುಕಿಸು. ಅಶಾಶ್ವತವೂ, ಅಶುದ್ಧವೂ ಎನಿಸಿದ ಈ ದೇಹದಿಂದ ಶಾಶ್ವತವೂ ಪರಿಶುದ್ಧವೂ ಎನಿಸಿದ ಕೀರ್ತಿಯು ದೊರೆಯುವುದೆಂದರೆ ಮತ್ತಾವುದು ತಾನೇ ಬೇಕಾಗಿರುವುದು? ಶರೀರಕ್ಕೂ ಗುಣಗಳಿಗೂ ಬಹಳ ತಾರತಮ್ಯವಿರುವುದು. ಶರೀರವು ಒಂದು ಕ್ಷಣ ಕಾಲದಲ್ಲಿ ಅಳಿಯುವುದು. ಗುಣಗಳಾದರೋ, ಕಲ್ಪಾಂತದ ವರೆಗೂ ನೆಲೆಗೊಂಡಿರತಕ್ಕುವು."

ಈ ಮಾತನ್ನು ಕೇಳಿದೊಡನೆ ಹಿರಣ್ಯಕನ ಅಂತರಂಗದಲ್ಲಿ ಆನಂದವು ಉಕ್ಕಿಬಂದಿತು. ಮೈಯೆಲ್ಲವೂ ನಿಲುಗೂದಲಿಂದ ತುಂಬಿತು. ಆನಂದ ಬಾಷ್ಪದಿಂದ ಕುತ್ತಿಗೆಯ ನರಗಳು ಬಿಗಿದುವು. ಆಗ ಚಿತ್ರಗ್ರೀವನನ್ನು ಕುರಿತು—"ಭಲೆ ಗೆಳೆಯಾ! ಭಲೆ! ಈ ಬಗೆಯ ಆಶ್ರಿತಾಭಿಮಾನದಿಂದೊಪ್ಪುವ ನೀನು ಮೂಲೋಕವನ್ನು ಆಳಬಲ್ಲವನೇ ಸರಿ" ಎನ್ನುತ್ತ ಒಂದೊಂದಾಗಿ ಆ ಎಲ್ಲ ಹಕ್ಕಿಗಳ ಕಟ್ಟುಗಳನ್ನು ಕಡಿದನು. ತರುವಾಯ ಆ ಹಕ್ಕಿಗಳನ್ನೆಲ್ಲ ಅಕ್ಕರೆಯಿಂದ ಸತ್ಕರಿಸಿ ಇಂತೆಂದನು:—

"ಮಿತ್ರ, ಚಿತ್ರಗ್ರೀವಾ! ಇಂತು ಬಲೆಗೆ ಸಿಲುಕಿದುದಕ್ಕಾಗಿ ಮರುಗಬೇಡ. ಇದು ನಿನ್ನ ಅಪರಾಧವಲ್ಲ. ಇದಕ್ಕಾಗಿ ನಿನ್ನನ್ನು ಅಂತರಂಗದಲ್ಲಿಯೂ ಹಳಿಯಬೇಡ. ಏಕೆಂದರೆ—'ಯಾವ ಹಕ್ಕಿಯು ನೂರಾರು ಗಾವುದ ದೂರದಲ್ಲಿ ಅಂತರಿಕ್ಷದಲ್ಲಿ ಹರಿದಾಡುತ್ತ, ಆಹಾರ ಪದಾರ್ಥ

ವನ್ನು ಕಂಡುಹಿಡಿಯುವುದೋ, ಅದೇ ಪಕ್ಷಿಯು, ಆಪತ್ಕಾಲವು ಒದವಿದಾಗ ಬೀಸಿದ ಬಲೆಯ ನೂಲನ್ನು ಕಾಣಲಾರದು'.

"ಸೂರ್ಯಚಂದ್ರರಿಗೆ ರಾಹುಕೇತುಗಳ ಬಾಧೆ, ಆನೆ, ಹಾವು, ಹಕ್ಕಿಗಳಿಗೆ ಬಂಧನ, ಬುದ್ಧಿಶಾಲಿಗಳಿಗೆ ಬಡತನ ಇವುಗಳನ್ನು ಪರ್ಯಾಲೋಚಿಸಲಾಗಿ ಆ ದೈವಶಕ್ತಿಯು ಇನ್ನೆಷ್ಟು ಬಲವತ್ತರವಾದುದೋ ತಿಳಿದವರಾರು? ಆಕಾಶದಲ್ಲಿ ಸ್ವತಂತ್ರವಾಗಿ ಹಾರಾಡುವ ಹಕ್ಕಿಗಳು ವಿಪತ್ತಿಗೆ ಗುರಿಯಾಗುವುವು. ಕಡಲಿನ ಆಳವಾದ ನೀರಿನಲ್ಲಿ ಸಂಚರಿಸುವ ಮೀನುಗಳನ್ನು ಗಾಳದಿಂದ ಹಿಡಿಯುವರು. ಇವುಗಳ ಅಪರಾಧವಾದರೂ ಯಾವುದು? ಒಳ್ಳೆಯ ನಡೆವಳಿಯಿಂದ ಫಲವೇನು? ಆಪತ್ಕಾಲವು ಒದವಿತೆಂದರೆ ಮೃತ್ಯುವು ಎಷ್ಟು ದೂರದಲ್ಲಿದ್ದರೂ ಬೆನ್ನು ಬಿಡುವುದಿಲ್ಲ. ಆಗ ಮೃತ್ಯುವು, ಇದೇ ತಕ್ಕ ವೇಳೆ ಎಂದರಿತು ನೀಳವಾದ ತನ್ನ ಎರಡು ಕೈಗಳನ್ನು ಚಾಚಿ ಎಷ್ಟೇ ದೂರದಲ್ಲಿದ್ದರೂ ಹಿಡಿಯುವುದು" ಹೀಗೆ ಹಿರಣ್ಯಕನು ತಿಳಿಯ ಹೇಳಿ, ಅತಿಥಿಸತ್ಕಾರದಿಂದ ಮನ್ನಿಸಿ, ಬಿಗಿದು ಅಪ್ಪಿ, ಬೀಳ್ಕೊಟ್ಟನು. ಬಳಿಕ ಚಿತ್ರಗ್ರೀವನು ತನ್ನ ಪರಿವಾರದೊಂದಿಗೆ ಇಷ್ಟಾನುಸಾರವಾಗಿ ಹೊರಟನು.

ಆದುದರಿಂದ ಅವರು, ಇವರು ಎನ್ನದೆ ಎಂತಹವರನ್ನಾದರೂ ನೂರಾರು ಮಂದಿ ಗೆಳೆಯರನ್ನು ಸಂಪಾದಿಸಬೇಕು. ಗೆಳೆಯನಾದ ಇಲಿರಾಯನಿಂದ ಪಾರಿವಾಳಗಳು ಬಲೆಯ ಕಟ್ಟುಗಳನ್ನು ಬಿಡಿಸಿಕೊಂಡು ಪಾರಾದುವು, ಕಂಡಿರಾ!'

ಇಂತು ಚಿತ್ರಗ್ರೀವನು ತೆರಳಿದ ಕೂಡಲೇ ಇಲಿರಾಯನೂ ತನ್ನ ಬಿಲದೊಳಗೆ ತೂರಿದನು. ಇದೆಲ್ಲವನ್ನು ನೋಡುತ್ತ ದೂರವಾಗಿದ್ದ ಕಾಗೆಯು, ಅಚ್ಚರಿಗೊಂಡು ಬಿಲದ ಬಳಿಸಾರ್ದು, ಈ ರೀತಿ ಕೂಗಿ ಹೇಳಿತು. "ಎಲೆ ಇಲಿರಾಯನೆ, ಹಿರಣ್ಯಕನೆ! ನೀನೀಗ ಧನ್ಯ! ಇದೇ ಕಾರಣದಿಂದ ನಾನೂ ನಿನ್ನ ಗೆಳೆಯತನವನ್ನು ಬಯಸಿ ಬಂದಿರುವೆನು. ನಿನ್ನ ಮೈತ್ರಿಯಿಂದ ನನ್ನನ್ನೂ ಅನುಗ್ರಹಿಸು." ಈ ಮಾತನ್ನು ಕೇಳಿದ ಹಿರಣ್ಯಕನು ಹೊರಗೆ ಬಾರದೆ ತನ್ನ ಬಿಲದಿಂದಲೇ—"ನೀನು ಯಾರು?" ಎಂದು ಕೇಳಿದನು.

"ನಾನು ಕಾಗೆ. ನನ್ನನ್ನು ಲಘುಪತನಕವೆನ್ನುವರು" ಎಂದು ಕಾಗೆಯು ಉತ್ತರ ಕೊಟ್ಟಿತು; ಅದನ್ನು ಕೇಳಿ ಹಿರಣ್ಯಕನು ನಗುತ್ತ—"ನಿನ್ನೊಡನೆ

ಸ್ನೇಹವೇ? ಅದೆಂತಹುದು? ಏಕೆಂದರೆ 'ಯಾವುದು ಎಲ್ಲಿ ಸೇರತಕ್ಕುದೋ ಅದನ್ನು ಅದರೊಂದಿಗೆ ಸೇರಿಸತಕ್ಕುದು ಬುದ್ಧಿಯ ಲಕ್ಷಣ. ನಾನು ಆಹಾರ. ನೀನು ತಿನ್ನತಕ್ಕವನು. ನಿನಗೂ ನನಗೂ ಸ್ನೇಹವು ಕೂಡಿಬರುವುದಾದರೂ ಹೇಗೆ? ಒಂದು ವೇಳೆ ಭಕ್ಷ್ಯಕ್ಕೂ ಭಕ್ಷಕನಿಗೂ ಸ್ನೇಹವು ಕಲೆತರೂ ಅದು ವಿಪತ್ತಿಗೆನೇ ಕಾರಣವಾಗುವುದು. ನರಿಯ ಮೂಲಕ ಬಲೆಗೆ ಸಿಲುಕಿದ್ದ ಹುಲ್ಲೆಯನ್ನು ಕಾಗೆಯು ಕಾಪಾಡಿತಲ್ಲವೇ?" ಎಂದಿತು. ಆಗಲಾ ಕಾಗೆಯು "ಅದು ಹೇಗೆ? ಅದನ್ನು ತಿಳುಹಬೇಕು" ಎಂದು ಪ್ರಶ್ನೆ ಮಾಡಲಾಗಿ ಇಲಿ ರಾಯನು ಹೇಳತೊಡಗಿದನು.

## ೨ನೆಯ ಕಥೆ

ಮಗಧದೇಶದಲ್ಲಿ ಚಂಪಕವತಿಯೆಂಬ ಗೊಂಡಾರಣ್ಯವಿರುವುದು. ಅಲ್ಲಿ ಬಹು ಕಾಲದಿಂದಲೂ ಒಂದು ಕಾಗೆಯೂ ಜಿಂಕೆಯೂ ಸ್ನೇಹದಿಂದ ವಾಸ ವಾಗಿದ್ದುವು. ಆ ಹುಲ್ಲೆಯು ಸ್ವೇಚ್ಛೆಯಾಗಿ ಸಂಚರಿಸುತ್ತ ಸಂತೋಷದಿಂದ ಉಬ್ಬಿದ್ದಿತು. ಇದನ್ನು ಒಂದು ನರಿಯು ಕಂಡು—"ಆಹಾ! ಇದು ಎಷ್ಟು ಕೋಮಲವಾಗಿರುವುದು! ಇದರ ಮಾಂಸವು ನನಗೆ ತಿನ್ನುವುದಕ್ಕೆ ದೊರೆ ಯುವ ಬಗೆ ಯಾವುದು? ಹುಂ! ಇರಲಿ. ನಂಬಿಕೆಯಿಂದಲೇ ಈ ಕಾರ್ಯ ವನ್ನು ಸಾಧಿಸಬೇಕು" ಎಂಬುದಾಗಿ ಯೋಚಿಸಿ, ಆ ಹರಿಣದ ಬಳಿಸಾರ್ದು— "ಮಿತ್ರನೇ! ಕುಶಲವಷ್ಟೆ?" ಎಂದಿತು. ಜಿಂಕೆಯು—"ನೀನು ಯಾರು?" ಎಂದು ಪ್ರಶ್ನೆ ಮಾಡಿತು. "ನಾನು ನರಿ. ನನ್ನ ಹೆಸರು ಕ್ಷುದ್ರಬುದ್ಧಿ. ಈ ಕಾಡಿನಲ್ಲಿ ನಂಟರಿಷ್ಟರಿಲ್ಲದೆ ಸತ್ತ ಹೆಣದಂತಿರುವೆನು. ಈಗ ಗೆಳೆಯನಾದ ನಿನ್ನ ದರ್ಶನಲಾಭದಿಂದ ಬಂಧುಗಳನ್ನು ಪಡೆದಂತೆ ಭಾವಿಸಿ, ಮರಳಿ ಜೀವ ಲೋಕವನ್ನು ಹೊಕ್ಕಿರುವೆನು. ಇನ್ನು ಮುಂದೆ ನಾನು ನಿನ್ನ ಗೆಳೆಯ ನಾಗಿರುವೆನು" ಎಂದು ನರಿಯು ಉತ್ತರ ಕೊಟ್ಟಿತು. ಜಿಂಕೆಯೂ ಈ ಮಾತಿಗೆ ಒಡಂಬಟ್ಟಿತು. ಬಳಿಕ ಕಿರಣಮಾಲಿಯಾದ ಸೂರ್ಯನು ಪಡುವಣ ಕಡಲನ್ನು ಹೊಕ್ಕ ಕೂಡಲೇ ಅವೆರಡೂ ಜಿಂಕೆಯ ಬಿಡಾರವನ್ನು ಸೇರಿದುವು. ಅಲ್ಲಿಯೇ ಸಂಪಿಗೆಯ ಮರದ ಕೊಂಬೆಯ ಮೇಲೆ ಗೂಡು ಕಟ್ಟಿ ವಾಸ ವಾಗಿದ್ದ, ಹುಲ್ಲೆಯ ಆಪ್ತಮಿತ್ರನಾದ ಸುಬುದ್ಧಿಯೆಂಬ ಕಾಕರಾಜನು ಇವರಿಬ್ಬರನ್ನೂ ನೋಡಿ, ಹರಿಣವನ್ನು ಕುರಿತು—"ಮಿತ್ರಾ! ಇವನಾರು

ಎರಡನೆಯವನು?'' ಎಂದಿತು. ಅದಕ್ಕೆ ಹುಲ್ಲೆಯು—''ಇದು ನರಿ. ನನ್ನ ಸ್ನೇಹವನ್ನು ಬಯಸಿ ಬಂದಿರುವುದು'' ಎಂದು ಉತ್ತರ ಕೊಟ್ಟಿತು.

ಆಗ ಕಾಗೆಯು—''ಗೆಳೆಯಾ! ಇದು ತರವಲ್ಲ. ಹಿಂದುಮುಂದು ಕಾಣದವನೊಂದಿಗೆ ಸ್ನೇಹಮಾಡುವುದು ಸರಿಯಲ್ಲ. ನಿನ್ನ ಈ ಕೆಲಸವು ನನಗೆ ಸ್ವಲ್ಪವೂ ತೃಪ್ತಿಕರವಾಗಿಲ್ಲ. ಇದು ತರವಲ್ಲವೆಂದು ಹಿರಿಯರೂ ಹೇಳಿರುವರು. ಕುಲಶೀಲಗಳನ್ನರಿಯದೆ ಯಾವನಿಗೂ ಆಸರೆ ಕೊಡ ಬಾರದು. ಬೆಕ್ಕಿನ ಅಪರಾಧದಿಂದ ಜರದ್ಗವನೆಂಬ ಹದ್ದು ಮೃತ್ಯುವಿಗೆ ತುತ್ತಾಯಿತು. ಇದನ್ನರಿಯೆಯಾ?'' ಎಂದಿತು. ಆ ಕಥೆಯನ್ನು ವಿವರಿಸು ವಂತೆ ನರಿಯೂ ಜಿಂಕೆಯೂ ಕೇಳಲಾಗಿ ಕಾಗೆಯು ಹೇಳತೊಡಗಿತು.

## ಉಪಕಥೆ ೧

ಗಂಗೆಯ ಒಡ್ಡಿನಲ್ಲಿ ಗೃಧ್ರಕೂಟವೆಂಬ ಬೆಟ್ಟದಲ್ಲಿ ದೊಡ್ಡದಾದ ಒಂದು ಬನ್ನಿಯ ಮರವಿದ್ದಿತು. ಆ ಮರದ ಪೊಟರೆಯಲ್ಲಿ ವಯೋಧರ್ಮದಿಂದ ಉಗುರುಗಳೆಲ್ಲವೂ ಉದುರಿ, ಕಣ್ಣು ಕಾಣದ, ಒಂದು ಮುದಿಹದ್ದು ವಾಸ ವಾಗಿದ್ದಿತು. ಆ ಮರದ ಮೇಲೆ ಗೂಡು ಕಟ್ಟಿಕೊಂಡಿದ್ದ ಮಿಕ್ಕ ಹಕ್ಕಿ ಗಳೆಲ್ಲವೂ ಆ ಮುದಿಹದ್ದಿನ ಅವಸ್ಥೆಯನ್ನು ಕಂಡು, ಮರುಕಗೊಂಡು, ಅದರ ಜೀವನಾರ್ಥವಾಗಿ ತಂತಮ್ಮ ಆಹಾರದಿಂದ ಸ್ವಲ್ಪ ಸ್ವಲ್ಪ ಭಾಗವನ್ನು ಕೊಡು ತ್ತಿದ್ದುವು. ಈ ಮೂಲಕ ಆ ಗೃಧ್ರವು ಜೀವಿಸುತ್ತಿದ್ದಿತು.

ಇಂತಿರಲು ಒಂದು ದಿನ ದೀರ್ಘಕರ್ಣವೆಂಬ ಮಾರ್ಜಾಲವು ಹಕ್ಕಿಯ ಮರಿಗಳನ್ನು ತಿನ್ನುವ ಸಲುವಾಗಿ ಅಲ್ಲಿಗೆ ಬಂದಿತು. ಅದು ಬರುವುದನ್ನು ಕಂಡು ಮರಿಗಳೆಲ್ಲವೂ ಹೆದರಿ ಚಿಲಿಪಿಲಿ ಗುಟ್ಟುತ್ತ, ಗೋಳಾಡತೊಡಗಿದುವು. ಆಗ ಮುದಿಹದ್ದು—''ಯಾರು ಬರುತ್ತಿರುವವರು?'' ಎಂಬುದಾಗಿ ಗದರಿ ಸಿತು. ದೀರ್ಘಕರ್ಣವು ತತ್ತರಿಸಿ ನಡುಗುತ್ತ ಹೀಗೆ ಯೋಚಿಸಿತು: ''ಅಯ್ಯೋ ಕೆಟ್ಟೆನು! ಏಕೆಂದರೆ—'ಭಯವು ಎಂದಿನ ವರೆಗೆ ಬರಲಿಲ್ಲವೋ ಅದು ವರೆಗೂ ಅದಕ್ಕೆ ಹೆದರಬೇಕು. ಅಂಜಿಕೆಯು ತಲೆದೋರಿದ ಕೂಡಲೇ ಮನುಷ್ಯನು ಆ ಸಮಯಕ್ಕೆ ತಕ್ಕಂತೆ ನಡೆಯಬೇಕು.'

''ಈಗ ಇಷ್ಟು ಹತ್ತಿರ ಬಂದಿರುವೆನಾದುದರಿಂದ ಓಡಿಹೋಗಲು ಸಾಧ್ಯ ವಿಲ್ಲ. ದೈವದ ಇಚ್ಛೆಯಿದ್ದಂತಾಗಲಿ! ಭರವಸೆಯನ್ನುಂಟುಮಾಡಿ ಧೈರ್ಯ

ದಿಂದ ಇದರ ಬಳಿಸೇರುವೆನು'' ಎಂದು ಯೋಚಿಸಿ, ಅದರ ಬಳಿಸಾರ್ದು— "ಆರ್ಯ! ನಮಸ್ಕಾರ'' ಎಂದಿತು. "ನೀನು ಯಾರು?'' ಎಂದು ಗೃಧ್ರವು ಪ್ರಶ್ನೆಮಾಡಲಾಗಿ, ಅದು–"ನಾನು ಬೆಕ್ಕು'' ಎಂದೆನಲು–"ತೊಲಗು, ಬೇಗನೆ ದೂರ ತೊಲಗು, ತೊಲಗದಿದ್ದರೆ ನನ್ನಿಂದ ಸಾಯುವೆ'' ಎಂಬುದಾಗಿ ಹದ್ದು ಬೆದರಿಸಿತು. ಆಗ ಬಿಡಾಲವು—"ಅಯ್ಯಾ! ಮೊದಲು ನನ್ನ ಬಿನ್ನಹವನ್ನು ಲಾಲಿಸು. ಬಳಿಕ ನನ್ನನ್ನು ಕೊಲ್ಲುವುದು ಯುಕ್ತವೆಂದು ತೋರಿದರೆ, ಆಗ ಕೊಲ್ಲುವೆಯಂತೆ! ಏಕೆಂದರೆ, ಯಾರೂ ಜಾತಿಮಾತ್ರ ದಿಂದಲೇ ಯಾರನ್ನೂ ಗೌರವಿಸುವುದಿಲ್ಲ. ಕೊಲ್ಲುವುದೂ ಇಲ್ಲ. ನಡೆ ವಳಿಯನ್ನು ತಿಳಿದ ಬಳಿಕ ವಧ್ಯನೋ ಪೂಜನೀಯನೋ ಎಂಬುದು ವಿದಿತ ವಾಗುವುದು'' ಎಂದು ಉತ್ತರ ಕೊಟ್ಟಿತು.

ಆಗ ಹದ್ದು—"ನೀನೇಕೆ ಇಲ್ಲಿಗೆ ಬಂದೆ? ಹೇಳು'' ಎನಲಾಗಿ ಬೆಕ್ಕು ಇಂತೆಂದಿತು. "ನಾನಿಲ್ಲಿ ಗಂಗೆಯ ಮಡುವಿನಲ್ಲಿ ನಿತ್ಯವೂ ಮಿಂದು, ಮಾಂಸಾಹಾರವನ್ನು ಪರಿತ್ಯಜಿಸಿ, ಬ್ರಹ್ಮಚರ್ಯವ್ರತವನ್ನು ಕೈಕೊಂಡು ಚಾಂದ್ರಾಯಣವನ್ನು ನಡೆಯಿಸುತ್ತಿರುವೆನು. ನೀವು ಧರ್ಮತತ್ಪರರೆಂತಲೂ, ವಿಶ್ವಾಸಪಾತ್ರರೆಂತಲೂ ಈ ಹಕ್ಕಿಗಳೆಲ್ಲವೂ ಯಾವಾಗಲೂ ನನ್ನ ಮುಂದೆ ನಿಮ್ಮನ್ನು ಅನೇಕ ವಿಧವಾಗಿ ಕೊಂಡಾಡುತ್ತಿರುವುವು. ಅದರಿಂದ ವಿದ್ಯಾ ವೃದ್ಧರೂ ವಯೋವೃದ್ಧರೂ ಆಗಿರುವ ನಿಮ್ಮ ಮೂಲಕ ಧರ್ಮರಹಸ್ಯಗಳನ್ನು ಕೇಳಿ ತಿಳಿಯಲು ನಿಮ್ಮಲ್ಲಿಗೆ ಬಂದಿರುವೆನು. ತಾವು ಇಂತಹ ಧರ್ಮಜ್ಞ ರಾಗಿರುತ್ತ ಅತಿಥಿಯಾದ ನನ್ನನ್ನು ಕೊಲ್ಲಲೆಳಸುವುದು ಧರ್ಮವೇ? ಇನ್ನು ಗೃಹಸ್ಥಧರ್ಮವನ್ನಾದರೂ ಬಲ್ಲಿರಾ? ಕೇಳಿರಿ:—

"ಮನೆಗೆ ಬಂದವನು ಹಗೆಯೇ ಆಗಿದ್ದರೂ, ತಕ್ಕ ರೀತಿಯಿಂದ ಅತಿಥಿ ಸತ್ಕಾರವನ್ನು ಸಲ್ಲಿಸಬೇಕು. ಮರವು ತನ್ನನ್ನು ಕಡಿಯುತಕ್ಕವನಿಗೆ ಕೂಡ ನೆರಳನ್ನೇ ಕೊಡುವುದಲ್ಲದೆ ಹಿಂಜರಿಯುವುದಿಲ್ಲವಷ್ಟೆ! ಒಂದು ವೇಳೆ ಧನ ಸಂಪತ್ತಿಯಿಲ್ಲದಿದ್ದರೂ, ಒಳ್ಳೆಯ ಮಾತಿನಿಂದಲಾದರೂ ಅತಿಥಿಯನ್ನು ಪೂಜಿಸ ತಕ್ಕುದು ಶಾಸ್ತ್ರಸಮ್ಮತವಾಗಿರುವುದು. ಏಕೆಂದರೆ–'ಕುಳಿತುಕೊಳ್ಳುವುದಕ್ಕೆ ಹುಲ್ಲು, ಅಥವಾ ನೆಲ, ಕುಡಿಯುವುದಕ್ಕೆ ಒಂದಿಷ್ಟು ನೀರು, ಸವಿಮಾತು' ಈ ನಾಲ್ಕೂ ಸಜ್ಜನರ ಮನೆಯಲ್ಲಿ ಎಂದಿಗೂ ಕಡಿಮೆಯಾಗಲಾರವು.

ಮನೆಗೆ ಬಂದವನು ಹುಡುಗನಾಗಲಿ, ಇಲ್ಲವೆ ತರುಣನಾಗಲಿ ಅವನನ್ನು ಮನ್ನಿಸಲೇ ಬೇಕು. ಅಭ್ಯಾಗತನು ಎಲ್ಲರಿಗೂ ಗುರುಸಮಾನನಲ್ಲವೇ? ಗುಣಹೀನರಲ್ಲಿ ಕೂಡ ದಯೆಯನ್ನು ತೋರುವುದು ಸಾಧುಗಳ ಸ್ವಭಾವ ವಾಗಿರುವುದು. ಚಂದ್ರನು ತನ್ನ ಬೆಳ್ದಿಂಗಳನ್ನು ಪ್ರಸರಗೊಳಿಸುವಾಗ 'ಇದು ಹೀನನ ಮನೆ' ಎಂದು ಹಿಂಜರಿಯುವುದಿಲ್ಲವಷ್ಟೆ! ಬ್ರಾಹ್ಮಣರಿಗೆ ಅಗ್ನಿ ದೇವನು ಗುರುವು. ಮಿಕ್ಕ ವರ್ಣದವರಿಗೆ ಬ್ರಾಹ್ಮಣನು ಗುರುವು. ಸ್ತ್ರೀಯ ರಿಗೆ ಪತಿಯೇ ಗುರುವು. ಅಭ್ಯಾಗತನು ಎಲ್ಲರಿಗೂ ಗುರುವು. ಅತಿಥಿಯು ಆಶಾಭಂಗವನ್ನು ಪಡೆದು ಹಿಂದಿರುಗುವಾಗ ಮನೆಯ ಯಜಮಾನನ ಪುಣ್ಯ ವನ್ನೆಲ್ಲಾ ಕಸುಗೊಂಡು, ತನ್ನ ಪಾಪದ ಭಾರವನ್ನು ಅವನ ಮೇಲೆ ಉರುಳಿಸಿ ಬಿಟ್ಟು ತೆರಳುವನು. ಉತ್ತಮ ಕುಲದವರ ಮನೆಗೆ ಹೀನ ಜಾತಿಯವನೇ ಬಂದರೂ ಅವನನ್ನು ಸತ್ಕರಿಸಲೇ ಬೇಕು. ಅತಿಥಿಯು ಸಕಲ ದೇವತಾ ಸ್ವರೂಪಿಯಲ್ಲವೇ?''

ಈ ರೀತಿಯಾಗಿ ಬೆಕ್ಕು ಹೇಳಿದ ಮಾತುಗಳನ್ನು ಕೇಳಿ, ಹದ್ದು— ''ಬೆಕ್ಕಿಗೆ ಮಾಂಸದ ಆಸೆ ಹೆಚ್ಚು. ಇಲ್ಲಿ ಹಕ್ಕಿಯ ಮರಿಗಳಿವೆ. ಅದಕ್ಕಾಗಿಯೇ ನಾನೂ ಹೀಗೆ ಹೇಳಿದೆನು'' ಎಂದಿತು. ಆ ಮಾತನ್ನು ಕೇಳಿ ಮಾರ್ಜಾಲವು ನೆಲವನ್ನು ಮುಟ್ಟಿ, ಶಿವ ಶಿವಾ! ಎಂದು ಕಿವಿಗಳನ್ನು ಮುಚ್ಚಿಕೊಂಡು ಮರಳಿ ಇಂತೆಂದಿತು:—''ನಾನು ಧರ್ಮಶಾಸ್ತ್ರರಹಸ್ಯಗಳನ್ನೆಲ್ಲ ಕೇಳಿ, ವೈರಾಗ್ಯ ಪಡೆದು ಅತ್ಯಂತ ಕಠಿನಗಳಾದ ಚಾಂದ್ರಾಯಣಾದಿ ವ್ರತಗಳನ್ನು ಕೈಕೊಂಡು ಕಾಲಹರಣ ಮಾಡುತ್ತಿರುವೆನು. ಏಕೆಂದರೆ, ಅನೇಕ ವಿಷಯಗಳಲ್ಲಿ ಧರ್ಮ ಶಾಸ್ತ್ರಗಳು ಭಿನ್ನಾಭಿಪ್ರಾಯವುಳ್ಳವುಗಳಾಗಿದ್ದರೂ, ಅಹಿಂಸೆಯು ಉತ್ತಮ ವಾದ ಧರ್ಮ ಎಂಬ ಈ ವಿಷಯದಲ್ಲಿ ಮಾತ್ರ ಎಲ್ಲೆಲ್ಲಿಯೂ ಐಕಮತ್ಯವೇ ಕಂಡುಬರುವುದು. ಇತ್ತ ಕೇಳಿರಿ. ಹಿಂಸೆಯನ್ನು ಸಂಪೂರ್ಣವಾಗಿ ತೊರೆದು, ಎಲ್ಲವನ್ನೂ ತಾಳ್ಮೆಯಿಂದ ಸಹಿಸುತ್ತ, ಎಲ್ಲರಿಗೂ ಆಶ್ರಯವನ್ನು ಕೊಡತಕ್ಕ ವರು ಮಾತ್ರವೇ ಸ್ವರ್ಗಕ್ಕೆ ತೆರಳುವರು. ಧರ್ಮವು ಮಾತ್ರವೇ ಪ್ರಾಣಿಗಳಿಗೆ ಮಿತ್ರ. ಅದು ಸತ್ತವನೊಡನೆಯೂ ತೆರಳುವುದು. ಮಿಕ್ಕವುಗಳೆಲ್ಲ ದೇಹ ದೊಂದಿಗೆನೇ ಅಳಿಯುವುವು.''

''ಒಂದು ಪ್ರಾಣಿಯು ಮತ್ತೊಂದು ಪ್ರಾಣಿಯ ಮಾಂಸವನ್ನು ತಿನ್ನು ವಾಗ ಅವೆರಡರ ಭೇದವನ್ನೂ ನೋಡಬೇಕು. ಒಂದು ಪ್ರಾಣಿಯು ಕ್ಷಣ

ಕಾಲ ತೃಪ್ತಿಯನ್ನು ಪಡೆಯುವುದು; ಆದರೆ ಇನ್ನೊಂದು, ತನ್ನ ಪ್ರಾಣವನ್ನೇ ನೀಗಿಕೊಳ್ಳಬೇಕಾಗುವುದು. 'ಸಾಯಬೇಕಲ್ಲಾ' ಎಂಬುದಾಗಿ ತನಗೆ ಉಂಟಾಗುವ ದುಃಖವನ್ನು ಊಹಿಸಿದರೆ, ಅದೇ ನಿಮಿತ್ತದಿಂದಲೇ ಇತರರನ್ನು ಕಾಪಾಡುವುದಕ್ಕೂ ಸಾಧ್ಯವಾಗುವುದು. ಹೀಗಿರುತ್ತ ಅಡವಿಯಲ್ಲಿ ಯಾರೊಬ್ಬರ ಪ್ರಯತ್ನವೂ ಇಲ್ಲದೆ, ತಾನಾಗಿ ಬೆಳೆದಿರುವ ಸೊಪ್ಪಿನಿಂದ ಯಾವರೂ ತುಂಬಬಹುದಾಗಿರುವ ಈ ಹಾಳು ಹೊಟ್ಟೆಯ ಸಲುವಾಗಿ, ಯಾವನಾದರೂ ಮಹಾಪಾತಕವನ್ನು ಕಟ್ಟಿಕೊಳ್ಳುವನೇ?''

ಈ ರೀತಿ ಆ ಬೆಕ್ಕು ಬೇಳುವೆಯ ಮಾತುಗಳನ್ನಾಡಿ, ಹದ್ದಿಗೆ ತನ್ನಲ್ಲಿ ನಂಬಿಕೆಯನ್ನು ಹುಟ್ಟಿಸಿ, ಹದ್ದಿನೊಂದಿಗೆ ಆ ಮರದ ಪೊಟರೆಯಲ್ಲಿಯೇ ವಾಸಮಾಡತೊಡಗಿತು. ಕೆಲವು ದಿನಗಳ ತರುವಾಯ ಆ ಹಕ್ಕಿಯ ಮರಿಗಳನ್ನು ಹಿಡಿತಂದು, ಮರದ ಪೊಟರೆಯಲ್ಲಿಯೇ ಅನುದಿನವೂ ತಿನ್ನತೊಡಗಿತು. ಮರಿಗಳನ್ನು ನೀಗಿಕೊಂಡ ಪಕ್ಷಿಗಳು ದುಃಖದಿಂದ ಗೋಳಾಡುತ್ತ ಅಲ್ಲಲ್ಲಿ ಹುಡುಕತೊಡಗಿದುವು. ಇದರ ಸುಳಿವನ್ನು ತಿಳಿದ ಬೆಕ್ಕು ಉಪಾಯದಿಂದ ಹೊರಬಿದ್ದು ಓಡಿಹೋಯಿತು. ಬಳಿಕ ಪಕ್ಷಿಗಳು ಕ್ರಮವಾಗಿ ಹುಡುಕುತ್ತ, ಮರದ ಕೋಟರದಲ್ಲಿ ತಮ್ಮ ಮರಿಗಳ ಎಲುಬುಗಳನ್ನು ಕಂಡುವು. ಆ ತರುವಾಯ—''ಈ ಜರದ್ಗವನೇ ನಮ್ಮ ಮರಿಗಳನ್ನು ತಿಂದವನು'' ಎಂದು ನಿಶ್ಚಯಿಸಿ, ಹಕ್ಕಿಗಳೆಲ್ಲವೂ ಒಟ್ಟುಗೂಡಿ ಆ ಮುದಿ ಹದ್ದನ್ನು ಕೊಂದು ಹಾಕಿದುವು. ಅದರಿಂದಲೇ 'ಕುಲಶೀಲಗಳನ್ನು ತಿಳಿಯದವನಿಗೆ ಆಸರೆ ಕೊಡಬಾರದು' ಎಂಬುದಾಗಿ ಹೇಳಿದೆನು'' ಎಂದು ಕಾಗೆಯು ಆ ನರಿಗೂ ಹುಲ್ಲೆಗೂ ಹೇಳಿತು.

ಈ ಕಥೆಯನ್ನು ಕೇಳಿ ನರಿಯು ಸಿಟ್ಟಿನಿಂದ—''ನೀನು ಜಿಂಕೆಯನ್ನು ಮೊತ್ತಮೊದಲು ನೋಡಿದಾಗ ನಿನ್ನ ಕುಲಶೀಲಗಳೂ ಅದಕ್ಕೆ ತಿಳಿಯದೆ ಇದ್ದುವಲ್ಲವೇ? ಹಾಗಾದರೆ ಇದಕ್ಕೆ ನಿನ್ನೊಡನೆ ಸ್ನೇಹವು ದಿನದಿನಕ್ಕೂ ಹೇಗೆ ಬೆಳೆಯುತ್ತ ಬಂದಿತು? ವಿದ್ವಾಂಸರೇ ಇಲ್ಲದಿರುವ ಸ್ಥಳದಲ್ಲಿ ಅಲ್ಪಮತಿಯೂ ಶ್ಲಾಘನೀಯನೆನಿಸುವನು. ಮರಗಳೇ ಇಲ್ಲದಿರುವ ಪ್ರದೇಶದಲ್ಲಿ ಔಡಲ ಗಿಡವೇ ಕಲ್ಪವೃಕ್ಷದಂತೆ ಕಾಣುವುದು. ಇವನು ನನ್ನವನೋ ಅಥವಾ ಪರಕೀಯನೋ ಎಂಬ ವಿಚಾರವು ಅಲ್ಪಮನಸ್ಕರಿಗೆ ಮಾತ್ರವೇ ತಲೆದೋರುವುದು.

ಆದರೆ ಮಹಾತ್ಮರು ಲೋಕವನ್ನೆಲ್ಲ ತಮ್ಮ ಕುಟುಂಬವೆಂಶಲೇ ಭಾವಿಸುವರು. ಈ ಜಿಂಕೆಯು ಹೇಗೆ ನನಗೆ ಮಿತ್ರನೋ ನೀನೂ ಹಾಗೆಯೇ ಸರಿ'' ಎಂದಿತು.

ಈ ಮಾತಿಗಾ ಹುಲ್ಲೆಯು ಇಂತೆಂದಿತು:—"ಸುಮ್ಮನೆ ಮಾತಿಗೆ ಮಾತು ಪ್ರತಿ ಹೇಳಿದುದರಿಂದ ಫಲವಿಲ್ಲ. ಎಲ್ಲರೂ ಒಂದೆಡೆಯಲ್ಲಿ ವಿಶ್ವಾಸವಾಗಿ ಮಾತನಾಡಿಕೊಂಡು ಕಾಲಹರಣ ಮಾಡೋಣ! ಏಕೆಂದರೆ, 'ಯಾರಿಗೆ ಯಾರೂ ಮಿತ್ರರೂ ಅಲ್ಲ, ಶತ್ರುಗಳೂ ಅಲ್ಲ, ಯಾವುದಾದರೊಂದು ನಡೆ ವಳಿಯ ಮೂಲಕ ಗೆಳೆಯರೂ ಹಗೆಗಳೂ ಆಗುವರು.''

ಹುಲ್ಲೆಯ ಈ ಮಾತನ್ನು ಕೇಳಿ ಕಾಗೆಯು-"ಅಂತೆಯೇ ಆಗಬಹುದು'' ಎಂದಿತು. ಬಳಿಕ ಬೆಳಗಾದ ಕೂಡಲೇ ಅವು ತಮ್ಮ ತಮ್ಮ ಇಷ್ಟದಂತೆ ತೆರಳಿ ದುವು. ಒಂದು ದಿನ ನರಿಯು ಹರಿಣವನ್ನು ಕುರಿತು—"ಮಿತ್ರನೇ! ಈ ಅಡವಿಯಲ್ಲಿ ಒಂದು ಹೊಲವಿದೆ. ಅದರಲ್ಲಿ ತುಂಬ ಪೈರುಪಚ್ಚೆಗಳು ಹೇರಳ ವಾಗಿ ಬೆಳೆದಿವೆ. ನಿನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುವೆನು, ಬಾ'' ಎಂದು ರಹಸ್ಯವಾಗಿ ಹೇಳಿತು. ಅದರಂತೆಯೇ ಹುಲ್ಲೆಯೂ ಹೋಗಿ ನೋಡಿ, ಪ್ರತಿನಿತ್ಯವೂ ಪೈರನ್ನು ಮೇದು ಬರುತ್ತಿದ್ದಿತು. ಇದನ್ನು ಕಂಡು ರೈತನು ಬಲೆಯನ್ನು ಒಡ್ಡಿದನು. ಜಿಂಕೆಯು ಇದರಲ್ಲಿ ಸಿಲುಕಿಬಿದ್ದು— "ಯಮಪಾಶದಂತಿರುವ ಈ ಬಲೆಯಿಂದ ನನ್ನನ್ನು ಬಿಡಿಸುವಂತಹ ನಿಪುಣನು ನನ್ನ ಮಿತ್ರನಲ್ಲದೆ ಬೇರೆ ಯಾರು?'' ಎಂದು ಹಲವು ಬಗೆಯಿಂದ ಹಂಬಲಿಸು ತ್ತಿದ್ದಿತು. ಬಳಿಕ ನರಿಯು ಅಲ್ಲಿಗೆ ಬಂದು ಹೀಗೆ ಯೋಚಿಸಿತು. "ನಾನು ಹೂಡಿದ ತಂತ್ರವು ಇಂದಿಗೆ ಈಡೇರಿತು. ಇದನ್ನು ರೈತನು ಕೊಯ್ಯುವಾಗ ರಕ್ತಮಾಂಸಗಳಿಂದ ತುಂಬಿದ ಎಲುಬುಗಳು ತಪ್ಪದೆ ನನಗೆ ದೊರೆಯುವುವು. ಅವು ನನಗೆ ಹೇರಳವಾದ ಆಹಾರವಾಗುವುವು.'' ಆಗ ಹುಲ್ಲೆಯು ಜಂಬೂಕ ವನ್ನು ನೋಡಿ, ಉಲ್ಲಾಸದಿಂದ-"ಗೆಳೆಯಾ! ನನ್ನ ಬಂಧನವನ್ನು ಕಡಿದು ಬಿಸುಡಲಾರೆಯಾ? ಬೇಗನೆ ನನ್ನನ್ನು ಸಲಹು. ಏಕೆಂದರೆ-'ಮಿತ್ರನ ಗುಣ ವನ್ನು ಆಪತ್ತಿನಲ್ಲಿಯೂ, ಶೂರನನ್ನು ಯುದ್ಧದಲ್ಲಿಯೂ, ನೀತಿವರ್ತನವನ್ನು ಋಣದಲ್ಲಿಯೂ, ಮಡದಿಯನ್ನು ಬಡತನದಲ್ಲಿಯೂ, ಬಂಧುಬಳಗಗಳನ್ನು ಕಷ್ಟಕಾಲದಲ್ಲಿಯೂ ಪರೀಕ್ಷಿಸಿ ತಿಳಿಯಬೇಕಲ್ಲವೇ? ಉತ್ಸವದಲ್ಲಿಯೂ, ದುಃಖದಲ್ಲಿಯೂ, ದುರ್ಭಿಕ್ಷದಲ್ಲಿಯೂ, ಹಗೆಯು ಪೀಡಿಸುತ್ತಿರುವಾಗಲೂ,

ಅರಮನೆಯ ಬಾಗಿಲಿನಲ್ಲಿಯೂ, ಸುಡುಗಾಡಿನಲ್ಲಿಯೂ ಎಡೆಬಿಡದೆ ಯಾವನು ಹಿಂಬಾಲಿಸುವನೋ ಅವನೇ ದಿಟವಾದ ಗೆಳೆಯನು'' ಹೀಗೆಂದು ಹೇಳಿ ಬೇಡಿಕೊಂಡಿತು.

ನರಿಯು ಬಲೆಯನ್ನು ಸುತ್ತಲೂ ಚೆನ್ನಾಗಿ ನೋಡಿ, "ಈ ಬಲೆಯು ಬಹು ಬಿಗಿಯಾಗಿಯೂ ಗಟ್ಟಿಯಾಗಿಯೂ ಇದೆ'' ಎಂದು ಮನಸ್ಸಿನಲ್ಲಿ ಸ್ಥೈರ್ಯಗೊಂಡು, ಹುಲ್ಲೆಯನ್ನು ಕುರಿತು–"ಮಿತ್ರಾ! ಈ ಬಲೆಯನ್ನು ಹಾಳು ಕರುಳುಗಳಿಂದ ಹೆಣೆದಿರುವರು. ಈ ದಿನ ಭಾನುವಾರ. ಇದನ್ನು ನಾನು ಹೇಗೆ ನನ್ನ ಹಲ್ಲುಗಳಿಂದ ಕಡಿಯಲಿ! ಗೆಳೆಯಾ! ಮನಸ್ಸಿನಲ್ಲಿ ಬೇರೊಂದು ಬಗೆಯಿಂದ ಭಾವಿಸಬೇಡ. ಹೇಗಾದರೂ ಮಾಡಿ ಈ ರಾತ್ರಿಯ ಮಟ್ಟಿಗೆ ಸಹಿಸಿಕೊಂಡಿರು. ಬೆಳಗಾದ ಕೂಡಲೇ ನೀನೇನೆನ್ನುವೆಯೋ ಅದರಂತೆಯೇ ಮಾಡುವೆನು'' ಎನ್ನುತ್ತ, ಅದರ ಹತ್ತಿರವೇ ಕಾಣಿಸದಂತೆ ಕೂತುಕೊಂಡಿದ್ದಿತು. ಬಳಿಕ ಸಂಜೆಯಾದ ಕೂಡಲೇ, ಹುಲ್ಲೆಯು ಎಂದಿನಂತೆ ಬಾರದಿರುವುದನ್ನು ನೋಡಿ, ಕಾಗೆಯು ಹಂಬಲಿಸುತ್ತ ಅಲ್ಲಲ್ಲಿ ಹುಡುಕುತ್ತ ಬಂದು, ಆ ರೀತಿ ಕಷ್ಟಕ್ಕೆ ಗುರಿಯಾಗಿದ್ದ ಜಿಂಕೆಯನ್ನು ಕಂಡು–"ಮಿತ್ರನೇ! ಏನಿದು?'' ಎಂದು ಪ್ರಶ್ನೆಮಾಡಿತು. ಆಗ ಹುಲ್ಲೆಯು—"ಇದು ಆಪ್ತ ಮಿತ್ರನ ಮಾತನ್ನು ತಿರಸ್ಕರಿಸಿದುದಕ್ಕೆ ತಕ್ಕ ಫಲ. ಮೇಲ್ಮೆಯನ್ನು ಹಾರೈಸುವ ಗೆಳೆಯರ ಮಾತನ್ನು ಅಲ್ಲಗಳೆಯುವವರಿಗೆ ಆಪತ್ತುಗಳೂ ಅಂತೆಯೇ ಹಿಂದೆಯೇ ಇರುತ್ತವೆ. ಅಂತಹವನು ಹಗೆಗಳನ್ನು ಸಂತೋಷಗೊಳಿಸತಕ್ಕವನೇ ಸರಿ–ಎಂಬುದಾಗಿ ಹಿರಿಯರು ಹೇಳುವರಲ್ಲವೇ?'' ಎಂದು ಉತ್ತರ ಕೊಟ್ಟಿತು.

ಕಾಗೆ—"ಈಗ ಆ ನರಿಯು ಎಲ್ಲಿರುವುದು?''

ಹುಲ್ಲೆ—"ನನ್ನ ಮಾಂಸವನ್ನು ತಿನ್ನುವ ಸಲುವಾಗಿ ಇದಿರುನೋಡುತ್ತ ಇಲ್ಲಿಯೇ ಇರುವುದು.''

ಕಾಗೆ—ನಾನು ಮೊದಲೇ ಹೇಳಿದೆನಲ್ಲವೇ? ನಮ್ಮಲ್ಲಿ ಯಾವ ದೋಷವೂ ಇಲ್ಲನೆಂದು ನಾವು ನಿರ್ಭಯವಾಗಿರುವುದು ತರವಲ್ಲ. ದುರುಳರಿಂದ ಸಜ್ಜನರಿಗೆ ಹೆದರಿಕೆಯು ತಪ್ಪಿದುದೇ ಅಲ್ಲ. ನಮ್ಮಲ್ಲಿ ದೋಷವಿಲ್ಲದಿರುವುದೇ ಅವರಿಗೆ ದೊಡ್ಡ ಅಪರಾಧವಾಗಿ ಕಾಣಿಸುವುದು.

ಆಯುಷ್ಯವು ತೀರಿದವನಿಗೆ ದೀಪದ ಕುಡಿಯ ವಾಸನೆಯು ಮೂಗಿಗೆ ಗೋಚರಿಸುವುದಿಲ್ಲ; ಮಿತ್ರನ ಹಿತೋಕ್ತಿಯು ಕಿವಿಗೆ ಕೇಳಬರುವುದಿಲ್ಲ; ಅರುಂಧತಿಯು ಕಣ್ಣಿಗೆ ತೋರುವುದಿಲ್ಲ.

ಹಿಂದುಗಡೆ ಕಾರ್ಯವನ್ನು ಕೆಡಿಸಿ, ಇದಿರಾಗಿ ಸವಿಮಾತುಗಳನ್ನಾ ಡುತ್ತ, ಒಳಗಡೆ ತುಂಬ ವಿಷವನ್ನೂ, ಮೇಲ್ಗಡೆ ಹಾಲನ್ನೂ ಧರಿಸಿರುವ ಗಡಿಗೆಯಂತೆ ಇರುವ ಮಿತ್ರನನ್ನು ದೂರದಲ್ಲಿರಿಸಬೇಕು' ಎಂದು ಹೇಳಿ, ಬಿಸುಸುಯ್ದು, "ಎಲೆ ದುರುಳಾ! ಪಾಪಿಷ್ಠನಾದ ನೀನು ಎಂತಹ ನೀಚ ಕೆಲಸವನ್ನು ಮಾಡಿರುವೆ! ಲೋಕದಲ್ಲಿ ಸವಿಮಾತುಗಳಿಂದ ಸ್ನೇಹವನ್ನು ಬಳೆಯಿಸಿ, ಬೂಟಾಟಿಕೆಯ ಮನ್ನಣೆಗಳಿಂದ ಮರುಳುಮಾಡಿ ವಶಪಡಿಸಿ ಕೊಂಡು, ಆಸೆಯನ್ನು ತೋರಿ, ನಂಬಿಸಿ, ಈ ರೀತಿ ಸೂರೆಗೊಳ್ಳುವುದು ತರವೇ?"

ಉಪಕಾರಿಯೂ, ನಂಬಿದವನೂ, ನಿರ್ಮಲಚಿತ್ತನೂ ಎನಿಸಿದ ಗೆಳೆಯನ ವಿಷಯದಲ್ಲಿ ಕೇಡನ್ನು ಹಾರೈಸಿ, ನಾಲಗೆವಾಸಿ ಇಲ್ಲದ ಇಂತಹ ದುರುಳ ನನ್ನು—ಎಲೌ, ಭೂಮಾತೆಯೇ! ನೀನೆಂತು ಧರಿಸಿರುವೆ? ದುರುಳನೊಂದಿಗೆ ಮೈತ್ರಿಯು ಸಲ್ಲದು. ಅವನಲ್ಲಿ ಪ್ರೀತಿಯನ್ನೂ ಇಡಬಾರದು. ಬೆಂಕಿಯು ಬಿಸಿಯಾಗಿರುವಾಗ ಸುಡುವುದು. ಆರಿದ ಬಳಿಕ ಅದು ಕೈಯನ್ನು ಕರ್‍ರಗೆ ಮಾಡುವುದು. ಖೂಳರ ನಡೆವಳಿಯೇ ಇಂತಹುದು. ಹೇಗೆಂದರೆ— ಮೊದಲು ಕಾಲ್ಗೆರಗುತ್ತ, ಬಳಿಕ ಬೆನ್ನಿನ ಮಾಂಸವನ್ನು ತಿಂದು, ಕಿವಿಯಲ್ಲಿ ಮೆಲ್ಲಗೆ ವಿಚಿತ್ರರೀತಿಯಿಂದ ಏನನ್ನೋ ಗೊಣಗುಟ್ಟಿ, ಹೊಂಚುತ್ತಲಿದ್ದು ಥಟ್ಟನೆ ಒಳಹುಗುವುದು ದುರುಳರ ನಡೆವಳಿ. ಇದನ್ನೆಲ್ಲ ಸೊಳ್ಳೆಯು ಅನುಸರಿಸುತ್ತದೆ. ದುರುಳನು ಸವಿಮಾತುಗಳನ್ನಾಡುವ ಮಾತ್ರದಿಂದಲೇ ಅವನನ್ನು ನಂಬಬಾರದು. ಅವನ ನಾಲಗೆಯ ತುದಿಯಲ್ಲಿ ಜೇನು ತೊಟ್ಟಿಕ್ಕುವುದು. ಅಂತರಂಗದಲ್ಲಿ ಕಾಲಕೂಟವು ತುಂಬಿತುಳುಕುವುದು. ಖೂಳರ ನಡೆವಳಿಯೇ ಇಂತಹುದು."

ಬಳಿಕ ಬೆಳಗಾದ ಕೂಡಲೇ ಹೊಲದ ರೈತನು ದೊಣ್ಣೆಯನ್ನು ಕೈಯಲ್ಲಿ ಹಿಡಿದು ಬರುತ್ತಿರುವುದನ್ನು ನೋಡಿ ಕಾಗೆಯು ಹುಲ್ಲೆಯನ್ನು ಕುರಿತು—"ಸಖನೆ! ನೀನು ಉಸಿರನ್ನು ಬಿಗಿಹಿಡಿದು, ಕೈಕಾಲುಗಳನ್ನು

ಚಾಚಿ, ಹೊಟ್ಟೆಯನ್ನು ಉಬ್ಬರಿಸಿಕೊಂಡು, ಹೆಣದಂತೆ ಅತ್ತಿತ್ತ ಅಲುಗದೆ ಬಿದ್ದಿರು. ನಾನು ನಿನ್ನ ಮುಖದ ಮೇಲೆ ಕುಳಿತುಕೊಂಡು ನನ್ನ ಕೊಕ್ಕಿನಿಂದ ನಿನ್ನ ಕಣ್ಣುಗಳನ್ನು ಕೆರೆಯುತ್ತಿರುವೆನು. ನಾನು ಕೂಗಿದ ಕೂಡಲೇ ಝುಗ್ಗನೆ ಎದ್ದು ಓಡಿಹೋಗು'' ಎಂದು ಹೇಳಿತು. ಹುಲ್ಲೆಯು ಕಾಗೆಯ ಮಾತಿನಂತೆಯೇ ಮಾಡಿತು. ಅಷ್ಟರಲ್ಲಿ ಸಂತಸಗೊಂಡ ರೈತನು ಅಲ್ಲಿಗೆ ಬಂದು, ಆ ರೀತಿ ಬಿದ್ದಿದ್ದ ಹರಿಣವನ್ನು ನೋಡಿ—''ಆಹಾ! ನೀನಾಗಿಯೇ ಸತ್ತೆಯಾ?'' ಎನ್ನುತ್ತ ಬಲೆಯಿಂದ ಬಿಡಿಸಿ, ಬಿಗಿದಿದ್ದ ಬಲೆಯ ಹಗ್ಗಗಳನ್ನು ತೆಗೆದುಕೊಳ್ಳಲು ಪ್ರಯತ್ನಪಡುತ್ತಿರುವಷ್ಟರಲ್ಲಿ ಕಾಗೆಯ ಕೂಗು ಕೇಳಿಸಲಾಗಿ, ಹುಲ್ಲೆಯು ಬೇಗನೆ ಎದ್ದು ಓಡಿಹೋಯಿತು. ಅದನ್ನು ಕಂಡು ರೈತನು ದೊಣ್ಣೆಯನ್ನು ಬೀಸಲಾಗಿ ಅದು ಗುರಿ ತಪ್ಪಿ ದೂರವಾಗಿ ಕುಳಿತಿದ್ದ ನರಿಗೆ ತಗುಲಿ ಅದು ಸತ್ತುಬಿದ್ದಿತು. 'ಪುಣ್ಯವೇ ಆಗಲಿ, ಪಾಪವೇ ಆಗಲಿ, ಮಿತಿಮೀರಿತೆಂದರೆ ಅದರ ಫಲವು ಮೂರು ವರ್ಷ, ಮೂರು ತಿಂಗಳು, ಮೂರು ಪಕ್ಷಗಳು, ಇಲ್ಲವೇ ಮೂರುದಿನಗಳೊಳಗಾಗಿ ಈ ಲೋಕದಲ್ಲಿಯೇ ಫಲಿಸುವುದು' ಎಂಬುದಾಗಿ ಹೇಳಿರುವರು. ಅದರಿಂದಲೇ 'ಭಕ್ಷ್ಯ ಭಕ್ಷಕರಿಗೆ ಪ್ರೀತಿಯು ಸಲ್ಲದು' ಎಂಬ ವಾಕ್ಯವನ್ನು ನಾನು ಹೇಳಿದೆನು.

ಬಳಿಕ ಲಘುಪತನಕವೆಂಬ ಕಾಕವು ಹಿರಣ್ಯಕನೊಡನೆ ಇಂತೆಂದಿತು—''ನಿನ್ನನ್ನು ತಿಂದರೂ ನನ್ನ ಹೊಟ್ಟೆಯು ತುಂಬುವುದಿಲ್ಲ. ನೀನು ಬದುಕಿದ್ದರೆ ನಿರ್ದೋಷಿಯಾದ ಚಿತ್ರಗ್ರೀವನಂತೆ ನಾನೂ ಬದುಕಿರುವೆನು. ಪುಣ್ಯಕಾರ್ಯಗಳನ್ನೇ ಆಚರಿಸುತ್ತಿರುವ ತಿರ್ಯಗ್ಜಂತುಗಳಲ್ಲಿಯೂ ನಂಬಿಕೆಯು ನೆಲಸಿರುವುದು ಕಂಡುಬರುತ್ತದೆ. ಒಳ್ಳೆಯ ನಡೆವಳಿಯಿಂದ ಸಜ್ಜನರ ಸ್ವಭಾವವು ಎಂದಿಗೂ ಭಿನ್ನವಾಗಲಾರದು. ಸತ್ಪುರುಷರಿಗೆ ಸಿಟ್ಟು ಬರುವಂತೆ ಮಾಡಿದರೂ, ಅವರ ಚಿತ್ತವೃತ್ತಿಯು ವಿಕಾರಕ್ಕೆ ಒಳಪಡುವುದಿಲ್ಲ. ಹುಲ್ಲುಕಡ್ಡಿಯ ಕೊಳ್ಳಿಯಿಂದ ಕಡಲಿನ ನೀರನ್ನು ಬಿಸಿಮಾಡಲು ಸಾಧ್ಯವೇ?'' ಎಂದೆನಲು ಆಗ ಹಿರಣ್ಯಕನು ಇಂತೆಂದನು:—

''ನೀನು ಚಪಲಸ್ವಭಾವದವನು. ನಿನ್ನೊಂದಿಗೆ ಮೈತ್ರಿಯು ತರವಲ್ಲ. ಬೆಕ್ಕು, ಕೋಣ, ಆಡು, ಕಾಗೆ, ದುರುಳ ಇವರನ್ನು ಹತ್ತಿರ ಬರ

ಗೋಳಿಸಿದರೆ ತಲೆಯ ಮೇಲೆ ಕೂಡುವರೆಂದು ಹಿರಿಯರು ಹೇಳುವರು. ಅದರಿಂದ ಇವುಗಳಿಗೆ ಆಸರೆಯನ್ನು ಕೊಡಬಾರದು. ನಂಬಲೂ ಬಾರದು. ಇಷ್ಟು ಮಾತ್ರವಲ್ಲದೆ, ನೀನು ನಮ್ಮ ಶತ್ರುಪಕ್ಷದವನು. ಅದೆಂತೆಂದರೆ— 'ಎಷ್ಟೇ ಬಿಕ್ಕಟ್ಟಾದ ಒಪ್ಪಂದವನ್ನು ಮಾಡಿಕೊಂಡರೂ ಹಗೆಯೊಡನೆ ಸೇರಬಾರದು. ನೀರು ಫಳಫಳನೆ ಕುದಿಯುತ್ತಿದ್ದರೂ ಬೆಂಕಿಯನ್ನು ಆರಿಸಲಾರದೆ ಇರುವುದುಂಟೇ? ದುರುಳನು ಸಕಲ ವಿದ್ಯೆಗಳಲ್ಲಿಯೂ ಪಾರಂಗತನೆನಿಸಿದ್ದರೂ ದೂರದಲ್ಲಿ ಒತ್ತಟ್ಟಾಗಿ ಇರಿಸಲು ತಕ್ಕವನು. ಕಾಳ ಸರ್ಪದ ಹೆಡೆಯ ಮೇಲೆ ಮಾಣಿಕ್ಯವು ಇದ್ದ ಮಾತ್ರದಿಂದಲೇ ಅದು ಭಯಂಕರವೆನಿಸದಿರುವುದೇ? ಸಾಧ್ಯವಲ್ಲದುದು ಎಂದಿಗಾದರೂ ಅಸಾಧ್ಯವೇ ಸರಿ. ಶಕ್ಯವಾದುದು ಎಂದಿಗೂ ಅಶಕ್ಯವೆನಿಸಲಾರದು. ತೇರು ನೀರಿನ ಮೇಲೆ ಸಂಚರಿಸುವುದು ಎಲ್ಲಿಯಾದರೂ ಉಂಟೇ? ಹಡಗು ನೆಲದ ಮೇಲೆ ಹರಿಯುವುದಿಲ್ಲವಷ್ಟೆ! ಹಗೆಯು ಹೇರಳವಾಗಿ ಹಣ ಕಾಸನ್ನು ಕೊಟ್ಟರೂ ನಂಬಬಾರದು. ಅನುರಾಗವಿಲ್ಲದ ಮಡದಿಯನ್ನೂ ನಂಬಬಾರದು. ಒಂದು ವೇಳೆ ಇವರನ್ನು ನಂಬಿದುದಾದರೆ ಅಂದಿಗೆ ಅವನ ಆಯುಷ್ಯವು ಮುಗಿಯಿತೆಂತಲೇ ತಿಳಿಯಬೇಕು.'' ಈ ಮಾತನ್ನು ಕೇಳಿ, ಲಘುಪತನಕವು ಮರಳಿ ಈ ಪರಿ ಹೇಳತೊಡಗಿತು:—

"ನೀನು ಹೇಳಿದುದನ್ನೆಲ್ಲ ಕೇಳಿದೆನು. ಆದರೂ ಯಾವ ಬಗೆಯಿಂದಲಾದರೂ ನಿನ್ನೊಡನೆ ಸ್ನೇಹವನ್ನು ಬಳೆಯಿಸಬೇಕೆಂಬುದೇ ನನ್ನ ಕೋರಿಕೆ. ಅದು ನೆರವೇರದಿದ್ದರೆ ಊಟವನ್ನು ಬಿಟ್ಟು ಸಾಯುವೆನು.''

"ದುರುಳನು ಮಣ್ಣಿನ ಗಡಿಗೆಯಂತೆ ಸುಖವಾಗಿ ಭಿನ್ನನಾಗುವನು. ಮರಳಿ ಸೇರಿಸಲೂ ಸಾಧ್ಯವಲ್ಲ. ಸತ್ಪುರುಷನು ಚಿನ್ನದ ಕೊಡದಂತೆ ಅಭೇದ್ಯನೂ, ಸುಲಭವಾಗಿ ಸಂಧಾನಕ್ಕೆ ಅರ್ಹನೂ ಆಗಿರುವನು.''

"ಕರಗಿಸುವುದರ ಮೂಲಕ ಲೋಹಗಳನ್ನು ಒಟ್ಟುಗೂಡಿಸಬಹುದು. ನಿಮಿತ್ತಾಂತರದಿಂದ ಮೃಗಗಳನ್ನೂ ಪಕ್ಷಿಗಳನ್ನೂ ಸೇರಿಸಬಹುದು. ಭಯದಿಂದಲೂ ಲೋಭದಿಂದಲೂ ಮೂರ್ಖರು ಸ್ನೇಹಿತರಾಗುವರು. ಸಜ್ಜನರು ಒಬ್ಬರನ್ನೊಬ್ಬರು ಒಮ್ಮೆ ನೋಡಿದ ಮಾತ್ರದಿಂದಲೇ ಸ್ನೇಹವನ್ನು ಬಳೆಸುವರು.''

“ಸಜ್ಜನರು ತೆಂಗಿನಕಾಯಿಯನ್ನು ಹೋಲುವರು. ಮಿಕ್ಕವರು ಬೋರೆ ಹಣ್ಣಿನಂತೆ ಹೊರಗಡೆ ನೋಡುವುದಕ್ಕೆ ಮಾತ್ರವೇ ಮನೋಹರ ವಾಗಿರುವರಷ್ಟೆ! ಸತ್ಪುರುಷರ ಸ್ನೇಹವು ನಡುವೆ ವಿಚ್ಛಿನ್ನವಾದರೂ ಅವರ ಗುಣಗಳು ಮಾತ್ರ ಬದಲಾಯಿಸುವುದಿಲ್ಲ. ತಾವರೆಯ ದಂಟು ಮುರಿ ದರೂ, ಅದರ ಒಳಗಣ ನೂಲು ಮಾತ್ರ ಅಂಟಿಕೊಂಡೇ ಇರುವುದು. ಚಿತ್ತಶುದ್ಧಿ, ಔದಾರ್ಯ, ಶೌರ್‍ಯ, ಸುಖದಲ್ಲಿ ಹಿಗ್ಗದಿರುವಿಕೆ, ದುಃಖದಲ್ಲಿ ಮರುಗದಿರುವಿಕೆ, ಕನಿಕರ, ಪ್ರೀತಿ, ಸತ್ಯಸಂಧತೆ, ಇವು ಮಿತ್ರನ ಸಹಜವಾದ ಗುಣಗಳು. ಇಂತಹ ಗುಣಸಂಪತ್ತಿಯಿಂದ ಕೂಡಿದವನು ನೀನೊಬ್ಬನಲ್ಲದೆ ಮತ್ತಾರನ್ನೂ ನಾನು ಇಂದಿನ ವರೆಗೆ ನೋಡಲಿಲ್ಲ.” ಈ ತೆರದಿಂದ ಕಾಗೆಯು ಮೊರೆಯಿಟ್ಟುದನ್ನು ಕೇಳಿ, ಹಿರಣ್ಯಕನು ಬಿಲದಿಂದ ಹೊರ ಬಂದು—“ಈ ಪರಿಯ ನಿನ್ನ ಅಮೃತವಚನಗಳಿಂದ ನನ್ನ ಅಂತರಂಗವು ಆಪ್ಯಾಯನವನ್ನು ಪಡೆಯಿತು. ಸಜ್ಜನರ ಬಾಯಿಂದ ಪ್ರೀತಿಪೂರ್ವಕವೂ ಯುಕ್ತಿಯುಕ್ತವೂ ಎನಿಸಿ ಹೊರಡುವ ಮಾತುಗಳು ಪುಣ್ಯಶಾಲಿಗಳ ಅಂತ ರಂಗವನ್ನು ವಶೀಕರಣಮಂತ್ರದಂತೆ ಸ್ವಾಧೀನಪಡಿಸಿಕೊಳ್ಳುವುವು. ಇಂತಹ ಆನಂದವು ಬಿಸಿಲಿನಲ್ಲಿ ಬಳಲಿ ಬಂದವನಿಗೆ ಹಿಮೋದಕಸ್ನಾನದಿಂದ ದೊರೆ ಯುವ ಆನಂದಕ್ಕಿಂತಲೂ ಮಿಗಿಲಾದುದು. ಒಂದೊಂದು ಅವಯವ ದಲ್ಲಿಯೂ ಪೂಸಿದ, ದಿವ್ಯ ಪರಿಮಳವನ್ನು ಬೀರುವ, ಚಂದನವೂ ಇದ ರಷ್ಟು ಆಹ್ಲಾದಕರವೆನಿಸಲಾರದು.”

“ಗುಟ್ಟನ್ನು ರಟ್ಟುಮಾಡುವಿಕೆ, ಯಾಚನೆ, ನಿಷ್ಠುರಸ್ವಭಾವ, ಚಪಲ ಚಿತ್ತತೆ, ಕೋಪ, ಅಸತ್ಯದಲ್ಲಿ ಅಭಿರುಚಿ, ದ್ಯೂತ, ಇವು ಮಿತ್ರನ ದೋಷ ಗಳು. ಇವುಗಳಿಂದ ಸ್ನೇಹಕ್ಕೆ ಭಂಗ ಬರುವುದು. ಈ ಬಗೆಯ ದೋಷ ಗಳಲ್ಲಿ ಒಂದಾದರೂ ನಿನ್ನಲ್ಲಿ ಕಂಡುಬರುವುದಿಲ್ಲ. ಏಕೆಂದರೆ—ಸಾಮರ್ಥ್ಯ, ಸತ್ಯಸಂಧತೆ, ವ್ಯವಹಾರಪರಿಜ್ಞಾನ, ಮನಸ್ಥೈರ್ಯ, ಲೋಭವಿಲ್ಲದಿರುವಿಕೆ, ಇವುಗಳು ಮನುಷ್ಯನನ್ನು ನೋಡಿದ ಮಾತ್ರದಿಂದಲೇ ಹೊರಬೀಳುವುವು. ಶುದ್ಧವಾದ ಚಿತ್ತವೃತ್ತಿಯುಳ್ಳವನ ಸ್ನೇಹದ ರೀತಿಯೇ ಬೇರೆ. ಶೌರ್‍ಯ ವಿಲ್ಲದ ಮೋಸಗಾರನ ಮಾತೇ ಬೇರೆ. ದುರುಳನ ಮನಸ್ಸಿನಲ್ಲಿರುವುದು ಒಂದು; ಮಾತಿನಲ್ಲಿ ಮತ್ತೊಂದು; ಕಾರ್ಯದಲ್ಲಿ ಇನ್ನೊಂದು. ಆದರೆ

ಮಹಾತ್ಮರು ಮನಸ್ಸಿನಲ್ಲಿಯೂ, ಮಾತಿನಲ್ಲಿಯೂ, ಕಾರ್ಯದಲ್ಲಿಯೂ ಒಂದೇ ವಿಧವಾಗಿರುವರು. ಅದರಿಂದ ನಿನ್ನ ಕೋರಿಕೆಯಂತೆಯೇ ಆಗಲಿ.'' ಹೀಗೆಂದು ಹೇಳಿ ಹಿರಣ್ಯಕನು ಲಘುಪತನಕನನ್ನು ಮೈತ್ರಿಯಿಂದ ಮನ್ನಿಸಿ, ಸವಿಯೋಗರದಿಂದ ದಣಿಸಿ, ತಕ್ಕೈಸಿ, ಬೀಳ್ಕೊಟ್ಟು; ತಾನು ಬಿಲದೊಳಗೆ ತೂರಿತು. ಕಾಗೆಯೂ ತನ್ನ ಗೂಡಿಗೆ ಹೋಗಿ ಸೇರಿತು. ಅಂದುಮೊದಲು ಇವೆರಡೂ ಪರಸ್ಪರವಾಗಿ ಊಟಉಪಚಾರಗಳಿಂದಲೂ, ಕುಶಲಪ್ರಶ್ನೆಗಳಿಂದಲೂ, ಸಲ್ಲಾಪದಿಂದಲೂ, ಸುಖವಾಗಿ ಕಾಲಹರಣಮಾಡುತ್ತಿದ್ದುವು.

ಹೀಗಿರಲು ಒಂದು ದಿನ ಕಾಗೆಯು ಇಲಿರಾಯನನ್ನು ಕುರಿತು— ''ಸಖನೆ! ಈಗ ನನಗೆ ಈ ಪ್ರದೇಶದಲ್ಲಿ ಆಹಾರವು ದೊರೆಯುವುದೇ ಕಷ್ಟವಾಗಿದೆ. ಅದರಿಂದ ಈ ಭೂಭಾಗವನ್ನು ಬಿಟ್ಟು, ಬೇರೊಂದೆಡೆಗೆ ಹೋಗಬೇಕೆಂದಿರುವೆನು'' ಎನಲಾಗಿ ಹಿರಣ್ಯಕನಿಂತೆಂದನು—''ಹಲ್ಲೂ, ತಲೆಕೂದಲೂ, ಉಗುರೂ, ಮನುಷ್ಯರೂ ತಮ್ಮ ಸ್ಥಾನವನ್ನು ಬಿಟ್ಟರೆ ಶೋಭಿಸುವುದಿಲ್ಲ. ಇದರ ಗುಟ್ಟನ್ನು ಅರಿತವರು ಎಂದಿಗೂ ತಮ್ಮ ಸ್ಥಾನವನ್ನು ಬಿಡಬಾರದು''.

ಕಾಗೆ:—''ಇದು ಮೂರ್ಖರ ಮಾತು. ಮಿತ್ರನೆ! ಇತ್ತ ಕೇಳು; ಸಿಂಹಗಳೂ, ಸಜ್ಜನರೂ, ಆನೆಗಳೂ, ಇದ್ದೆಡೆಯಲ್ಲಿಯೇ ಇರದೆ ಬಿಟ್ಟು ಹೋಗುವುದು ಸಹಜವಷ್ಟೆ! ಕಾಗೆಗಳೂ, ಜಿಂಕೆಗಳೂ, ದುರ್ಜನರೂ ಇದ್ದಲ್ಲಿಯೇ ಸಾಯುವುದುಂಟು.''

ಹಿರಣ್ಯಕ:—''ಮಿತ್ರನೆ! ಹಾಗಾದರೆ ಎಲ್ಲಿಗೆ ಹೋಗಬಹುದು? ಯೋಚಿಸು. ಬುದ್ಧಿಶಾಲಿಯು ಒಂದು ಕಾಲನ್ನು ಊರಿ, ಮತ್ತೊಂದು ಅಡಿಯನ್ನಿಡುವನು. ಎರಡನೆಯ ಸ್ಥಾನವನ್ನು ಚೆನ್ನಾಗಿ ಭದ್ರಪಡಿಸಿಕೊಂಡಲ್ಲದೆ ಮೊದಲನೆಯ ಸ್ಥಾನವನ್ನು ಬಿಡಬಾರದು.''

ಕಾಗೆ:—''ನಾನು ಒಂದು ಯೋಗ್ಯವಾದ ಪ್ರದೇಶವನ್ನು ನೋಡಿರುವೆನು.''

ಹಿರ:-''ಅದು ಯಾವುದು?''

ಕಾಗೆ:—''ದಂಡಕಾರಣ್ಯದಲ್ಲಿ ಕರ್ಪೂರಗೌರವೆಂಬ ಸರೋವರವಿದೆ. ಅಲ್ಲಿ ನನ್ನ ಆಪ್ತಮಿತ್ರನಾದ ಮಂಥರಕನೆಂಬ ಕೂರ್ಮರಾಜನು ವಾಸವಾಗಿ

ರುವನು. ಪುರಾತನ ಮಿತ್ರನಾದ ಮಂಥರಕನು ಸಹಜವಾಗಿಯೇ ಧಾರ್ಮಿಕನು. ಇತರರಿಗೆ ತಿಳಿಯಹೇಳುವ ವಿಷಯದಲ್ಲಿ ಎಲ್ಲರೂ ಪಂಡಿತರೇ ಸರಿ. ತಾನು ಆಚರಣೆಗೆ ತರುವುದು ಮಾತ್ರ ಮಹಾತ್ಮರಿಗೇ ಸಾಧ್ಯವಾದುದು. ಆತನು ಒಳ್ಳೆಯ ಮತ್ಸ್ಯಾಹಾರದಿಂದ ನನ್ನನ್ನು ಆದರಿಸಿ ಪೋಷಿಸಬಲ್ಲನು.''

ಹಿರಣ್ಯಕ:—''ಹಾಗಾದರೆ ನಾನು ಮಾತ್ರ ಒಂಟಿಯಾಗಿ ಇಲ್ಲಿದ್ದು ಏನು ಮಾಡಬಲ್ಲೆನು? ಮರ್ಯಾದೆಯೂ, ವಿದ್ಯಾಲಾಭವೂ, ಬಂಧುಬಳಗಗಳೂ, ಯಾವುದಾದರೊಂದು ಜೀವನೋಪಾಯವೂ ಇಲ್ಲದ ಪ್ರದೇಶವನ್ನು ಬಿಡಬೇಕು. ಧನಿಕನೂ, ವೇದಪಾಠಕನೂ, ಅರಸನೂ, ಹೊಳೆಯೂ, ವೈದ್ಯನೂ ಈ ಐದೂ ಇಲ್ಲದ ಸ್ಥಳದಲ್ಲಿ ವಾಸಮಾಡಬಾರದು. ಇನ್ನು ಜೀವನೋಪಾಯ, ಪಾಪಭೀತಿ, ಲಜ್ಜೆ, ಕರುಣೆ, ದಾತೃತ್ವ ಇವುಗಳಿಲ್ಲದ ಪ್ರದೇಶವು ವಾಸಕ್ಕೆ ಯೋಗ್ಯವಲ್ಲ. ಸಖನೆ! ಸಾಲಕೊಡತಕ್ಕವನೂ, ವೈದ್ಯನೂ, ವೇದಾಧ್ಯಾಪಕನೂ, ಸಿಹಿನೀರಿನ ಹೊಳೆಯೂ ಇಲ್ಲದ ದೇಶದಲ್ಲಿ ವಾಸಮಾಡಬಾರದು. ಅದರಿಂದ ನನ್ನನ್ನೂ ಅಲ್ಲಿಗೆ ಕರೆದುಕೊಂಡು ಹೋಗು'' ಎಂದಿತು.

ಬಳಿಕ ಕಾಗೆಯು ಗೆಳೆಯನೊಂದಿಗೆ ವಿನೋದವಾಗಿ ಮಾತುಕಥೆಗಳನ್ನಾಡುತ್ತ ನಡೆತಂದು ಆ ಸರೋವರವನ್ನು ಸೇರಿತು. ಇಷ್ಟರಲ್ಲಿ ಮಂಥರಕನು ಇವರ ಬರುವಿಕೆಯನ್ನು ದೂರದಿಂದಲೇ ಕಂಡು ಇವರಿಬ್ಬರನ್ನು ಉಚಿತ ರೀತಿಯಿಂದ ಬರಮಾಡಿಕೊಂಡು ಆತಿಥ್ಯವನ್ನು ಸಲ್ಲಿಸಿ, ಅಕ್ಕರೆಯಿಂದ ಮನ್ನಿಸಿ ಗೌರವಿಸಿದನು. ಆಗ ಕಾಗೆಯು ಇಂತೆಂದಿತು—''ಮಿತ್ರ! ಮಂಥರಕನೆ! ಈತನನ್ನು ಎಷ್ಟು ಬಗೆಯಿಂದ ಮನ್ನಿಸಿದರೂ ಕಡಿಮೆಯೇ ಸರಿ. ಈತನು ಪುಣ್ಯಶಾಲಿಗಳಲ್ಲಿ ಅಗ್ರಗಣ್ಯನು. ಮೂಷಕ ಚಕ್ರವರ್ತಿಯಾದ ಈತನು ಹಿರಣ್ಯಕನೆಂಬ ಹೆಸರಿನಿಂದ ಸುಪ್ರಸಿದ್ಧನಾಗಿರುವನು. ಈತನ ಗುಣಸಂಪತ್ತಿಯನ್ನು ಹೊಗಳಬೇಕಾದರೆ ಸಾವಿರ ತಲೆಗಳುಳ್ಳ ಆದಿಶೇಷನು ಒಮ್ಮೆ ಸಮರ್ಥನಾದರೂ ಆಗಬಹುದು.'' ಈ ರೀತಿ ಹೇಳಿ ಚಿತ್ರಗ್ರೀವನ ಕಥೆಯನ್ನು ಸವಿಸ್ತಾರವಾಗಿ ಬಣ್ಣಿಸಿತು. ಆಗ ಮಂಥರಕನು ಹಿರಣ್ಯಕನನ್ನು ಮನ್ನಿಸಿ—''ಅಯ್ಯಾ! ನಿನಗೆ ಮಂಗಳ

ವಾಗಲಿ! ನಿರ್ಜನವಾದ ಕಾಡಿನಲ್ಲಿ ನೀನು ವಾಸಮಾಡಲು ಕಾರಣವೇನು? ದಯೆಮಾಡಿ ತಿಳುಹು'' ಎಂದು ಪ್ರಶ್ನೆಮಾಡಲು, ಹಿರಣ್ಯಕನು ತನ್ನ ಕಥೆಯನ್ನು ಇಂತು ಹೇಳತೊಡಗಿದನು:—

## ಹಿರಣ್ಯಕನ ಪೂರ್ವವೃತ್ತಾಂತ

ಚಂಪಕಾವತಿಯೆಂಬ ಪಟ್ಟಣದಲ್ಲಿ ಬೈರಾಗಿಗಳ ಒಂದು ಮಠವಿದೆ. ಅಲ್ಲಿ ಚೂಡಾಕರ್ಣನೆಂಬ ಯತಿಯು ವಾಸವಾಗಿದ್ದನು. ಆತನು ಪ್ರತಿನಿತ್ಯವೂ ಭಿಕ್ಷಾನ್ನವನ್ನು ತಿರಿದು ತಂದು, ತಿಂದು, ಮಿಕ್ಕ ಅನ್ನವನ್ನು ಭಿಕ್ಷಾಪಾತ್ರೆಯಲ್ಲಿಟ್ಟು, ನೆಲುವಿಗೆ ತಗುಲಿಸಿ ನಿದ್ರಿಸುತ್ತಿದ್ದನು. ನಾನು ಪ್ರತಿನಿತ್ಯವೂ ರಾತ್ರಿಯಲ್ಲಿ ಮೇಲಕ್ಕೆ ನೆಗೆದು ಆ ಅನ್ನವನ್ನು ತಿನ್ನುತ್ತಿದ್ದೆನು. ಇಂತಿರಲು, ಒಂದು ದಿನ ಚೂಡಾಕರ್ಣನ ಪ್ರಿಯಮಿತ್ರನಾದ ವೀಣಾಕರ್ಣನೆಂಬ ಮತ್ತೊಬ್ಬ ಸನ್ಯಾಸಿಯು ಅಲ್ಲಿಗೆ ಬಂದನು. ಇಬ್ಬರೂ ಅನ್ಯೋನ್ಯವಾಗಿ ಅನೇಕ ವಿಷಯಗಳನ್ನು ಕುರಿತು ಮಾತನಾಡುತ್ತಿದ್ದರು. ಚೂಡಾಕರ್ಣನು ಮಾತ್ರ ನಡನಡುವೆ ನನ್ನನ್ನು ಹೆದರಿಸುವುದಕ್ಕಾಗಿ ಸೀಳಿದ ಒಂದು ಬಿದುರು ಕೋಲನ್ನು ನೆಲದ ಮೇಲೆ ಬಡಿಯುತ್ತಲೇ ಇದ್ದನು. ಇದನ್ನು ಕಂಡು ವೀಣಾಕರ್ಣನು "ಮಿತ್ರನೆ! ಇದೇನು? ನನ್ನ ಮಾತಿನಲ್ಲಿ ಗಮನವಿಟ್ಟಂತೆ ತೋರುವುದಿಲ್ಲ! ಬೇರೆ ಎಲ್ಲಿಯೋ ಮನಸ್ಸು ವ್ಯಾಪಾರಮಾಡುವಂತಿದೆ. ಏಕೆಂದರೆ—ಪ್ರಸನ್ನವಾದ ಮೋರೆ, ಶಾಂತವಾದ ನೋಟ, ಅಕ್ಕರೆಯೊಡಗೂಡಿದ ಸವಿಮಾತು, ಮಿಗಿಲಾದ ಸ್ನೇಹ, ಸಂಭ್ರಮವನ್ನು ಹೊರಪಡಿಸುವ ಮುಖವಿಕಾಸ, ಇವು ಪ್ರೀತಿಯ ಲಕ್ಷಣಗಳು. ಇನ್ನು, ಸಂತೋಷವಿಲ್ಲದ ದಾನ, ಉಪಕಾರವನ್ನು ಮರೆಯುವಿಕೆ, ಅನಾದರ, ದೋಷವನ್ನು ಹೊರಗೆಡಹುವುದು, ಮಾತಿನ ಭರದಲ್ಲಿ ಹೆಸರನ್ನು ಕೂಡ ಮರೆಯುವಿಕೆ, ಇವು ಸ್ನೇಹಶೂನ್ಯತೆಯ ಕುರುಹುಗಳು'' ಎಂದು ಹೇಳಿದನು.

ಅದನ್ನು ಕೇಳಿ ಚೂಡಾಕರ್ಣನು—"ಎಲೈ ಭವ್ಯಮಿತ್ರನೆ! ನಾನು ಅನಾದರವನ್ನು ಸೂಚಿಸುತ್ತಿರುವೆನೆಂಬುದಾಗಿ ಭಾವಿಸಬಾರದು. ಇತ್ತ ನೋಡು. ಈ ಇಲಿಯು ಮೇಲೆ ಅಂತರಾಳದಲ್ಲಿ ತಗುಲಿಸಿರುವ ಭಿಕ್ಷಾಪಾತ್ರೆಯೊಳಗಣ ಅನ್ನವನ್ನು ತಿಂದು ನನಗೆ ಅಪಕಾರ ಮಾಡುತ್ತಿದೆ. ಇದರ ಹಾವಳಿಯು ಅಷ್ಟಿಷ್ಟೆಂದು ಹೇಳಲಾಗದು. ಇದನ್ನು ಹೆದರಿಸು

ವುದಕ್ಕಾಗಿ ಈ ಬಿದಿರುಕೋಲನ್ನು ಆಗಾಗ್ಗೆ ನೆಲಕ್ಕೆ ಅಪ್ಪಳಿಸುತ್ತಿರುವೆ ನಲ್ಲದೆ ಬೇರೆ ಕಾರಣವಿಲ್ಲ'' ಎಂದನು. ಆಗ ವೀಣಾಕರ್ಣನು ನಾಗದಂತ ವನ್ನು ದೃಷ್ಟಿಸಿ ನೋಡಿ ಇಂತೆಂದನು-''ಇಲಿ ಎಂದರೇನು? ಅದರ ಸಾಹಸ ವೆಷ್ಟು? ಹೇಗೆ ಅದು ಇಷ್ಟು ಎತ್ತರಕ್ಕೆ ನೆಗೆಯುವುದು? ಈ ಚೋದ್ಯ ಗಳನ್ನೆಲ್ಲ ಯೋಚಿಸಲಾಗಿ ಇದರಲ್ಲಿ ಯಾವುದೋ ಒಂದು ಕಾರಣವಿರ ಬೇಕು. * * * * * * * *

ಇಲ್ಲದಿದ್ದರೆ, ಈ ಇಲಿಗೆ ಇಷ್ಟೊಂದು ಬಲುಮೆಗೆ ಅವಕಾಶವೇ ಇಲ್ಲ'' ಎಂದು ಕ್ಷಣ ಕಾಲ ಯೋಚಿಸಿ ''ಈ ಇಲಿಯ ಚೆಲ್ಲಾಟಕ್ಕೆ ಇಲ್ಲಿರುವ ನಿಧಿಯೇ ಕಾರಣ.'' ಏಕೆಂದರೆ, ಲೋಕದಲ್ಲಿ ಹಣಗಾರನಿಗಿರುವ ಬಲು ಮೆಯು ಮತ್ತಾರಿಗೂ ಇಲ್ಲ. ಎಲ್ಲಿಯೂ ಅವನೇ ಬಲಶಾಲಿ. ಅರ ಸರ ದೊರೆತನವೂ ಹಣದ ಬಲುಮೆಯಿಂದಲೇ ನಡೆಯುವುದು'' ಎಂದು ಹೇಳಿ, ಒಡನೆಯೇ ಗುದ್ದಲಿಯನ್ನು ತಂದು ಅಗೆದು, ಬಹಳ ಕಾಲದಿಂದಲೂ ಹೂತಿದ್ದ ಹಣವನ್ನು ತೆಗೆದುಕೊಂಡನು. ಬಳಿಕ ದಿನಕ್ರಮವಾಗಿ ನನ್ನ ಬಲವು ಕುಗ್ಗಿತು, ಉತ್ಸಾಹವು ಶೂನ್ಯವಾಯಿತು, ಸಂತೋಷವು ಇಂಗಿತು, ಧೈರ್ಯವು ನೆಗ್ಗಿತು, ಆಹಾರವನ್ನು ಸಂಪಾದಿಸಿ ಹೊಟ್ಟೆಹೊರೆದುಕೊಳ್ಳು ವುದಕ್ಕೆ ಶಕ್ತಿಯು ಸಾಲದೆ ಹೋಯಿತು, ನಡೆಯು ಮಂದವಾಯಿತು. ಹೀಗೆ ಸಕಲ ವಿಧದಿಂದಲೂ ದುರ್ಬಲನಾದ ನನ್ನನ್ನು ನೋಡಿ ಆ ಚೂಡಾಕರ್ಣನು ಒಮ್ಮೆ ಇಂತೆಂದನು:—''ಹಣವಿದ್ದರೆ ಎಲ್ಲರೂ ಬಲುಮೆ ಗಾರರೇ ಸರಿ. ಹಣದಿಂದಲೇ ಪಂಡಿತನೆನಿಸುವನು. ಈ ಇಲಿಯನ್ನು ನೋಡು. ಈಗ ಇದಕ್ಕೂ ಇದರ ಜಾತಿಯ ಬೇರೆ ಇಲಿಗಳಿಗೂ ವ್ಯತ್ಯಾಸ ವೇನು? ಹಣವನ್ನು ಹೋಗಲಾಡಿಸಿಕೊಂಡ ಮಂದಮತಿಯ ಪ್ರಯತ್ನಗಳು ಬಿಸಿಲು ಕಾಲದ ಸಣ್ಣ ಹೊಳೆಗಳಂತೆ ಅಲ್ಲಲ್ಲಿಯೇ ಬತ್ತಿಹೋಗುವುವು. ಹಣಗಾರನಿಗೆ ಗೆಳೆಯರಿರುವರು. ಬಂಧುಬಳಗಗಳೂ ಬಹಳ ಮಂದಿ. ಧನವಂತನೇ ಪಂಡಿತನು. ಮಕ್ಕಳಿಲ್ಲದ ಮನೆ ಬರಿದು. ಗೆಳೆಯರಿಲ್ಲ ದವನ ಬಾಳು ಬೀಳು. ಮೂರ್ಖನಿಗೆ ಲೋಕವೆಲ್ಲ ಹಾಳು. ದರಿದ್ರನಿಗೆ ಪ್ರಪಂಚವೇ ಬೀಡಿನಂತೆ ಕಾಣುವುದು.''

''ಬಡತನಕ್ಕಿಂತಲೂ ಸಾವು ಎಷ್ಟೋ ಲೇಸು. ಬಡತನವು ಎಂದೆಂದಿಗೂ ಬೇಡವೆಂಬುದಾಗಿ ಬಲ್ಲಿದರು ಹೇಳುವರು. ಸಾವಿನ ತೊಂದರೆಯು

ಕಡಿಮೆ. ಬಡತನವನ್ನು ಮಾತ್ರ ಯಾರೂ ಅನುಭವಿಸಲಾರರು. ಮನುಷ್ಯನು ಹಣಗಾರನಾಗಿರುವಾಗ ಹೇಗೆಯೋ ಅದರಂತೆಯೇ ಹಣವು ನಾಶವಾದ ಮೇಲೆಯೂ, ಸ್ವಲ್ಪವೂ ಶಕ್ತಿಗುಂದದಿರುವ ಅವೇ ಇಂದ್ರಿಯಗಳು, ಅದೇ ಹೆಸರು, ಅಪ್ರತಿಹತವೂ ಚಮತ್ಕಾರಯುಕ್ತವೂ ಆದ ಅದೇ ಬುದ್ಧಿ, ಮಾತಿನ ಸರಣಿಯೂ ಅದೇ, ಹಣದ ಬಾಯಾರಿಕೆಯಿಲ್ಲದ ಮನುಷ್ಯನೂ ಅವನೇ; ಇಂತಿದ್ದರೂ, ಧನಮದವು ಇಂಗಿತೆಂದರೆ, ಅವನು ಬೇರೆ ಒಬ್ಬ ಹೊಸ ಮನುಷ್ಯನೇ ಆಗುವನು. ಇದು ವಿಚಿತ್ರವೇ ಸರಿ.''

ಈ ರೀತಿಯಾಗಿ ಚೂಡಾಕರ್ಣನು ಹೇಳಿದ ಮಾತುಗಳನ್ನೆಲ್ಲ ಕೇಳಿ, ‘‘ಇನ್ನು ಇಲ್ಲಿರುವುದು ತರವಲ್ಲ. ನನ್ನ ಕಷ್ಟಸುಖಗಳನ್ನು ಇತರರಿಗೆ ಹೇಳಿ ಮೊರೆಯಿಡುವುದೂ ಯುಕ್ತವಲ್ಲ. ಏಕೆಂದರೆ—ಹಣದ ನಾಶ, ಮನಸ್ತಾಪ, ಸಂಸಾರದ ಗುಟ್ಟು, ಮೋಸ, ಅಪಮಾನ, ಇವುಗಳನ್ನು ಬುದ್ಧಿಶಾಲಿಯು ಪ್ರಕಟಗೊಳಿಸಬಾರದು. ಆಯುಷ್ಯ, ಆಸ್ತಿ, ಸಂಸಾರ ತಾಪತ್ರಯ, ಮಂತ್ರ, ಸುಖ, ಔಷಧ, ದಾನ, ಮರ್ಯಾದೆ, ಅಪಮಾನ' ಈ ಒಂಭತ್ತನ್ನೂ ರಹಸ್ಯವಾಗಿಡಬೇಕು.''

‘‘ದೈವವು ಪ್ರತಿಕೂಲವಾಗಿರುವಾಗ, ಪುರುಷಪ್ರಯತ್ನವೂ ಕೈಗೂಡದಿದ್ದರೆ, ಮನುಷ್ಯನು ಎಲ್ಲಿಯಾದರೂ ದೂರವಾಗಿ ಹೋಗಿ ಯಾರಿಗೂ ತಿಳಿಯದಂತೆ ಕಾಡಿನಲ್ಲಿಯಾದರೂ ವಾಸಮಾಡಬೇಕು. ಇಲ್ಲವಾದರೆ ಮನಸ್ಸು ನೆಮ್ಮದಿಯಾಗಿರಲಾರದು. ಮಾನವಂತನು ಪ್ರಾಣವನ್ನಾದರೂ ಬಿಡುವನಲ್ಲದೆ ಬಡತನವನ್ನು ಮಾತ್ರ ಭರಿಸಲಾರನು. ಬೆಂಕಿಯು ಆರಿ ಹೋಗುವುದಲ್ಲದೆ ಎಂದಿಗೂ ತೇವವಾಗಲಾರದು. ಪೂಗೊಂಚಲಿನಂತೆ ಮಾನಶಾಲಿಗೆ ಎರಡು ವೃತ್ತಿಗಳು ಮಾತ್ರವೇ ಸಲ್ಲುವುವು. ಹೂವು ತಲೆ ಮುಡಿಯಲ್ಲಿಯೂ ಮೆರೆಯುವುದು. ಇಲ್ಲವಾದರೆ ಕಾಡಿನಲ್ಲಿ ಇದ್ದೆಡೆಯೇ ಕಂದಿ, ಉದುರಿ, ಒಣಗಿ ಹೋಗುವುದು. ಆದುದರಿಂದ ನಾನು ಇಲ್ಲಿಯೇ ಇದ್ದು, ತಿರಿದು, ಉಂಡು, ಬದುಕುವುದು ಹೀನವಾದುದು.''

‘‘ಐಶ್ವರ್ಯವನ್ನು ಕಳೆದುಕೊಂಡವನು ಬೆಂಕಿಯನ್ನಾದರೂ ಹೊಕ್ಕು ಪ್ರಾಣಬಿಡುವುದು ಲೇಸು. ಮರ್ಯಾದೆಯ ಗಂಧವನ್ನೇ ಅರಿಯದ ಹಣಗಾರರಲ್ಲಿ ತಿರಿದು ಬದುಕುವುದು ಎಂದಿಗೂ ತರವಲ್ಲ. ಮನುಷ್ಯನು ಬಡ

ತನದಿಂದ ನಾಚುವನು. ನಾಚಿಕೆಯು ಸಂತೋಷವನ್ನೂ ಧೈರ್ಯವನ್ನೂ ಮೆಟ್ಟುವುದು. ಎದೆಗುಂದಿದವನು ತನಗುಂಟಾದ ತಿರಸ್ಕಾರದಿಂದ ಮನಸ್ಸಿನಲ್ಲಿಯೇ ಮರುಗುವನು. ಈ ಬಗೆಯ ಮನೋವ್ಯಥೆಯು ದುಃಖವನ್ನು ಹೆಚ್ಚಿಸುವುದು. ದುಃಖಪೀಡಿತನಾದವನ ಬುದ್ಧಿಯು ಮಾಯವಾಗುವುದು. ಅಕಟಾ! ಬಡತನವು ಸಕಲಾಪತ್ತುಗಳಿಗೂ ಮೂಲವಲ್ಲವೇ?"

"ಸುಳ್ಳು ಹೇಳುವುದಕ್ಕಿಂತಲೂ ಬಾಯಿ ಮುಚ್ಚಿರುವುದು ಲೇಸು. ಪರನಾರಿಯನ್ನು ಬಯಸುವುದಕ್ಕಿಂತಲೂ ನಪುಂಸಕನಾಗಿರುವುದು ಮೇಲು. ಚಾಡಿಕೋರರ ಮಾತನ್ನು ಲಾಲಿಸುವುದಕ್ಕಿಂತಲೂ ಸಾಯುವುದು ಒಳ್ಳೆಯದು. ಇತರರ ಸೊತ್ತನ್ನು ಸೂರೆಗೊಳ್ಳುವುದಕ್ಕಿಂತಲೂ ತಿರಿದುಣ್ಣುವುದು ಉತ್ತಮ. ಕುಂಟ ಎತ್ತನ್ನು ಕಟ್ಟುವುದಕ್ಕಿಂತಲೂ ಕೊಟ್ಟಿಗೆಯು ಬರಿದಾಗಿರುವುದು ಲೇಸು. ವಿನಯವಿಲ್ಲದ ಕುಲಸತಿಯನ್ನು ಮದುವೆಯಾಗುವುದಕ್ಕಿಂತಲೂ ಸೂಳೆಯೊಡನೆ ಸಂಸಾರಮಾಡಿಕೊಂಡಿರುವುದು ಸುಖ. ವಿವೇಕವಿಲ್ಲದ ಅರಸನ ರಾಜ್ಯದಲ್ಲಿ ವಾಸಮಾಡುವುದಕ್ಕಿಂತಲೂ ಕಾಡಿನಲ್ಲಿರುವುದು ಶ್ಲಾಘ್ಯ. ನೀಚನ ಊಳಿಗಕ್ಕಿಂತಲೂ ಪ್ರಾಣಬಿಡುವುದು ಉತ್ತಮ. ಸೇವೆಯು ಅಭಿಮಾನವನ್ನು ಸೂರೆಗೊಳ್ಳುವುದು. ಬೆಳ್ದಿಂಗಳು ಕತ್ತಲೆಯನ್ನು ದೂಡುವುದು. ಮುಪ್ಪು ಚೆಲುವಿಕೆಯನ್ನು ಮಾಯಮಾಡುವುದು. ಮಹಾತ್ಮರಾದ ಪುಣ್ಯಪುರುಷರ ಕಥೆಯು ಪಾಪವನ್ನು ಕಳೆಯುವುದು. ಬಡತನವು ಅಂದರೆ ತಿರುಪೆಯು; ಗುಣಸಮುದಾಯವನ್ನೆಲ್ಲ ನುಂಗಿಬಿಡುವುದು."

ಈ ಪರಿಯಾಗಿ ಯೋಚಿಸುತ್ತ "ಅಕಟಾ! ನಾನೂ ಹೆರರ ಕೂಳಿನಿಂದ ಬದುಕಬೇಕೇ! ಕಷ್ಟ! ಅಯ್ಯೋ! ಬಹು ಕಷ್ಟ! ಇದಕ್ಕಿಂತಲೂ ಸಾವು ಸುಖಕರವಲ್ಲವೇ? ಏಕೆಂದರೆ–ತುಣುಕುಮಿಣುಕಿನ ತಿಳಿವಳಿಕೆ, ಬೆಲೆಕೊಟ್ಟು ಸಂಪಾದಿಸಿದ ಸುಖ, ಇತರರ ಅನ್ನಕ್ಕೆ ಕೈ ನೀಡುವುದು ಈ ಮೂರೂ ಮನುಷ್ಯನನ್ನು ಹಾಸ್ಯಕ್ಕೆ ಗುರಿಮಾಡುವುವು. ಬೇನೆಯಿಂದ ನರಳುವವನು, ಬಹಳ ಕಾಲ ದೂರದೇಶದಲ್ಲಿ ವಾಸಮಾಡತಕ್ಕವನು, ಹೆರರ ಕೂಳಿನಿಂದ ಬದುಕತಕ್ಕವನು, ಪರಗೃಹದಲ್ಲಿ ಮಲಗುವವನು–ಇವರ ಬಾಳ್ವಿಕೆಯು ಸಾವಿಗೆ ಸಮಾನ. ನಿಜವಾಗಿಯೂ ಸಾವು ಬಂದಿತೆಂದರೆ ಅದೀಗ ಅವರಿಗೆ

ವಿಶ್ರಾಂತಿ. ಹೀಗೆಂದು ಹಲವು ಪರಿಯಿಂದ ಯೋಚಿಸಿ, ಲೋಭಪೀಡಿತನಾಗಿ, ಪುನಃ ಹಣವನ್ನು ಸಂಪಾದಿಸಬೇಕೆಂಬ ಉದ್ದೇಶದಿಂದ ಒಂದು ಮನೆಯನ್ನು ಮಾಡಿದೆನು.''

''ಆಹಾ! ಲೋಭದ ಮಹಿಮೆಯನ್ನು ಎಷ್ಟು ಬಗೆಯಿಂದ ಬಣ್ಣಿಸಿದರೂ ಸಾಲದು. ಸಾಲದಿಂದ ಬುದ್ಧಿಯು ಚಲಿಸುವುದು. ಲೋಭವು ಆಸೆಯನ್ನು ಹೆಚ್ಚಿಸುವುದು. ಆಸೆಗೆ ಈಡಾದವನು ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ, ದುಃಖಕ್ಕೆ ಗುರಿಯಾಗುವನು. ಹೀಗೆ ಯೋಚಿಸುವಷ್ಟರಲ್ಲಿ ವೀಣಾಕರ್ಣನು, ಸೀಳಿದ ಬಿದಿರಿನಿಂದ ನನ್ನನ್ನು ಹೊಡೆದನು. ಆಗ ನಾನು ಈ ರೀತಿ ಯೋಚಿಸಿದೆನು–'ಲೋಭಪೀಡಿತನಾಗಿ ಸಂತುಷ್ಟಿಯಿಲ್ಲದವನು ಆತ್ಮದ್ರೋಹಿಯೆನಿಸುವುದು ಬಟವೇ ಸರಿ. ಲೋಭಿಗೆ ತೃಪ್ತಿಯೇ ಇಲ್ಲ. ಅವನು ಮನಸ್ಸನ್ನು ಬಿಗಿಹಿಡಿಯಲಾರನು. ಇಂದ್ರಿಯಗಳೂ ಅವನಿಗೆ ಅಣಗಲಾರವು. ಜಿಪುಣನು ಸಕಲವಿಧವಾದ ಆಪತ್ತುಗಳಿಗೂ ಗುರಿಯಾಗತಕ್ಕವನೇ ಸರಿ.'

''ತೃಪ್ತಿಯುಳ್ಳವನನ್ನು ಸಕಲಸಂಪತ್ತುಗಳೂ ವರಿಸುವುವು. ಮೆಟ್ಟನ್ನು ತೊಟ್ಟು ನಡೆಯುವವನು ಪ್ರಪಂಚವನ್ನೆಲ್ಲ ತೊಗಲಿನಿಂದ ಮುಚ್ಚಿರುವಂತೆಯೇ ಭಾವಿಸುವನು. ಸಂತೋಷವೆಂಬ ಅಮೃತವನ್ನು ಪಾನಮಾಡಿ, ದಣಿದು, ಮನಸ್ಸಿನಲ್ಲಿ ಕಾಮಕ್ರೋಧಗಳನ್ನು ಅಣಗಿಸಿದವನಿಗೆ ದೊರೆಯುವ ಸುಖವು, ದುರಾಶೆಯಿಂದ ಅಲೆಯುವವನಿಗೆ ಸಿಗುವುದೇ? ಆಸೆಯನ್ನು ಮೆಟ್ಟಿ ವೈರಾಗ್ಯವನ್ನು ಕೈಕೊಂಡರೆ ನಿಜವಾದ ಓದು, ತಿಳುವಳಿಕೆಗಳನ್ನು ಪಡೆದಂತಾಗುವುದು! ಅವನು ಸಕಲ ವಿಧವಾದ ಅನುಷ್ಠಾನಗಳನ್ನೂ ನೆರವೇರಿಸಿದಂತಾಗುವುದು.''

''ಹಣಗಾರರ ಬಾಗಿಲನ್ನು ಕಾಯದೆ, ಇಲ್ಲವೆಂಬ ಮಾತಿನಿಂದ ಮರುಗದೆ, ಮರುಕವನ್ನುಂಟುಮಾಡುವ ಮಾತನ್ನು ಬಾಯಿಂದ ಆಡದೆ, ಬದುಕುವವನ ಬಾಳು ನಿಜವಾದ ಬಾಳು. ಅವನೇ ಧನ್ಯನು. ಆನೆಯನ್ನೇರಿದವನಿಗೆ ನೂರುಗಾವುದವೂ ದೂರವಲ್ಲ. ತೃಪ್ತಿಯುಳ್ಳವನಿಗೆ ಅಂಗೈಯಲ್ಲಿರುವ ವಸ್ತುವಿನಲ್ಲಿಯೂ ಅಸಡ್ಡೆಯೇ ಸರಿ. ಆ ಕಾರಣ, ನನ್ನ ಈಗಿನ ಸ್ಥಿತಿಯನ್ನನುಸರಿಸಿ ಯುಕ್ತರೀತಿಯಿಂದ ನಿರ್ಣಯಿಸಿಕೊಳ್ಳುವುದು ಉತ್ತಮ. ಈ ವಿಷಯದಲ್ಲಿ ಹಿರಿಯರು ಈ ರೀತಿ ಹೇಳಿರುವರು.''

"ಪ್ರಾಣಿಗಳಲ್ಲಿ ದಯೆಯನ್ನು ತೋರುವುದಕ್ಕಿಂತ ಹೆಚ್ಚಿನ ಧರ್ಮವಿಲ್ಲ. ಆರೋಗ್ಯವನ್ನು ಮಿಂಚಿದ ಸುಖವಿಲ್ಲ. ನಂಬಿಕೆಗಿಂತ ಮಿಗಿಲಾದ ಸ್ನೇಹವಿಲ್ಲ. ವಿವೇಕಕ್ಕೆ ಸಮಾನವಾದ ಪಾಂಡಿತ್ಯವಿಲ್ಲ. ಆಪತ್ತು ಒದವಿದಾಗ ವಿವೇಕವನ್ನು ತಳೆಯುವುದೇ ಪಂಡಿತನ ಲಕ್ಷಣ. ವಿವೇಕವಿಲ್ಲದೆ ನಡೆಯುವವರು ಅಡಿಗಡಿಗೂ ಆಪತ್ತಿಗೆ ಗುರಿಯಾಗುವರು. ಕುಲವನ್ನು ಉಳಿಸಿಕೊಳ್ಳುವ ಸಲುವಾಗಿ ಒಬ್ಬನನ್ನು ಬಿಡಬೇಕು. ಒಂದು ಗ್ರಾಮವನ್ನು ಕಾಪಾಡುವ ಸಲುವಾಗಿ ಒಂದು ಮನೆತನವನ್ನಾದರೂ ಬಿಡಬೇಕು. ದೇಶವನ್ನು ರಕ್ಷಿಸುವುದಕ್ಕಾಗಿ ಗ್ರಾಮವನ್ನು ಬಿಡಬೇಕು. ತನಗೇ ವಿಪತ್ತು ಒದವಿದಾಗ ಭೂಮಿಯನ್ನೇ ಬಿಡಬೇಕು. ಕುಬೇರನಂತಹ ಹಣಗಾರನನ್ನು ಆಶ್ರಯಿಸಿದ್ದರೂ, ಫಲವು ತನ್ನ ಅದೃಷ್ಟಕ್ಕೆ ತಕ್ಕಂತೆಯೇ ದೊರೆಯುವುದು. ವಾಸುಕಿಯು ಶಿವನ ಕೊರಳಿಗೆ ಸುತ್ತಿಕೊಂಡಿದ್ದರೂ ಗಾಳಿಯನ್ನು ಸೇವಿಸಿಯೇ ಬದುಕಬೇಕು. ಅನಾಯಾಸವಾಗಿ ದೊರೆತ ನೀರನ್ನೂ, ಅಪಾಯಕರವಾದ ಮೃಷ್ಟಾನ್ನವನ್ನೂ ಹೋಲಿಸಿ ನೋಡಲಾಗಿ, ಅಪಾಯವಿಲ್ಲದೆ ದೊರೆತ ಉದಕವೇ ಸುಖಕರವೆನಿಸುವುದು."

"ಈ ರೀತಿಯಾಗಿ ಆಲೋಚಿಸಿ ನಿರ್ಜನವಾದ ಅರಣ್ಯವನ್ನು ಹೊಕ್ಕೆನು. ಏಕೆಂದರೆ, ಆನೆ ಹುಲಿಗಳಿಗೆ ಮನೆಯಾಗಿರುವ ಕಾಡಿನಲ್ಲಿ ಗಿಡಗಳನ್ನೇ ಮನೆಯಾಗಿ ಮಾಡಿಕೊಂಡು, ಕಳಿಮಾಗಿದ ಹಣ್ಣುಹಂಪಲನ್ನೂ ನೀರನ್ನೂ ಆಹಾರವಾಗಿ ಸೇವಿಸುತ್ತ, ಹುಲ್ಲಿನ ಮೇಲೆ ಮಲಗಿ, ಮರದ ತೊಗಟೆಯನ್ನು ಹೊದೆದು ಬದುಕುವುದಾದರೂ ಲೇಸು. ನಂಟರ ನಡುವೆ ಬಡತನದಿಂದ ಬದುಕುವುದು ಮಾತ್ರ ಎಂದಿಗೂ ತರವಲ್ಲ.' ಆ ಮೇಲೆ ನನ್ನ ಪುಣ್ಯಪರಿಪಾಕದಿಂದ ಈ ಗೆಳೆಯನು ತನ್ನ ಸ್ನೇಹದಿಂದ ನನ್ನನ್ನು ಅನುಗ್ರಹಿಸಿದನು. ಆ ಪುಣ್ಯದ ಫಲರೂಪವಾಗಿ ಈಗ ನಿನ್ನ ಸ್ನೇಹವೂ ಲಭಿಸಿತು. ಇದರಿಂದ ನನಗೆ ಸಾಕ್ಷಾತ್ತಾಗಿ ಸ್ವರ್ಗವೇ ದೊರೆತಂತಾಯಿತು.

ಸಂಸಾರವೆಂಬುದು ಒಂದು ವಿಷಮಯವಾದ ಮರ. ಆದರೂ ಇದರಲ್ಲಿ ಅಮೃತವನ್ನು ಹೋಲುವ ಎರಡು ಹಣ್ಣುಗಳಿವೆ. 'ಕಾವ್ಯಗಳಲ್ಲಿರುವ ಅಮೃತರಸವನ್ನು ಸವಿಯುವುದೊಂದು, ಸಜ್ಜನರ ಸಹವಾಸ ಇನ್ನೊಂದು. ಸತ್ಪುರುಷರ ಸಹವಾಸ, ಭಗವಂತನ ಅಡಿದಾವರೆಯಲ್ಲಿ ಭಕ್ತಿ, ಗಂಗೆಯಲ್ಲಿ

ವಿಾಯುವುದು— ಈ ಮೂರೂ ತಿರುಳಿಲ್ಲದ ಈ ಸಂಸಾರದಲ್ಲಿ ಸಾರವೆಂಬು ದಾಗಿ ತಿಳಿಯಬೇಕು.' ಬಳಿಕ ಮಂಥರಕನು ಇಂತೆಂದನು:—'ಹಣವು ಪಾದರಸದಂತೆ ಚಂಚಲವಾದುದು. ಯೌವನವು ಬೆಟ್ಟದಿಂದ ಹರಿಯುವ ಹೊಳೆಯಂತೆ ಅಸ್ಥಿರವಾದುದು. ಮನುಷ್ಯನ ಜೀವಿತವು ನೀರಮೇಲಣ ಗುಳ್ಳೆಯಂತೆ ನೋಡುತ್ತಿರುವಾಗಲೇ ಅಣಗಿಹೋಗುವುದು. ನರನ ಬಾಳು ಸಮುದ್ರದ ನೊರೆಯಂತೆ ಸಾರವಿಲ್ಲದುದು. ಸ್ವರ್ಗದ ಬಾಗಿಲನ್ನು ಒಡೆದು ಒಳಹುಗುವ ಯೋಗ್ಯತೆಯನ್ನು ಸಂಪಾದಿಸಿಕೊಡುವ ಧರ್ಮವನ್ನು ನಿಶ್ಚಲ ಬುದ್ಧಿಯಿಂದ ಆಚರಿಸದವನು, ಮುಪ್ಪಿನಲ್ಲಿ ಮರುಗುತ್ತ ಶೋಕಾಗ್ನಿಯಿಂದ ಬೇಯುವನು. ನೀನು ಬಹಳವಾಗಿ ಕೂಡಿಹಾಕಿ ಬಚ್ಚಿಟ್ಟೆ. ಇದೆಲ್ಲವೂ ಅದರ ಪರಿಣಾಮ. ಇತ್ತ ಕೇಳು:—

"ಒಳಗೆರೆಗೆ ಬರುವ ನೀರಿಗೆ ಕೋಡಿಯು ಹೇಗೋ ಹಾಗೆಯೇ ಗಳಿಸಿಟ್ಟ ಹಣಕ್ಕೆ ದಾನವೇ ಶ್ರೇಷ್ಠವಾದ ರಕ್ಷಣೆ. ಹೊಟ್ಟೆತುಂಬ ತಿನ್ನದೆ, ಆಳವಾಗಿ ನೆಲದಲ್ಲಿ ಹೂತಿಡುವುದು ತನ್ನ ಅಧೋಗತಿಗೆ ತಾನಾಗಿ ದಾರಿ ಮಾಡಿಕೊಂಡಂತೆಯೇ ಸರಿ. ಏಕೆಂದರೆ, 'ತನ್ನ ಸುಖವನ್ನೂ ಲೆಕ್ಕಿಸದೆ ಕೂಡಿಟ್ಟ ಹಣವು, ಹೆರರ ಸಲುವಾಗಿ ಭಾರವನ್ನು ಹೊತ್ತಂತೆಯೇ ಅಲ್ಲವೇ? ಇಂತಹ ವ್ಯರ್ಥವಾದ ಶ್ರಮದಿಂದ ಫಲವೇನು? ಒಬ್ಬರಿಗೆ ಕೊಡಬೇಕು. ತಾನೂ ಅನುಭವಿಸಬೇಕು.' ಇವೆರಡೂ ಇಲ್ಲದೆ ಸುಮ್ಮನೆ ಹೂತಿಟ್ಟ ಹಣದಿಂದ ಒಬ್ಬನನ್ನು ಹಣಗಾರನೆಂದು ಹೇಳಿದರೆ, ಅವನ ಹೂತಿಟ್ಟ ಅದೇ ಹಣದಿಂದಲೇ ನಾವೂ ಧನಿಕರೆನಿಸಿಕೊಳ್ಳಲಾಗದೇ?"

"ಜಿಪುಣನ ಹಣವು ಅನುಭವಕ್ಕೆ ಬಾರದುದರಿಂದ ಅದರ ವಿಷಯದಲ್ಲಿ ಹಕ್ಕು ಎಲ್ಲರಿಗೂ ಸಮಾನವಾಗಿಯೇ ಇರುವುದು. ಆದರೆ ಅದಕ್ಕೆ ದಿಟವಾದ ಧನಿ ಯಾರೆಂಬುದನ್ನು ತಿಳಿಯಬೇಕಾದರೆ, ಆ ಹಣವು ಹಾಳಾದಾಗ ಯಾವನು ದುಃಖಪಡುವನೋ ಅವನೇ ಅದರ ಯಜಮಾನನೆಂಬುದಾಗಿ ತಿಳಿಯಬಹುದು. ಲೋಭಿಯ ಹಣವು ದೇವರ ಉಪಯೋಗಕ್ಕೆ ಬಾರದು. ಬ್ರಾಹ್ಮಣನಿಗೂ ಅದು ಪ್ರಯೋಜನಕಾರಿಯಾಗಲಾರದು. ಬಂಧುಬಳಗಗಳಿಗೂ ಅದರಿಂದ ಫಲವಿಲ್ಲ. ತನಗಂತೂ ಇಲ್ಲವೇ ಇಲ್ಲ. ಇಂತಾದ ಬಳಿಕ ಬೆಂಕಿಗೋ, ಕಳ್ಳಕಾಕರಿಗೋ ಇಲ್ಲವೇ ಅರಸನಿಗೋ ಈಡಾಗುವುದೇ

ಸರಿ. ಸವಿಮಾತಿನಿಂದ ಕೂಡಿದ ದಾನ, ಹೆಮ್ಮೆಯಿಲ್ಲದ ಅರಿವು, ತಾಳ್ಮೆಯೊಡಗೂಡಿದ ಪರಾಕ್ರಮ, ಔದಾರ್ಯವುಳ್ಳ ಹಣ-ಈ ನಾಲ್ಕೂ ಲೋಕದಲ್ಲಿ ದುರ್ಲಭ.''

"ಹಣವನ್ನು ಅನುದಿನವೂ ಕೂಡಿಡಲೇ ಬೇಕು. ಆದರೆ ಮಿತಿಯಿಲ್ಲದೆ ಸಂಗ್ರಹಿಸಬಾರದು. ಸಂಗ್ರಹಶೀಲವಾದ ನರಿಯು ಬಿಲ್ಲಿನಿಂದ ಸತ್ತಿತಲ್ಲವೇ?''

ಈ ಮಾತನ್ನು ಕೇಳಿ ಲಘುಪತನಕವೂ ಹಿರಣ್ಯಕನೂ ಆ ಕಥೆಯನ್ನು ಹೇಳುವಂತೆ ಕೇಳಲಾಗಿ, ಮಂಥರಕನು ಹೇಳತೊಡಗಿದನು.

## ನರಿಯ ಕಥೆ

ಕಲ್ಯಾಣಕಟಕವೆಂಬ ನಗರದಲ್ಲಿ ಭೈರವನೆಂಬ ಬೇಡನಿದ್ದನು. ಅವನು ಒಂದು ದಿನ ಮಾಂಸಾಪೇಕ್ಷೆಯಿಂದ ಬಿಲ್ಲನ್ನು ತಳೆದು ವಿಂಧ್ಯಾರಣ್ಯವನ್ನು ಹೊಕ್ಕನು. ಅಲ್ಲಿ ಒಂದು ಹುಲ್ಲೆಯನ್ನು ಕೊಂದು, ತೆಗೆದುಕೊಂಡು ಬರುತ್ತಿರಲಾಗಿ, ಭಯಂಕರವಾದ ಒಂದು ಹಂದಿಯು ಕಾಣಿಸಿತು. ಅಷ್ಟರಲ್ಲಿ ಆ ಬೇಡನು ಹರಿಣವನ್ನು ಕೆಳಗೆ ಇಳಿಸಿ, ಹಂದಿಯನ್ನು ಅಂಬಿನಿಂದ ಹೊಡೆದನು. ಆಗ ಹಂದಿಯು ಗುಡುಗಿನಂತೆ ಘೋರವಾಗಿ ಗರ್ಜಿಸಿ, ಬೇಡನನ್ನು ಅಪಾಯಸ್ಥಳದಲ್ಲಿ ತಿವಿಯಿತು. ಆ ಪೆಟ್ಟನ್ನು ತಾಳಲಾರದೆ ಬೇಡನು ಕತ್ತರಿಸಿದ ಮರದಂತೆ ಉರುಳಿ ಬಿದ್ದನು. ಪ್ರಾಣಿಯು ಸಾಯಬೇಕಾದರೆ ನೀರು, ಬೆಂಕಿ, ವಿಷ, ಶಸ್ತ್ರ, ಹಸಿವು, ಬೇನೆ, ಮುಗ್ಗುರಿಸುವಿಕೆ ಮುಂತಾದ ಯಾವುದಾದರೊಂದು ಕಾರಣವು ಬೇಕು.

ಬೇಡನೂ ಹಂದಿಯೂ ನೆಲಕ್ಕೆ ಬಿದ್ದ ಪೆಟ್ಟಿನಿಂದ ನೆಲದ ಮೇಲೆ ಹರಿದಾಡುತ್ತಿದ್ದ ಒಂದು ನಾಗರಹಾವು ಸತ್ತಿತು. ಇಷ್ಟರಲ್ಲಿ ದೀರ್ಘರಾವನೆಂಬ ಒಂದು ನರಿಯು ಮೇವಿಗಾಗಿ ಅಲೆಯುತ್ತ ಅಲ್ಲಿಗೆ ಬಂದು ಸತ್ತುಬಿದ್ದಿರುವ ಹುಲ್ಲೆ, ಹಂದಿ, ಬೇಡ, ನಾಗರಹಾವು ಇವುಗಳನ್ನೆಲ್ಲ ಕಂಡು ಇಂತು ಆಲೋಚಿಸಿತು. "ನನಗೆ ಹೇರಳವಾಗಿ ಆಹಾರವು ದೊರೆತಿದೆ. ಇನ್ನು ನನ್ನ ಪುಣ್ಯಕ್ಕೆ ಎಣೆಯೇ ಇಲ್ಲ. ಪ್ರಾಣಿಗಳಿಗೆ ಎಡರುಗಳು ಅಕಸ್ಮಾತ್ತಾಗಿ ಹೇಗೆ ಒದಗುವುವೋ ಹಾಗೆಯೇ ಸಂಪತ್ತುಗಳೂ ಬರುವುವು.

ಈ ವಿಷಯದಲ್ಲಿ ದೈವಬಲವೇ ಮಿಗಿಲಾದುದು. ಭಲೆ! ಇವುಗಳ ಮಾಂಸವು ನನಗೆ ಮೂರು ತಿಂಗಳಿಗೆ ಸಾಕಾಗುವುದು. ಈ ಮನುಷ್ಯನ ದೇಹವು ಒಂದು ತಿಂಗಳ ವರೆಗೆ ಸಾಕಾಗುವುದು. ಹುಲ್ಲೆಯೂ ಹಂದಿಯೂ ಎರಡು ತಿಂಗಳಿಗೆ ಸಾಕಾಗುವುವು. ಅದರಿಂದ ಬಿಲ್ಲಿಗೆ ತಗುಲಿಕೊಂಡಿರುವ ಸವಿಯಿಲ್ಲದ ಈ ಒಣಕರುಳಿನ ಹಗ್ಗವನ್ನು ಮೊದಲು ತಿನ್ನುವೆನು''—ಹೀಗೆಂದು ಯೋಚಿಸಿ, ಕರುಳಿನ ಹಗ್ಗವನ್ನು ಹಲ್ಲಿನಿಂದ ಕಡಿದ ಕೂಡಲೇ ಬಿಲ್ಲು ಚಿಗಿದು, ನರಿಯ ಎದೆಗೆ ತಾಗಿದುದರಿಂದ ನರಿಯು ಅಲ್ಲಿಯೇ ಸತ್ತುಬಿದ್ದಿತು. ಆದುದರಿಂದ ಮಿತಿಮೀರಿ ಸಂಗ್ರಹಿಸಿಡಬಾರದು ಎಂಬದಾಗಿ ಹೇಳಿದೆನು.

"ಬದುಕಿರುವಾಗ ತಾನು ಅನುಭವಿಸಿದುದೇ, ಹಣಗಾರನ ಹಣಕ್ಕೆ ಪ್ರಯೋಜನ. ಸತ್ತಬಳಿಕ ಹಣವೂ ಮಿಕ್ಕ ಆಸ್ತಿಯೂ ಇತರರ ಸುಖಕ್ಕೆ ಉಪಯೋಗವಾಗುವುದು. ಆದರೆ ಕಳೆದ ಸಮಾಚಾರವನ್ನು ಕುರಿತು ಈಗ ವಿಚಾರಮಾಡಿ ಫಲವಿಲ್ಲ. ವಿವೇಕಸಂಪನ್ನರಾದವರು ದೊರೆಯದ ವಸ್ತುವನ್ನು ಬಯಸರು. ಅಂತೆಯೇ ಕಳೆದುಹೋದ ವಸ್ತುವಿಗಾಗಿ ಮರುಗುವುದೂ ಇಲ್ಲ. ಎಡರು ಒದವಿದರೂ ಭ್ರಾಂತಿಗೊಳ್ಳುವುದಿಲ್ಲ. ಎಲೇ ಮಿತ್ರನೆ! ಈ ಕಾರಣದಿಂದ ನೀನು ಎಷ್ಟು ಮಾತ್ರವೂ ಉತ್ಸಾಹ ವನ್ನು ಮಾತ್ರ ಬಿಡಬೇಡ. ಏಕೆಂದರೆ—ಶಾಸ್ತ್ರಗಳನ್ನು ಓದಿದ್ದರೂ ಮೂರ್ಖರಾಗುವರು. ಕಾರ್ಯವನ್ನು ಹೇಗಾದರೂ ಸಾಧಿಸತಕ್ಕವನೇ ಪಂಡಿತನು. ಔಷಧವು ಶಾಸ್ತ್ರವಿಹಿತವಾದ ರೀತಿಯಿಂದ ಚೆನ್ನಾಗಿ ಪರ್ಯಾ ಲೋಚಿಸಿ ನಿರ್ಮಿತವಾಗಿದ್ದರೂ, ಅದನ್ನು ಸೇವಿಸಿದರೆ ಮಾತ್ರವೇ ಗುಣ ಕೊಡುವುದು ಹೊರತು, ಅದರ ಹೆಸರನ್ನು ಕೇಳಿದ ಮಾತ್ರದಿಂದಲೇ ಬೇನೆಯು ಮಾಯವಾಗಲಾರದು. ಅಂತೆಯೇ ಕಾರ್ಯವನ್ನು ಸಾಧಿಸು ವುದರಲ್ಲಿ ಹಿಂಜರಿಯುವವನ ತಿಳಿವಳಿಕೆಯು ವ್ಯರ್ಥ. ಕುರುಡನ ಅಂಗೈ ಯಲ್ಲಿ ದೀಪವು ಇದ್ದ ಮಾತ್ರದಿಂದ ಫಲವೇನು? ಸುತ್ತುಮುತ್ತಣ ಪದಾರ್ಥ ಗಳೇನಾದರೂ ಕಂಡುಬರುವುದಿಲ್ಲವಷ್ಟೆ! ಸ್ನೇಹಿತನೆ! ಇಂತಹ ಅವಸ್ಥೆಯಲ್ಲಿ ಮನುಷ್ಯನಿಗೆ ತಾಳ್ಮೆಯಿರಬೇಕು. ಇದೊಂದು ದೊಡ್ಡ ಕಷ್ಟವೆಂಬುದಾಗಿ ಭಾವಿಸಬೇಡ. ಏಕೆಂದರೆ:—

“ಅರಸು, ಕುಲಸತಿ, ಬ್ರಾಹ್ಮಣ, ಮಂತ್ರಿ, ಹಲ್ಲು, ಕೂದಲು, ಉಗುರು, ಮನುಷ್ಯರು—ತಮ್ಮ ಸ್ಥಾನವನ್ನು ಬಿಟ್ಟರೆಂದರೆ ಶೋಭಿಸುವುದಿಲ್ಲ. ಈ ರಹಸ್ಯವನ್ನು ಚೆನ್ನಾಗಿ ನೆನಪಿನಲ್ಲಿಟ್ಟುಕೊಂಡು, ಬುದ್ಧಿಶಾಲಿಯು ತನ್ನ ಸ್ಥಳವನ್ನು ಬಿಡಬಾರದೆಂದು ವಾದಿಸುವುದು ಹೇಡಿಗಳ ಮಾತು. ಹೇಗೆಂದರೆ,—“ಮಾನವಂತನಿಗೆ ಸ್ವದೇಶವಾವುದು? ಪರದೇಶವಾವುದು? ಎರಡೂ ಏಕಪ್ರಕಾರವಾಗಿರುವುವು. ಆತನು, ತಾನು ಸೇರಿದ ದೇಶವನ್ನೆಲ್ಲ ತನ್ನ ಪರಾಕ್ರಮದಿಂದಲೂ ಗುಣಸಂಪತ್ತಿಯಿಂದಲೂ ವಶಪಡಿಸಿಕೊಳ್ಳುವನು. ಸಿಂಹವು ಯಾವ ಅಡವಿಯನ್ನು ಹುಗುವುದೋ ಅಲ್ಲಿ, ತನ್ನ ಕೋರೆಹಲ್ಲು, ಉಗುರು, ಬಾಲ ಮುಂತಾದ ಆಯುಧಗಳಿಂದ ಮದಿಸಿದ ಆನೆಗಳನ್ನೂ ಉರುಳಿಸಿ, ಅವುಗಳ ನೆತ್ತರಿನಿಂದ ತನ್ನ ಬಾಯಾರಿಕೆಯನ್ನು ತೀರಿಸಿಕೊಳ್ಳುವುದು. ಕಪ್ಪೆಗಳು ಕುಂಟೆಯನ್ನೂ, ಜಲಚರ ಪಕ್ಷಿಗಳು ತುಂಬಿದ ಕೊಳವನ್ನೂ ಸೇರುವಂತೆ, ಉದ್ಯೋಗಶೀಲನನ್ನು ಸಿರಿಯು ತಾನಾಗಿಯೇ ಒಲಿದು ಬರುವಳು. ಒದವಿದ ಕಷ್ಟಸುಖಗಳನ್ನು ಸಮವಾಗಿ ಭಾವಿಸಿ, ಅನುಭವಿಸಲೇ ಬೇಕು. ಸುಖದುಃಖಗಳು ಚಕ್ರದಂತೆ ಸುತ್ತುವುವು.”

“ಉತ್ಸಾಹಶಾಲಿಯೂ, ಕಾರ್ಯಗಳನ್ನು ಆಲಸ್ಯವಿಲ್ಲದೆ ನಡೆಸತಕ್ಕ ರೀತಿಯನ್ನು ಬಲ್ಲವನೂ, ಜೂಜು, ಕುಡಿತ ಮುಂತಾದ ದುರ್ವ್ಯಸನಗಳಿಗೆ ಒಳಪಡದವನೂ, ಶೂರನೂ, ಕೃತಜ್ಞನೂ, ದೃಢವಾದ ಸ್ನೇಹವುಳ್ಳವನೂ ಎನಿಸಿದ ಪುರುಷನನ್ನು, ಸಿರಿಯು ತನ್ನ ನೆಲೆಗಾಗಿ, ತಾನೇ ಹುಡುಕಿಕೊಂಡು ಬರುವಳು. ಧೀರನು ಹಣಗಾರನಲ್ಲದಿದ್ದರೂ ಸತ್ಕಾರದಿಂದಲೇ ಉನ್ನತಪದವಿಯನ್ನು ಏರುವನು. ಹೇರಳವಾಗಿ ಹಣವಿದ್ದರೂ ಜಿಪುಣನು ಅವಮಾನಕ್ಕೆ ಗುರಿಯಾಗುವನು. ನಾಯಿಯ ಕೊರಳಿನಲ್ಲಿ ಚಿನ್ನದ ಹಾರವನ್ನು ಹಾಕಿದ ಮಾತ್ರದಿಂದ, ಸಿಂಹದ ಸಹಜವಾದ ಗುಣಸಂಪತ್ತಿಯೂ, ಗಾಂಭೀರ್ಯವೂ, ಕಾಂತಿಯೂ ಅದಕ್ಕೆ ಬರುವುದುಂಟೇ?”

“ಹಣವಿರುವಾಗ ಹೆಮ್ಮೆ ಏಕೆ? ಐಶ್ವರ್ಯವು ತೊಲಗಿದಾಗ ಮರುಗಿ ಫಲವೇನು? ಕೈಯಿಂದ ಹೊಡೆದರೆ ಪುಟಹಾರಿ ನೆಲಕ್ಕೆ ಬೀಳುವ ಚೆಂಡಿನಂತೆ ಮನುಷ್ಯರಿಗೆ ಬೀಳುವುದೂ, ಏಳುವುದೂ, ಸಹಜವಷ್ಟೆ! ಮೋಡದ ನೆರಳು,

ದುರುಳರ ಗೆಳೆಯತನ, ಹೊಸಪೈರು, ಎಷ್ಟು ಕಾಲ ಸುಖವನ್ನೀಯಬಲ್ಲುವು? ಹಣವೂ, ಹರೆಯವೂ ಅಂತೆಯೇ ಸರಿ. ಜೀವನಕ್ಕಾಗಿ ಬಹಳವಾಗಿ ಚಿಂತಿಸ ಬೇಡ. ಅದನ್ನು ಮೊತ್ತಮೊದಲೇ ದೇವರು ವಿಧಿಸಿಯೇ ಇರುತ್ತಾನೆ. ಭೂಮಿಯ ಮೇಲೆ ಜನ್ಮವೆತ್ತಿದ ಕೂಡಲೇ, ಜನನಿಯು ಮೊಲೆಯನ್ನು ಉಡಿಸುವುದೇ ಇದಕ್ಕೆ ಉದಾಹರಣೆ ಎಂಬೀ ಮಾತುಗಳನ್ನು ಹೇಳಿ ಮಂಥರಕವು ಹಿರಣ್ಯಕನನ್ನು ಸಮಾಧಾನಗೊಳಿಸಿತು.

ಆಗ ಲಘುಪತನಕವು ಇಂತೆಂದಿತು:—“ಧನ್ಯನು! ಮಂಥರಕನೇ! ನೀನೇ ಧನ್ಯನು. ನಿನ್ನ ಗುಣಸಂಪತ್ತಿಯನ್ನು ಎಷ್ಟು ಕೊಂಡಾಡಿದರೂ ತೀರದು. ಭಲೆ! ಮಿತ್ರನೆ! ಭಲೆ! ಹಂಸೆಗಳನ್ನು ಬಿಳುಪಾಗಿಯೂ, ಗಿಳಿ ಗಳನ್ನು ಹಸುರಾಗಿಯೂ, ನವಿಲುಗಳನ್ನು ಚಿತ್ರವಿಚಿತ್ರವಾಗಿಯೂ ನಿರ್ಮಿಸಿ ದವನೇ ನಾವು ಬದುಕುವ ಮಾರ್ಗವನ್ನೂ ಏರ್ಪಡಿಸಿರುವನು. ಸ್ನೇಹಿತನೆ! ಇನ್ನೊಂದು ರಹಸ್ಯವನ್ನು ಹೇಳುವೆನು. ಕೇಳು! ಸುಮ್ಮನೆ ಹಣ-ಹಣ- ಎಂದು ಬಾಯಿಬಿಡುತ್ತಾರೆ. ಗಳಿಸುವುದೆಂದರೆ ಬಾಯಿಮಾತಲ್ಲ. ನಾಶ ವಾದರೆ ಎಷ್ಟೋ ದುಃಖವಾಗುವುದು. ಸಂಪನ್ನನಾಗಿರುವಾಗ ಮೋಹ ಗೊಳಿಸುವುದು. ಇಂತಿರಲು ಹಣವು ಸುಖವನ್ನು ಒದವಿಸುವುದೆಂಬು ದಾದರೂ ಹೇಗೆ? ಧರ್ಮಸಂಪಾದನೆಗಾಗಿಯಾದರೂ ಹಣವನ್ನು ಬಯಸ ದಿರುವುದೇ ಲೇಸು. ಕೆಸರನ್ನು ತುಳಿದು ಕಾಲು ತೊಳೆದುಕೊಳ್ಳುವುದ ಕ್ಕಿಂತಲೂ ಅದು ತಾಗದಂತೆ ದೂರದಲ್ಲಿರುವುದೇ ಲೇಸು. ಏಕೆಂದರೆ, ಅಂತ ರಿಕ್ಷದಲ್ಲಿ ಸಂಚರಿಸುವ ಹಕ್ಕಿಗಳೂ, ನೆಲದ ಮೇಲೆ ಓಡಾಡುವ ಕ್ರೂರಮೃಗ ಗಳೂ, ಜಲಚರಗಳಾದ ಮೀನುಮೊಸಳೆಗಳೂ ಮಾಂಸವನ್ನು ಅಪೇಕ್ಷಿಸು ವಂತೆಯೇ, ಹಣಗಾರನನ್ನು ಎಲ್ಲರೂ ಸುಲಿದು ತಿನ್ನುವರು. ಪ್ರಾಣಿಗಳು ಮೃತ್ಯುವಿಗೆ ಹೆದರುವಂತೆಯೇ ಹಣಗಾರನು ಅರಸು, ನೀರು, ಬೆಂಕಿ, ಕಳ್ಳಕಾಕರು, ನಂಟರಿಷ್ಟರು-ಇವರೆಲ್ಲರಿಗೂ ಭಯಪಡಬೇಕು. ಹೀಗಿದ್ದರೂ ಬಯಸಿದ ವಸ್ತುವಂತೂ ಸುಲಭವಾಗಿ ದೊರೆಯುವುದಿಲ್ಲ. ಆಸೆಯೂ ತೀರುವುದಿಲ್ಲ.”

“ಅಕಟಾ! ಕಷ್ಟಪರಂಪರೆಗಳಿಂದ ನಿಬಿಡವಾದ ಈ ಜನ್ಮದಲ್ಲಿ ಇದ ಕ್ಕಿಂತಲೂ ಮಿಗಿಲಾದ ದುಃಖವು ಬೇರೊಂದು ಇರುವುದೇ? ಅಣ್ಣಾ!

ಇನ್ನೂ ಲಾಲಿಸು. ಹಣವಾದರೂ ಸುಲಭವಾಗಿ ದೊರೆಯುವಂತಿಲ್ಲ. ದೊರೆತರೂ ಅದನ್ನು ಜೋಪಾನವಾಗಿಟ್ಟುಕೊಳ್ಳುವುದು ಎಷ್ಟೋ ಕಷ್ಟ. ದೊರೆತುದೂ ಒಮ್ಮೆ ಹಾಳಾಯಿತೆಂದರೆ, ಪ್ರಾಣಗಳೇ ಹಾರಿಹೋದಂತಾಗುವುದು. ಆ ಕಾರಣದಿಂದ ಹಣವನ್ನು ಸ್ಮರಿಸಲೇ ಬೇಡ. ಆಶೆಯನ್ನು ತೊರೆದ ಬಳಿಕ ಬಡವನಾರು? ಬಲ್ಲಿದನಾರು? ಅದಕ್ಕೆ ಎಡೆಕೊಟ್ಟೆವಾದರೆ ಊಳಿಗವು ತಲೆಯ ಮೇಲೆ ಸಿದ್ಧವಾಗಿ ಕುಳಿತುಕೊಳ್ಳುವುದು. ಬಯಕೆಗಳು ಹೆಚ್ಚುತ್ತ ಬಂದ ಹಾಗೆಲ್ಲ ಆಶೆಯೂ ವೃದ್ಧಿ ಹೊಂದುವುದು. ಯಾವ ವಸ್ತುವನ್ನು ನಾವು ಬಯಸುವುದಿಲ್ಲವೋ ಅದು ನಮಗೆ ದೊರೆತಂತೆಯೇ ಸರಿ. ಹೆಚ್ಚು ಮಾತಿನಿಂದೇನು? ವಿನೋದವಾಗಿ ಮಧುರಾಲಾಪಗಳಿಂದ ಇಲ್ಲಿಯೇ ಕಾಲ ಕಳೆಯುತ್ತಿದ್ದರಾಯಿತು. ಏಕೆಂದರೆ,—

"ಮಹಾತ್ಮರ ಸ್ನೇಹವು ಸಾಯುವ ವರೆಗೂ ಸ್ಥಿರವಾದುದು. ಕೋಪವು ಉತ್ತರ ಕ್ಷಣದಲ್ಲಿಯೇ ಶಾಂತವಾಗುವುದು. ಭೋಗಭಾಗ್ಯಗಳನ್ನು ಲಕ್ಷ್ಯವಿಲ್ಲದೆ ತೊರೆಯುವರು. ಯಾವ ಪ್ರಾಣಿಯಾದರೂ ಮೇಲೆ ಮೇಲೆ ಏಳಿಗೆಯನ್ನು ಪಡೆಯಿತೆಂದರೆ ಎಂದಾದರೊಂದು ದಿನ ಉರುಳಿ ಬೀಳುವುದೇ ದಿಟ. ಅಂತೆಯೇ ಸಂಯೋಗವು ವಿಯೋಗವನ್ನೇ ಎದುರುನೋಡುತ್ತಿರುವುದು. ಬದುಕುವುದು ಕೂಡ ಸಾಯುವ ಸಲುವಾಗಿಯೇ ಸರಿ. ಯಾವಾಗಲೂ ಸಜ್ಜನರನ್ನು ಸಜ್ಜನರೇ ಆಪತ್ತಿನಿಂದ ಕಡೆಹಾಯಿಸಬಲ್ಲರು. ಕೆಸರಿನಲ್ಲಿ ಹೂತು ಬಿದ್ದ ಆನೆಗಳನ್ನು ಆನೆಗಳೇ ಮೇಲಕ್ಕೆ ಎಬ್ಬಿಸತಕ್ಕುವು. ಗುಣಶಾಲಿಯು ಗುಣವಂತನನ್ನು ಮೆಚ್ಚಿ ಪ್ರೀತಿಸುತ್ತಾನೆ. ಗುಣವೂ ಶೀಲವೂ ಇಲ್ಲದವನು ಗುಣವಂತನನ್ನು ಪ್ರೀತಿಸಲಾರನು. ತುಂಬಿಯು ಯಾವುದೋ ಕಾಡಿನಿಂದ ಬಂದು, ಕೊಳದಲ್ಲಿರುವ ತಾವರೆಯನ್ನು ಸೇರುವುದು. ಕಪ್ಪೆಯು ಅನುದಿನ ತಾವರೆಯೊಡನೆಯೇ ವಾಸಮಾಡುತ್ತಿರುವುದಾದರೂ, ತಾವರೆಯ ಪರಿಮಳಕ್ಕೆ ಬೆರಗಾಗಿ ಅದನ್ನು ಮೋಹಿಸಲಾರದು. ಯಾವನ ಬಳಿಗೆ ಯಾಚಕರೂ, ಶರಣಾರ್ಥಿಗಳೂ ಬಂದು ನಿರಾಶೆಯಿಂದ ಹಿಂದಿರುಗುವರೋ, ಅವನನ್ನು ಒಬ್ಬ ಮನುಷ್ಯನೆನ್ನಬಹುದೇ? ಏನೋ ಒಂದು ಬಗೆಯ ಆಶೆಯಿಂದ ಹತ್ತಿರ ಬಂದವನನ್ನು ಅಕ್ಕರೆಯಿಂದ ಮನ್ನಿಸತಕ್ಕವನೇ ಶ್ಲಾಘನೀಯನು. ಅವನೇ ಉತ್ತಮನು. ಅವನಿಗಿಂತಲೂ ಸಚ್ಚರಿತರಿಲ್ಲ. ಅವನೇ ಕೃತಕೃತ್ಯನು."

ಇಂತು ಆ ಮೂವರೂ ತಮ್ಮ ಇಷ್ಟಾನುಸಾರ ಆಹಾರವಿಹಾರಗಳನ್ನು ನಡೆಯಿಸುತ್ತ ಸಂತುಷ್ಟಚಿತ್ತರಾಗಿ ಸುಖದಿಂದ ಕಾಲಹರಣ ಮಾಡುತ್ತಿರುವಲ್ಲಿ, ಚಿತ್ರಾಂಗವೆಂಬ ಹುಲ್ಲೆಯು ಹೆದರಿ, ಎಲ್ಲಿಂದಲೋ ಬೇಗನೇ ಓಡಿ ಬಂದು ಅಲ್ಲಿಗೆ ಸೇರಿತು. ಇಂತು ಓಡಿಬಂದ ಹುಲ್ಲೆಯ ವೇಗದಿಂದ ಹೆದರಿ, ಮಂಥರಕವು ನೀರಿನಲ್ಲಿ ಅವಿತುಕೊಂಡಿತು. ಇಲಿಯು ಬಿಲವನ್ನು ಹೊಕ್ಕಿತು. ಕಾಗೆಯು ಹಾರಿ, ಮರದ ಮೇಲೆ ಕುಳಿತು, ಸುತ್ತಲು ನೋಡಿದರೂ, ಅಂಜಿಕೆಗೆ ಕಾರಣವೇನೆಂಬುದು ತಿಳಿಯಲಿಲ್ಲ. ಬಳಿಕ ಮುಂಚಿನಂತೆಯೇ ಕುಳಿತು ಮಾತನಾಡತೊಡಗಿದುವು. ಆಗ ಮಂಥರಕನು ಹುಲ್ಲೆಯನ್ನು ಕುರಿತು ಅಕ್ಕರೆಯಿಂದ ಇಂತೆಂದಿತು:—"ಮಂಗಳಾಂಗನೆ! ಕುಶಲವೇ? ಇಲ್ಲಿರುವ ನೀರು, ಪೈರುಪಚ್ಚೆಗಳನ್ನು ಸುಖವಾಗಿ ಅನುಭವಿಸಬಹುದು. ಇಲ್ಲಿ ನೀನು ವಾಸಮಾಡುವ ಮೂಲಕ, ಈ ಅರಣ್ಯವು ಸನಾಥವೆನಿಸಲಿ."

ಈ ಮಾತನ್ನು ಕೇಳಿ ಚಿತ್ರಾಂಗನು—"ಅಯ್ಯಾ! ನಾನು ಬೇಡನಿಗೆ ಹೆದರಿ ನಿಮ್ಮನ್ನು ಮರೆಹೊಕ್ಕಿರುವೆನು. ಏಕೆಂದರೆ,—ಲೋಭದಿಂದಾಗಲಿ, ಭಯದಿಂದಾಗಲಿ, ಮರೆಹೊಕ್ಕವನನ್ನು ಕೈಬಿಟ್ಟರೆ ಅಂತಹವನು ಬ್ರಹ್ಮಹತ್ಯಾದೋಷಕ್ಕೆ ಗುರಿಯಾಗುವನೆಂಬದಾಗಿ ಹಿರಿಯರು ಹೇಳುತ್ತಾರೆ: ಆ ಕಾರಣ ನಿಮ್ಮೊಡನೆ ಮೈತ್ರಿಯನ್ನು ಬಯಸಿ ಬಂದಿರುವೆನು." ಎಂಬುದಾಗಿ ಹೇಳಿತು. ಆಗ ಹಿರಣ್ಯಕನು—"ನಮ್ಮ ಸ್ನೇಹವು ನಿನಗೆ ಸಹಜವಾಗಿಯೇ ಸಿದ್ಧಿಸಿರುವುದು. ಏಕೆಂದರೆ,—ಹೊಟ್ಟೆಯಲ್ಲಿ ಅಥವಾ ಸಂಗಡ ಹುಟ್ಟಿದವನು, ಸಂಬಂಧವನ್ನು ಬಳೆಸಿದವನು, ವಂಶಪರಂಪರೆಯಿಂದ ಬಂದವನು, ಮರೆ ಹೊಕ್ಕವನು ಎಂಬೀ ರೀತಿ ಮಿತ್ರರು ನಾಲ್ಕು ಬಗೆಯಾಗಿರುವರು. ಅದರಿಂದ ನೀನು ಇಲ್ಲಿ ನಿನ್ನ ಮನೆಯಲ್ಲಿರುವಂತೆಯೇ ಸಂಕೋಚವಿಲ್ಲದೆ ಇರಬಹುದು" ಎಂದಿತು. ಈ ಮಾತನ್ನು ಕೇಳಿ ಹುಲ್ಲೆಯು ಸಂತೋಷದಿಂದ ಉಬ್ಬಿ, ಸ್ವೇಚ್ಛೆಯಾಗಿ ಹುಲ್ಲು ಮೇಯುತ್ತ, ನೀರು ಕುಡಿದು, ನೀರಿನ ಹತ್ತಿರವೇ ಇದ್ದ ಒಂದು ಆಲದ ಮರದ ನೆರಳಿನಲ್ಲಿ ಕುಳಿತುಕೊಂಡಿತು. ಏಕೆಂದರೆ-ಬಾವಿಯ ನೀರು, ಆಲದ ನೆರಳು, ತಾಂಬೂಲ, ಇಟ್ಟಿಗೆಯ ಮನೆ—ಇವು ಚಳಿಗಾಲದಲ್ಲಿ ಬೆಚ್ಚಗೂ, ಬಿಸಿಲುಕಾಲದಲ್ಲಿ ತಣ್ಣಗೂ ಇರುತ್ತವೆ.

ಆಗ ಮಂಥರಕನು ಚಿತ್ರಾಂಗನನ್ನು ನೋಡಿ, “ಮಿತ್ರನೆ! ನಿನ್ನ ಅಂಜಿಕೆಗೆ ಕಾರಣವೇನು? ಜನಸಂಚಾರಶೂನ್ಯವಾದ ಈ ಕಾಡಿನಲ್ಲಿ ಬೇಡರ ಸುಳಿವು ಇರುವುದೇ?” ಎಂದು ಪ್ರಶ್ನೆ ಮಾಡಿತು. ಅದಕ್ಕೆ ಜಿಂಕೆಯು ಇಂತೆಂದಿತು:—“ಕಳಿಂಗದೇಶದಲ್ಲಿ ರುಕ್ಮಾಂಗದನೆಂಬ ಅರಸು ರಾಜ್ಯಭಾರ ಮಾಡುತ್ತಿರುವನಷ್ಟೆ. ಆತನು ದಿಗ್ವಿಜಯಾರ್ಥವಾಗಿ ತೆರಳಿ ಬಂದು, ಚಂದ್ರಭಾಗಾನದಿಯ ತೀರದಲ್ಲಿ ಬಿಡಾರ ಮಾಡಿರುತ್ತಾನೆ. ನಾಳೆ ಬೆಳಗಾಗುವ ಹೊತ್ತಿಗೆ ಆತನು ಈ ಕರ್ಪೂರಸರೋವರದ ಬಳಿಯಲ್ಲಿ ಇಳಿದುಕೊಳ್ಳುವನೆಂಬುದಾಗಿ ಬೇಡರ ಮೂಲಕ ಕೇಳಿದೆನು. ಈ ಕಾರಣದಿಂದ ಬೆಳಗಾದ ಮೇಲೆ ಇಲ್ಲಿರುವುದು ಕೂಡ ಅಪಾಯಕರವೆಂತಲೇ ಭಾವಿಸುವೆನು. ಇದನ್ನೆಲ್ಲ ಕೇಳಿದೆಯಲ್ಲವೆ! ಮುಂದೆ ಕರ್ತವ್ಯವನ್ನು ನೀನೆ ಯೋಚಿಸು.” ಈ ಮಾತನ್ನು ಕೇಳಿ ಆಮೆಯು ಹೆದರಿ—“ನಾನು ಇನ್ನೊಂದು ಕಡೆಗೆ ಹೋಗುವೆನು” ಎಂದಿತು. ಕಾಗೆಯೂ ಜಿಂಕೆಯೂ ಅದೇ ಸೂಕ್ತವೆಂಬುದಾಗಿ ಭಾವಿಸಿ, ಅಂತೆಯೇ ಮಾಡು ಎಂದುವು. ಆಗ ಹಿರಣ್ಯಕನು ಸ್ವಲ್ಪ ಯೋಚಿಸಿ “ಮತ್ತೊಂದು ಕೊಳವು ದೊರೆತರೆ ಮಂಥರಕನಿಗೆ ಭಯವಿಲ್ಲ. ಆದರೆ ನೆಲದ ಮೇಲೆ ಹೋಗುವಾಗ ಏನಾದರೊಂದು ವಿಪತ್ತು ಸಂಭವಿಸಿದರೆ ಪಾರಾಗುವ ಬಗೆ ಯಾವುದು? ಜಲಜಂತುಗಳಿಗೆ ನೀರೇ ದೊಡ್ಡ ಒತ್ತಾಸೆ. ನಾಗರಿಕರಿಗೆ ಕೋಟೆಯು ಪ್ರಬಲವಾದ ಬೆಂಬಲ. ಘಾತುಕಮೃಗಗಳಿಗೆ ತಮ್ಮ ವಾಸಸ್ಥಾನವೇ ದೊಡ್ಡ ಬಲ. ಅರಸನಿಗೆ ಸೇನೆಯೇ ಸಹಾಯ. ಮಿತ್ರನೆ! ಲಘುಪತನಕನೆ! ಈ ನಿಮ್ಮ ಸಲಹೆಯನ್ನು ನಾನು ಮೆಚ್ಚಲಾರೆನು. ಉಪಾಯದಿಂದ ಸಾಧಿಸಲು ಯೋಗ್ಯವಾದ ಕಾರ್ಯದಲ್ಲಿ ಪರಾಕ್ರಮವನ್ನು ತೋರಿ ಫಲವಿಲ್ಲ. ಕೆಸರಿನಲ್ಲಿ ನಡೆತಂದ ಆನೆಯನ್ನು ನರಿಯು ಕೊಲ್ಲಲಿಲ್ಲವೇ? ಆ ಕಥೆಯನ್ನು ಕೇಳು!”

### ಉಪಕಥೆ ೨

ಬ್ರಹ್ಮಾರಣ್ಯದಲ್ಲಿ ಕರ್ಪೂರತಿಲಕವೆಂಬ ಆನೆಯು ಇದ್ದಿತು. ಅದನ್ನು ಕಂಡು ನರಿಗಳೆಲ್ಲವೂ ಈ ರೀತಿ ಯೋಚಿಸಿದುವು:—“ಯಾವುದಾದರೊಂದು ಬಗೆಯಿಂದ ಇದು ಸತ್ತರೆ, ಇದರ ದೇಹವು ನಮಗೆ ನಾಲ್ಕು ತಿಂಗಳಿಗೆ

ಸಮೃದ್ಧವಾದ ಆಹಾರವಾಗುವುದು''. ಆಗ ಆ ಗುಂಪಿನಲ್ಲಿದ್ದ ಒಂದು ಮುದಿ ನರಿಯು—"ನಾನು ನನ್ನ ಬುದ್ಧಿಬಲದಿಂದ ಇದನ್ನು ಕೊಲ್ಲುವೆನು" ಎಂದು ಪ್ರತಿಜ್ಞೆ ಮಾಡಿತು. ತರುವಾಯ ಆ ಜಂಬೂಕವು ಕರ್ಪೂರತಿಲಕನ ಬಳಿಸಾರ್ದು, ಸಾಷ್ಟಾಂಗವೆರಗಿ-"ದೇವಾ! ಇತ್ತ ಲಾಲಿಸು" ಎಂದಿತು.

ಆನೆ—"ನೀನು ಯಾರು? ಬಂದ ಕಾರ್ಯವೇನು?''

ನರಿ—"ನಾನೊಂದು ಬಡ ನರಿ. ಈ ಕಾಡಿನಲ್ಲಿ ವಾಸಮಾಡುವ ಜೀವಜಂತುಗಳೆಲ್ಲವೂ ಗುಂಪು ಸೇರಿ, ಯೋಚಿಸಿ, ನನ್ನನ್ನು ತಮ್ಮ ಸನ್ನಿಧಿಗೆ ಕಳುಹಿದುವು. ಏಕೆಂದರೆ, ನಮಗೆ ಯಾರೂ ದಣಿಯೇ ಇಲ್ಲ. ಇಂತು ಅರಸನಿಲ್ಲದಿರುವುದು ತರವಲ್ಲ. ಈ ಅರಣ್ಯರಾಜ್ಯಾಧಿಪತ್ಯವನ್ನು ಕೈಕೊಳ್ಳಲು, ರಾಜನಲ್ಲಿ ಅವಶ್ಯವಾಗಿರಬೇಕಾದ ಸಕಲ ರಾಜಲಕ್ಷಣಗಳೂ ಮತ್ತಾರಲ್ಲಿಯೂ ಕಂಡುಬರುವುದಿಲ್ಲ. ಈಗ ನಿನ್ನನ್ನು ಬಿಟ್ಟರೆ, ಮತ್ತಾರೂ ಈ ಪದವಿಗೆ ತಕ್ಕವರಲ್ಲ. ಅದರಿಂದ ನಿನಗೆ ಪಟ್ಟಕಟ್ಟಬೇಕೆಂಬುದಾಗಿ ನಿಶ್ಚಯಿಸಿಕೊಂಡಿವೆ. ಕುಲಧರ್ಮಗಳನ್ನರಿತು, ಲೋಕಮರ್ಯಾದೆಯನ್ನು ಚೆನ್ನಾಗಿ ತಿಳಿದು, ಶುದ್ಧಚಿತ್ತನೂ, ಪ್ರತಾಪಶಾಲಿಯೂ, ಧಾರ್ಮಿಕನೂ, ನೀತಿನಿಪುಣನೂ ಎನಿಸಿದವನೇ ರಾಜಪದವಿಗೆ ತಕ್ಕವನು. ಇತ್ತ ಲಾಲಿಸಬೇಕು; ಮೊತ್ತಮೊದಲು ಅರಸನನ್ನು ಏರ್ಪಡಿಸಿಕೊಳ್ಳಬೇಕು. ದೊರೆಯು ಒಬ್ಬನಿದ್ದರಲ್ಲವೇ ಲೋಕದಲ್ಲಿ ನೀತಿಯು ನೆಲೆಗೊಳ್ಳುವುದು? ಆ ಮೇಲೆ ಮನೆಮಠ, ಮಡದಿಮಕ್ಕಳು, ಹಣಕಾಸು, ಇವುಗಳ ಚಿಂತೆ. ಮೇಘದಂತೆಯೇ ಅರಸನೂ ಲೋಕಕ್ಕೆ ಒಡೆಯನು. ಇನ್ನೂ ಒಂದು ಪಾಲು ಹೆಚ್ಚೆಂತಲೇ ಹೇಳಬೇಕು. ಮೋಡವು ಒಮ್ಮೆ ಮಳೆ ಸುರಿಸದಿದ್ದರೂ, ಹೇಗೋ ಬದುಕಿರಬಹುದು. ಅರಸನಿಲ್ಲದಿದ್ದರೆ ಮಾತ್ರ ಸಾಧ್ಯವೇ ಇಲ್ಲ. ಲೋಕದಲ್ಲೆಲ್ಲ ನೀತಿಯ ಬಿಗಿಯು ಸಡಿಲವಾಗಿ ಜನರು ಸ್ವತಂತ್ರರಾಗುವರು. ರಾಜದಂಡನೆಗೆ ಹೆದರಿ, ಲೋಕವು ಮಿತಿಮೀರಿ ಹೋಗದೆ ಹದ್ದಿನಲ್ಲಿರುವುದು. ಲೋಕದಲ್ಲಿ ಪರವಶತೆಯು ಕಾಲೂರಿತೆಂದರೆ, ಸಜ್ಜನರು ವಿರಳರಾಗುವರು. ಕೃಶನೂ, ಕುರೂಪಿಯೂ, ರೋಗಿಯೂ ಆಗಿದ್ದರೂ ಗಂಡನೆಂಬುವವನು ಹೆಸರಿಗಾದರೂ ಇದ್ದರಲ್ಲವೇ ಸತಿಗೆ ಭೂಷಣ?

ಆದರಿಂದ ಬೇಗನೆ ಬಿಜ ಮಾಡಿಸಬೇಕು. ಲಗ್ನವೇಳೆಯು ಮೀರಬಾರದು'' ಎಂಬುದಾಗಿ ಹೇಳಿ, ಒಡನೆಯೇ ಅಲ್ಲಿಂದ ಹೊರಟಿತು.

ಇದನ್ನೆಲ್ಲ ಕೇಳಿ ಕರ್ಪೂರತಿಲಕವು ರಾಜ್ಯಲೋಭದಿಂದ ಅಂತರಂಗದಲ್ಲಿ ಹಿಗ್ಗಿ, ನರಿಯ ಹಿಂದೆಯೇ ಹೊರಟಿತು. ನರಿಯು ಕೆಸರುಬಯಲಿನಲ್ಲಿ ಹೊರಟಿತು. ಆನೆಯೂ ಅದರ ಹಿಂದೆಯೇ ಓಡತೊಡಗಿತು. ವೇಗದಿಂದ ಓಡಿಬಂದ ಕಾರಣ ಕೆಸರಿನಲ್ಲಿ ಹೂತು ಬಿದ್ದು, ನರಿಯನ್ನು ನೋಡಿ,–''ಮಿತ್ರ, ಜಂಬೂಕರಾಜ! ಈಗ ಏನು ಮಾಡಬೇಕು? ನಾನು ಈ ಮಹಾ ಪಂಕದಲ್ಲಿ ಮುಳುಗುತ್ತಿರುವೆನಲ್ಲಾ!'' ಎಂದಿತು. ಆಗ ನರಿಯು ನಗುತ್ತ,–''ಮಹಾ ಪ್ರಭೋ! ನನ್ನ ಬಾಲವನ್ನು ಹಿಡಿದು ಮೆಲ್ಲಗೆ ಏಳಬಹುದಲ್ಲಾ! ನನ್ನ ಮಾತಿನಲ್ಲಿ ಭರವಸೆ ಇಟ್ಟು ದಯೆಮಾಡಿದುದಕ್ಕೆ ಇದೀಗ ತಕ್ಕ ಫಲ. ಎಂದಿನ ವರೆಗೆ ಸಜ್ಜನರ ಸಂಗದಲ್ಲಿರುವೆಯೋ ಅಂದಿನ ವರೆಗೆ ಸುಖವಾಗಿರುವೆ. ದುರುಳರೊಡನೆ ಸೇರಿದೆಯಾದರೆ ಕೂಡಲೇ ಕೆಳಗೆ ಬೀಳುವೆಯೆಂದು ಹಿರಿಯರು ಹೇಳಿರುವರು'' ಎಂದಿತು. ಬಳಿಕ ಕೆಸರಲ್ಲಿ ಸಿಲುಕಿದ ಆನೆಯು ಅಲ್ಲಿಯೇ ಸತ್ತಿತು. ತರುವಾಯ ನರಿಗಳೆಲ್ಲವೂ ಅದನ್ನು ಮನದಣಿಯೆ ತಿಂದುವು. ಆದುದರಿಂದ, ಉಪಾಯದಿಂದ ಸಾಧಿಸಲು ಯೋಗ್ಯವಾದ ಕಾರ್ಯದಲ್ಲಿ ಪರಾಕ್ರಮವನ್ನು ತೋರಿ ಫಲವಿಲ್ಲ.

ಬಳಿಕ ಮಂಥರಕನು ಆ ಸರೋವರವನ್ನು ಬಿಟ್ಟು ತೆರಳಿದನು; ಹಿರಣ್ಯಕ ಮೊದಲಾದವರೂ ಸಂಗಡಲೇ ಹೊರಟರು. ಆಮೆಯು ನೆಲದ ಮೇಲೆ ಹರಿದು ಬರುತ್ತಿರುವಲ್ಲಿ ಒಬ್ಬ ಬೇಡನು ಅಡವಿಯಲ್ಲಿ ಅಲೆಯುತ್ತ, ಈ ಮಂಥರಕನನ್ನು ನೋಡಿ, ಹಿಡಿದು, ಬಿಲ್ಲಿನ ತುದಿಗೆ ಬಿಗಿದು ಹಸಿವು ನೀರಡಿಕೆಗಳಿಂದ ಬಳಲಿ ಬೆಂಡಾಗಿ, ತನ್ನ ಪಾಳೆಯದ ಕಡೆಗೆ ಹೊರಟನು. ಕಾಗೆ, ಹುಲ್ಲೆ, ಇಲಿಗಳು ಮನಮುರುಗಿ ಅವನ ಹಿಂದೆಯೇ ಹೋಗುತ್ತಿದ್ದುವು. ಆಗ ಹಿರಣ್ಯಕನು,—ಕಡಲಿನಂತಿರುವ ಒಂದು ಆಪತ್ತಿನ ತಡಿಯನ್ನು ಇನ್ನೂ ನಾನು ಕಾಣದಿರುವಲ್ಲಿ, ಇನ್ನೊಂದು ವಿಪತ್ತೂ ನನಗೆ ಸಂಭವಿಸಿತಲ್ಲಾ! ಕಷ್ಟಗಳು ಒಂದನ್ನೊಂದು ಎಡೆಬಿಡದೆ ಇರುವಂತೆ ಭಾವಿಸುವೆನು. ನಿಷ್ಕಪಟವಾದ ಸ್ನೇಹದಿಂದ ತುಂಬಿದ ಮಿತ್ರನು ಸಾಮಾನ್ಯವಾಗಿ

ಸಿಗಲಾರನು. ಅಂತಹ ಗೆಳೆಯನನ್ನು ಪಡೆಯಬೇಕಾದರೆ ಎಷ್ಟೋ ಪುಣ್ಯ ಮಾಡಿರಬೇಕು. ಇಂತಹ ಸ್ನೇಹಿತನು ಆಪತ್ತಿನಲ್ಲಿಯೂ ಬಿಟ್ಟು ಹೋಗಲಾರನು. ಈ ಬಗೆಯ ಮಿತ್ರನಲ್ಲಿರುವ ವಿಶ್ವಾಸವು ಪುರುಷರಿಗೆ ತಮ್ಮ ಹೆತ್ತ ತಾಯಿತಂದೆ, ಮಡದಿಮಕ್ಕಳು, ಒಡಹುಟ್ಟಿದವರಲ್ಲಿಯೂ ಇರಲಾರದೆಂದು ಹಂಬಲಿಸಿ,—"ಅಯ್ಯೋ! ನನ್ನ ದುರದೃಷ್ಟವನ್ನು ಎಷ್ಟೆಂದು ಬಣ್ಣಿಸಿದರೂ ಸಾಲದು. ನಾನು ಮಾಡಿದ ಪಾಪದ ಫಲವು ಈಗ ನನಗೆ ಅನುಭವಕ್ಕೆ ಬರುತ್ತಿದೆ. ಈ ದಶಾಫಲಗಳನ್ನು ಯೋಚಿಸಿದರೆ, ನಾನು ಇದೇ ಜೀವಿತದಲ್ಲಿ ಇರುತ್ತಿದ್ದರೂ ಹೊಸ ಹೊಸದಾಗಿ ಅನೇಕ ರೂಪಾಂತರಗಳು ತೋರುತ್ತಿವೆ. ಹಾಗಲ್ಲದಿದ್ದರೆ ಈ ಬಗೆಯ ವಿಪತ್ತು ಸಂಭವಿಸುತ್ತಲೇ ಇರಲಿಲ್ಲ. ಈ ದೇಹಕ್ಕೆ ಅಪಾಯವು ತಪ್ಪಿದುದೇ ಅಲ್ಲ. ಆಪತ್ತು ಯಾವಾಗಲೂ ಸಂಗಡಲೇ ಇರುತ್ತದೆ. ಸಂಪತ್ತು ಆಪತ್ತಿಗೆ ಮೂಲ. ಸಂಯೋಗವು ವಿಯೋಗವನ್ನು ಹಿಂದೆಯೇ ಕಟ್ಟಿಕೊಂಡು ಬರುವುದು. ಹುಟ್ಟಿದವನಿಗೆ ಸಾವು ತಪ್ಪಿದುದೇ ಅಲ್ಲ. ಆಹಾ! ದುಃಖದಿಂದಲೂ, ಅಂಜಿಕೆಯಿಂದಲೂ, ಹಗೆಯಿಂದಲೂ ಪಾರು ಮಾಡಿ, ಪ್ರೀತಿಗೂ ವಿಶ್ವಾಸಕ್ಕೂ ಪಾತ್ರವೆನಿಸಿದ ಮಿತ್ರ ಎಂಬ ಎರಡಕ್ಷರಗಳ ಈ ರತ್ನವನ್ನು ಯಾರು ನಿರ್ಮಿಸಿದರೋ! ನೇತ್ರಾನಂದವನ್ನುಂಟು ಮಾಡಿ, ಮನಸ್ಸಿಗೆ ಸಂತೋಷವನ್ನು ಎಸಗಿ, ಕಷ್ಟಸುಖಗಳನ್ನು ಸಮವಾಗಿ ಹಂಚಿಕೊಂಡು, ಎಡೆಬಿಡದಿರುವ ಮಿತ್ರನು ದೊರೆಯುವುದು ಕಷ್ಟ. ಐಶ್ವರ್ಯವಿರುವಾಗ ಹಣದ ಆಸೆಯಿಂದ ಬಂದು ಸೇರುವ ಗೆಳೆಯರೆಂಬುವವರು ಎಲ್ಲೆಲ್ಲಿಯೂ ದೊರೆಯುತ್ತಾರೆ. ಆದರೆ ಅವರ ದಿಟವಾದ ಯೋಗ್ಯತೆಯನ್ನು ಪರೀಕ್ಷಿಸಬೇಕಾದರೆ ವಿಪತ್ತೇ ಯೋಗ್ಯವಾದ ಒರೆಗಲ್ಲು. ಹೀಗೆಂದು ಬಗೆಬಗೆಯಿಂದ ಹಂಬಲಿಸುತ್ತ ಚಿತ್ರಾಂಗನನ್ನೂ ಲಘುಪತನಕನನ್ನೂ ನೋಡಿ—"ಗೆಳೆಯರೆ! ಈ ಬೇಡನು ಅಡವಿಯನ್ನು ದಾಟಿ ಹೋಗುವುದಕ್ಕೆ ಮೊದಲೇ ಹೇಗಾದರೂ ಮಂಥರಕನನ್ನು ಬಿಡಿಸಬೇಕು" ಎಂದಿತು. "ಮಾಡಬೇಕಾದ ಪರಿಯನ್ನು ಬೇಗನೆ ಹೇಳು" ಎಂದು ಕಾಗೆಯೂ ಹುಲ್ಲೆಯೂ ಪ್ರಶ್ನೆ ಮಾಡಿದುವು. ಆಗ ಹಿರಣ್ಯಕನು-"ಚಿತ್ರಾಂಗನು ನೀರಿನ ಬದಿಯಲ್ಲಿ ಸತ್ತಂತೆ ಬಿದ್ದಿರಲಿ. ಕಾಗೆಯು ಅದರ ಮೇಲೆ ಕುಳಿತು, ಕೊಕ್ಕಿನಿಂದ

ಮೋರೆಯನ್ನು ಕೆರೆಯುತ್ತಿರಲಿ. ಆಗ ಈ ಬೇಡನು ಜಿಂಕೆಯ ಮಾಂಸದ ಆಸೆಯಿಂದ ಆಮೆಯನ್ನು ತಪ್ಪದೆ ನೆಲದ ಮೇಲಿಟ್ಟು, ಹೋಗದಿರಲಾರನು. ಆಗ ನಾನು ಮಂಥರಕನ ಕಟ್ಟುಗಳನ್ನು ಕಡಿಯುವೆನು" ಎಂದು ಸೂಚಿಸಿತು.

ಇಷ್ಟರಲ್ಲಿ ಬೇಡನಿಗೆ ಬಾಯಾರಿಕೆಯು ಹೆಚ್ಚಿತು. ಅವನು ಅಲೆದಿದ್ದ ಕಾರಣ ನೀರು ಕುಡಿದು ಮರದ ನೆರಳಿನಲ್ಲಿ ಕುಳಿತುಕೊಂಡನು. ಅಷ್ಟರಲ್ಲಿ ಜಿಂಕೆಯು ಹಿರಣ್ಯಕನ ಸಲಹೆಯಂತೆ ಬಿದ್ದುಕೊಂಡಿತು. ಬೇಡನು ಆ ರೀತಿ ಬಿದ್ದಿರುವ ಹುಲ್ಲೆಯನ್ನು ಕಂಡನು. ಸಂತೋಷದಿಂದ ಒಡನೆಯೇ ಚೂರಿಯನ್ನು ತೆಗೆದುಕೊಂಡು ಆ ಹರಿಣದ ಬಳಿಗೆ ನಡೆದನು. ಇಷ್ಟರಲ್ಲಿ ಹಿರಣ್ಯಕನು ಆಮೆಯ ಕಟ್ಟನ್ನು ಕಡಿದನು. ಕೂರ್ಮವು ಬೇಗನೆ ಹರಿದು ಹೋಗಿ ನೀರಿನಲ್ಲಿ ಸೇರಿಕೊಂಡಿತು. ಬೇಡನು ಸಮೀಪಕ್ಕೆ ಬರುತ್ತಿರುವಾಗಲೇ ಜಿಂಕೆಯು ಎದ್ದು ಓಡಿಹೋಯಿತು. ಹಿಂದಿರುಗಿ ಬಂದು ನೋಡುವಲ್ಲಿ ಮರದ ಅಡಿಯಲ್ಲಿ ಆಮೆಯು ಇರಲಿಲ್ಲ. ಆಗ ಬೇಡನು-"ಹಿಂದುಮುಂದು ನೋಡದೆ ನಡೆಯತಕ್ಕ ನನಗೆ ಇದು ಯುಕ್ತವೇ ಸರಿ. ಕೈಯಲ್ಲಿ ಸ್ಥಿರವಾಗಿರುವುದನ್ನು ಬಿಟ್ಟು, ಅಸ್ಥಿರವಾದ ವಸ್ತುಗಳನ್ನು ಬಯಸತಕ್ಕವರಿಗೆಲ್ಲ ಇಂತಹ ಫಲವೇ ದೊರೆಯುವುದು. ಸ್ಥಿರವಾದುದು ನಾಶವಾಗುವುದು. ಅಸ್ಥಿರವಾದುದು ಮೊದಲೇ ಇಲ್ಲ" ಎಂದು ಮರುಗುತ್ತ, ನಿರಾಶೆಯಿಂದ ತನ್ನ ಪಾಳೆಯಕ್ಕೆ ಹೋದನು. ಬಳಿಕ ಮಂಥರಕ ಮುಂತಾದವರು ಸಂತೋಷದಿಂದ ತಮ್ಮ ತಮ್ಮ ವಾಸಸ್ಥಾನವನ್ನು ಸೇರಿದರು. ಆದುದರಿಂದ ಗೆಳೆಯರನ್ನು ಸಂಪಾದಿಸಬೇಕು. "ಹುಗಲಾಗದ ಅಡವಿಯಲ್ಲಿ ಆಮೆಯ ಬಂಧನವನ್ನು ಇಲಿಯು ಬಿಡಿಸಲಿಲ್ಲವೆ?" ಎಂಬುದಾಗಿ ವಿಷ್ಣುಶರ್ಮನು ಅರಸುಮಕ್ಕಳಿಗೆ ಕಥೆಯನ್ನು ಹೇಳಿ ಮುಗಿಸಿದನು. ಇದನ್ನು ಕೇಳಿ ರಾಜಪುತ್ರರು—"ಸಂತೋಷವಾಯಿತು. ನಮ್ಮ ಇಷ್ಟಾನುಸಾರ ಎಲ್ಲವನ್ನೂ ಕೇಳಿದೆವು. ನಮ್ಮ ಕೋರಿಕೆಯು ಈಡೇರಿತು" ಎಂದು ಆನಂದಪಟ್ಟರು. ಆಗ ವಿಷ್ಣುಶರ್ಮನು—"ಸಾಧು ಶಿರೋಮಣಿಗಳಿರಾ! ಮಿತ್ರರನ್ನು ಸಂಪಾದಿಸಿರಿ. ಸಜ್ಜನರನ್ನು ಕಾಪಾಡುವ ಸಲುವಾಗಿ ಸಂಪತ್ತುಗಳೆಲ್ಲವು ನಿಮಗೆ ಕೈಗೂಡಲಿ! ಅರಸರು ಧರ್ಮಕ್ಕೆ ಹಾನಿತಟ್ಟದಂತೆ ರಾಜ್ಯಭಾರ ಮಾಡಲಿ! ಹೊಸ ಮದುವೆಣ್ಣಿನಂತೆ ನೀತಿಯು ನಿಮ್ಮ ಅಂತ

ರಂಗವನ್ನು ಸೂರೆಗೊಂಡು ಸಂತಸಗೊಳಿಸಲಿ! ಚಂದ್ರನನ್ನು ಜಡೆಯಲ್ಲಿ ಧರಿಸಿರುವ ಆ ಜಗದೀಶ್ವರನು ಲೋಕಕ್ಕೆ ಮಂಗಳವನ್ನು ದಯೆಪಾಲಿಸಲಿ!» ಹೀಗೆಂದು ಹರಸಿದನು.

ಇಂತು ಹಿತೋಪದೇಶ ಕರ್ಣಾಟಕ ಗದ್ಯಾನುವಾದದಲ್ಲಿ ಮಿತ್ರಲಾಭಂ ಸಂಪೂರ್ಣಂ.

**ಒಂದನೆಯ ಕಥೆ ಮುಗಿದುದು.**

---

## ಸುಹೃದ್ಭೇದ.

ಬಳಿಕ ಮರುದಿನ ರಾಜಪುತ್ರರು ವಿಷ್ಣುಶರ್ಮನನ್ನು ಕುರಿತು–"ಆರ್ಯನೆ! ನಿನ್ನ ಅನುಗ್ರಹದಿಂದ ಮಿತ್ರಲಾಭವನ್ನು ಕೇಳಿದೆವು. ಈಗ ಸುಹೃದ್ಭೇದವನ್ನು ಕೇಳಬೇಕೆಂಬ ಕುತೂಹಲವುಂಟು'' ಎಂದರು. ಆಗ ವಿಷ್ಣುಶರ್ಮನು "ಹಾಗಾದರೆ ಕೇಳಿರಿ:-ಒಂದು ಕಾಡಿನಲ್ಲಿ ಸಿಂಹವೂ ಗೂಳಿಯೂ ಮಹತ್ತರವಾದ ಸ್ನೇಹದಿಂದ ಅನ್ಯೋನ್ಯವಾಗಿದ್ದುವು. ಒಂದು ನರಿಯು ಇದನ್ನು ನೋಡಿ ಸಹಿಸಲಾರದೆ, ಲೋಭದಿಂದ ಚಾಡಿಗಳನ್ನು ಹೇಳಿ ಅಂತಹ ಸ್ನೇಹವನ್ನು ಮುರಿದಿಕ್ಕಿತು'' ಎಂದನು.

ಅರಸುಮಕ್ಕಳು ಆ ಕಥೆಯನ್ನು ಹೇಳುವಂತೆ ಬಲಾತ್ಕರಿಸಲಾಗಿ ವಿಷ್ಣುಶರ್ಮನು ಹೇಳತೊಡಗಿದನು. ಅದೆಂತೆಂದರೆ:—"ದಕ್ಷಿಣಾಪಥದಲ್ಲಿ ಸುವರ್ಣವತಿಯೆಂಬ ಒಂದು ಪಟ್ಟಣವಿರುವುದು. ಅಲ್ಲಿ ವರ್ಧಮಾನನೆಂಬ ವರ್ತಕನು ವಾಸವಾಗಿದ್ದನು. ಅವನಲ್ಲಿ ಹಣವು ಹೇರಳವಾಗಿದ್ದಿತು. ಆದರೂ ತನಗಿಂತ ಸಂಪನ್ನರಾದ ಇತರರನ್ನು ನೋಡಿ ತಾನು ಅವರಂತೆಯೇ ದೊಡ್ಡ ಹಣಗಾರನಾಗಬೇಕೆಂಬ ಆಸೆ ಹುಟ್ಟಿತು. ಏಕೆಂದರೆ, ನಮಗಿಂತಲೂ ಕೀಳು ಅಂತಸ್ತಿನಲ್ಲಿರುವವರನ್ನು ನೋಡಿದಲ್ಲಿ ನಮ್ಮ ಅಂತಸ್ತು ಹೆಚ್ಚಿನದೆಂದು ತೋರುವುದು. ಅಂತೆಯೇ ನಮಗಿಂತಲೂ ಮೇಲಿನ ತರಗತಿಯಲ್ಲಿರುವವರನ್ನು ನೋಡಿದಲ್ಲಿ ನಾವು ಬಡವರಾಗಿ ಕಾಣುವೆವು. ಇದು ಸಹಜ.''

"ಹಣಗಾರನು ಬ್ರಹ್ಮಹತ್ಯೆ ಮಾಡಿದವನಾದರೂ ಪೂಜನೀಯನೆನಿಸುವನು. ಬಡವನು ಚಂದ್ರವಂಶಕ್ಕೆ ಸಮಾನವಾದ ದೊಡ್ಡ ಮನೆತನದಲ್ಲಿ

ಹುಟ್ಟಿದವನಾದರೂ ತಿರಸ್ಕಾರಕ್ಕೆ ಗುರಿಯಾಗುವನು. ಇನ್ನೂ ಪ್ರಯತ್ನ ಮಾಡದೆ, ಸೋಮಾರಿಯಾಗಿ ದೈವವನ್ನೇ ನಂಬಿ, ಸಾಹಸಹೀನನಾಗಿರುವ ಪುರುಷನನ್ನು ಲಕ್ಷ್ಮಿಯು ಸೋಕಲೊಲ್ಲಳು. ಸೋಮಾರಿತನ, ಅಬಲೆಯರ ಊಳಿಗ, ಬೇನೆ, ಹುಟ್ಟುಮನೆಯಲ್ಲಿ ಅಭಿಮಾನ, ಅಂಜಿಕೆ, ಲೋಭ—ಈ ಆರು ಮನುಷ್ಯನ ಪುರೋವೃದ್ಧಿಗೆ ಭಂಗಗಳು. ಏಕೆಂದರೆ, ಅತ್ಯಲ್ಪವಾದ ಸಂಪತ್ತಿನಿಂದ ಯಾವನು ತೃಪ್ತಿಗೊಂಡು, ಅಲಸನಾಗಿರುವನೋ ಅವನ ಸಂಪತ್ತನ್ನು ವಿಧಿಯು ಹೆಚ್ಚಿಸಲಾರದು.''

"ಉತ್ಸಾಹವಿಲ್ಲದೆ, ಯಾವುದಾದರೊಂದು ಚಿಂತೆಯನ್ನು ಕಟ್ಟಿಕೊಂಡು, ಸಾಹಸವನ್ನು ತೋರದೆ, ಹಗೆಗಳಿಗೆ ಆನಂದವನ್ನುಂಟುಮಾಡತಕ್ಕ ಮಗನನ್ನು ಯಾವ ಸುಮಂಗಲಿಯೂ ಹೆರುವುದೇ ಬೇಡ. ಏಕೆಂದರೆ, ದೊರೆಯದಿರುವ ವಸ್ತುವನ್ನು ಗಳಿಸಬೇಕು. ಸಂಪಾದಿಸಿದ ಪದಾರ್ಥವನ್ನು ಬರಿದೆ ವೆಚ್ಚಮಾಡದಂತೆ ಕಾಪಾಡಬೇಕು. ಅಂತೆಯೇ ಅದನ್ನು ದಿನದಿನವೂ ಹೆಚ್ಚಿಸಬೇಕು. ಇಂತು ವೃದ್ಧಿಯನ್ನೈದಿದ ವಸ್ತುವನ್ನು ಪಾತ್ರವರಿತು ದಾನಮಾಡಬೇಕು. ಯಾವನ ಆಯುಷ್ಯವು ದಾನಭೋಗಗಳಿಗಿಲ್ಲದೆ ವ್ಯರ್ಥವಾಗಿ ಕ್ಷೀಣವಾಗುವುದೋ ಅವನು ಕಮ್ಮಾರನ ಕುಲಿಮೆಯ ತಿದಿಯಂತೆ ಉಸಿರು ಬಿಡುತ್ತಿದ್ದರೂ ಸತ್ತಂತೆಯೇ ಸರಿ. ಏಕೆಂದರೆ, ದೊರೆಯಲಾರದ ವಸ್ತುವನ್ನು ಬಯಸುವುದರಿಂದ ದುಃಖವು ಮಾತ್ರ ಲಾಭವಾಗುವುದು. ದೊರೆತುದನ್ನು ತಕ್ಕ ರೀತಿಯಿಂದ ಕಾಪಾಡದಿದ್ದರೆ ಅದು ತಾನಾಗಿಯೇ ಹಾಳಾಗುವುದು. ವೃದ್ಧಿಯನ್ನು ಪಡೆಯದಿರುವ ಹಣವು ನಿಧಿಯಂತೆ ಹೇರಳವಾಗಿದ್ದರೂ, ಕಣ್ಣುಕಾಡಿಗೆಯಂತೆ ಮಿತವ್ಯಯದಿಂದಲಾದರೂ ದಿನದಿನಕ್ಕೆ ಕಡಿಮೆಯಾಗದೆ ಇರದು. ಅಂತೆಯೇ ಕಡಿಮೆಯಾಗುವುದೆಂಬ ಹೆದರಿಕೆಯಿಂದ ಅನುಭವಿಸದಿರುವ ಹಣವು ನಿಷ್ಫಲವೇ ಸರಿ. ಹಿರಿಯರು ಅಂತೆಯೇ ಹೇಳಿರುವರು.''

"ಇತರರಿಗೂ ಕೊಡದೆ, ತಾನೂ ಅನುಭವಿಸದೆ ಹೂತಿಟ್ಟ ಹಣದಿಂದ ಏನು ಫಲ? ಹಗೆಗಳನ್ನು ಹಿಮ್ಮೆಟ್ಟಿಸಲಾರದ ಶೌರ್ಯವಾದರೂ ಏತಕ್ಕೆ? ಧರ್ಮವನ್ನು ಆಚರಿಸಲಾರದವನ ಶಾಸ್ತ್ರಜ್ಞಾನವು ವ್ಯರ್ಥ. ಇಂದ್ರಿಯಗಳನ್ನು ಗೆಲಲಾರದೆ ಹೋದರೆ ಅದೆಂತಹ ಬುದ್ಧಿ? ಕಣ್ಣುಕಪ್ಪು ದಿನ

ದಿನಕ್ಕೂ ಕಡಿಮೆಯಾಗುವುದು. ಹುತ್ತವು ಕ್ರಮವಾಗಿ ಬೆಳೆಯುತ್ತಲೇ ಇರುವುದು. ಇದನ್ನು ನೋಡಿಯಾದರೂ ಅಧ್ಯಯನ, ದಾನ, ಕರ್ಮಗಳಲ್ಲಿ ದಿನವನ್ನು ವ್ಯರ್ಥವಾಗದಂತೆ ಕಳೆಯಬೇಡವೇ? ಹನಿಹನಿಯಾಗಿ ಬೀಳುತ್ತ ಬಂದರೆ ಗಡಿಗೆಯು ತಾನಾಗಿಯೇ ಕ್ರಮವಾಗಿ ತುಂಬುವುದು. ವಿದ್ಯೆಯನ್ನು ಕಲಿಯುವುದಕ್ಕೂ, ಹಣವನ್ನು ಸಂಪಾದಿಸುವುದಕ್ಕೂ, ಧರ್ಮವನ್ನು ಸಂಗ್ರಹಿಸುವುದಕ್ಕೂ, ಇದೊಂದೇ ಉದಾಹರಣೆಯು ಸಾಲದೇ? ಇಂತೆಂದು ಪರ್ಯಾಲೋಚಿಸಿ, ವರ್ಧಮಾನ ಸೆಟ್ಟಿಯು ಸಂಜೀವಕ, ನಂದಕಗಳೆಂಬ ಎರಡು ಎತ್ತುಗಳನ್ನು ನೊಗಕ್ಕೆ ಕಟ್ಟಿ, ಬಂಡಿಯ ತುಂಬ ಬಗೆಬಗೆಯ ಜಿನಸುಗಳನ್ನು ಅಡಕವಾಗಿ ತುಂಬಿ, ವ್ಯಾಪಾರಮಾಡುವ ಸಲುವಾಗಿ ಕಾಶ್ಮೀರದೇಶಕ್ಕೆ ಹೊರಟನು.''

"ಬಲಶಾಲಿಯಾದವನಿಗೆ ಯಾವುದೂ ಭಾರವಾಗಿ ತೋರುವುದಿಲ್ಲ. ಪಾಡುಪಡತಕ್ಕವನು ದೂರವನ್ನು ಲೆಕ್ಕಿಸುವುದಿಲ್ಲ. ವಿದ್ಯಾವಂತನಿಗೆ ಸ್ವದೇಶಪರದೇಶಗಳೆಂಬ ಭೇದವೇ ಇಲ್ಲ. ಸವಿ ಮಾತನಾಡುವವನಿಗೆ ಹಗೆಯೇ ಇಲ್ಲ. ಇಂತು ನಡೆದು ಬರುತ್ತಿರುವಾಗ ಸುದುರ್ಗವೆಂಬ ಅಡವಿಯಲ್ಲಿ ಬೆಟ್ಟದ ಬದಿಯಲ್ಲಿ ಸಂಜೀವಕನೆಂಬ ಎತ್ತು ಮಂಡಿ ಮುರಿದು ಕೆಳಗೆ ಬಿದ್ದಿತು. ಆಗ ವರ್ಧಮಾನನು ಈ ಪರಿ ಯೋಚಿಸಿದನು:— ನೀತಿನಿಪುಣನು ಬಗೆಬಗೆಯಿಂದ ಪಾಡುಪಟ್ಟರೆ ಲಾಭವೇನು? ವಿಧಿಯ ಸಂಕಲ್ಪಕ್ಕಿಂತಲೂ ಹೆಚ್ಚಿನ ಫಲವು ಎಂದಿಗೂ ದೊರೆಯಲಾರದು. ಎಲ್ಲ ಬಗೆಯಿಂದಲೂ ಅಂಜಿಕೆಯನ್ನು ಒತ್ತಟ್ಟುಮಾಡಬೇಕು. ಹೆದರಿಕೆಯೇ ಸಕಲ ಕಾರ್ಯಗಳನ್ನು ಭಂಗಗೊಳಿಸುವುದು. ಆ ಕಾರಣ ಭಯವನ್ನು ಮರೆತು ಧೈರ್ಯದಿಂದ ಕಾರ್ಯಗಳನ್ನು ಸಾಧಿಸಬೇಕು'' ಹೀಗೆ ನಿಶ್ಚಯಿಸಿ, ಸಂಜೀವಕನನ್ನು ಅಲ್ಲಿಯೇ ಬಿಟ್ಟು, ಸಮೀಪದಲ್ಲಿದ್ದ ಧರ್ಮಪುರವೆಂಬ ನಗರಕ್ಕೆ ಹೋಗಿ, ಸಂಜೀವಕನಿಗೆ ಸಮಾನವಾದ ಮತ್ತೊಂದು ದೊಡ್ಡ ಎತ್ತನ್ನು ತಂದು, ನೊಗಕ್ಕೆ ಕಟ್ಟಿ, ಮುಂದಕ್ಕೆ ಹೊರಟನು. ಇತ್ತ ಸಂಜೀವಕನು ಬೇನೆಯನ್ನು ತಾಳಲಾರದೆ ಬಹು ಕಷ್ಟದಿಂದ, ಮೂರು ಕಾಲುಗಳ ಮೇಲೆಯೇ ಬಲವನ್ನೆಲ್ಲ ಊರಿ, ಮೆಲ್ಲಗೆ ನಡೆಯುತ್ತ ಬಂದಿತು.''

"ಕಡಲಿನಲ್ಲಿ ದುಮ್ಮಿಕ್ಕಿ ಮುಳುಗಿದರೂ, ಬೆಟ್ಟದಿಂದ ಉರುಳಿಬಿದ್ದರೂ, ತಕ್ಷಕರಾಜನೇ ಕಚ್ಚಿದರೂ, ಆಯುಷ್ಯವು ಮಾತ್ರ ಮುಗಿಯದಿದ್ದರೆ ಪ್ರಾಣಿಯು ಸಾಯಲಾರನು. ಆಯುಶ್ಶೇಷವು ಮರ್ಮಸ್ಥಾನಗಳನ್ನು ಕಾಪಾಡುವುದು. ಬೆಟ್ಟದ ತುದಿಯಿಂದ ಬಿದ್ದರೂ, ಸಾಗರದಲ್ಲಿ ಮುಳುಗಿದರೂ, ಬೆಂಕಿಯ ರಾಶಿಯಲ್ಲಿ ಹೊರಳಾಡಿದರೂ, ಹಾವುಗಳೊಂದಿಗೆ ಸರಸವಾಡಿದರೂ, ನೂರಾರು ಬಾಣಗಳಿಂದ ಇರಿಯಲ್ಪಟ್ಟರೂ, ಕಾಲವು ಸಮೀಪಿಸಿದಲ್ಲದೆ ಯಾವನೂ ಸಾಯುವುದಿಲ್ಲ. ಕಾಲವು ಬಂದಿತೆಂದರೆ ಹುಲ್ಲಿನ ತುದಿ ತಾಗಿದರೂ ಸಾಯದೆ ಬದುಕಲಾರನು. ಏಕೆಂದರೆ, ದೈವ ಬಲವು ಇದ್ದಿತೆಂದರೆ ನಾವು ಎಷ್ಟೇ ಅಸಡ್ಡೆ ತೋರಿದರೂ, ಕಾಪಾಡದಿದ್ದರೂ ಬದುಕಿಕೊಳ್ಳುವರು. ದೈವಬಲವು ಕಡಿಮೆಯಾದಾಗ ಬಗೆಬಗೆಯಿಂದ ಪಾಡುಪಟ್ಟು ಕಾಪಾಡಿದರೂ ಉಳಿಯುವುದಿಲ್ಲ. ದಿಕ್ಕಿಲ್ಲದ ಅಡವಿಯಲ್ಲಿ ಬಿಟ್ಟರೂ ವಿಧಿಬಲದಿಂದ ಬದುಕುವನು. ಮನೆಯಲ್ಲಿರುವವನನ್ನು ಅನೇಕ ರೀತಿಯಿಂದ ಉಪಚರಿಸಿದರೂ ಬದುಕುವುದಿಲ್ಲ."

"ಬಳಿಕ ದಿನಗಟ್ಟಲೆಯಂತೆ ಸಂಜೀವಕನು, ಬೇಕಾದಷ್ಟು ಹುಲ್ಲು ಮೆದ್ದು, ನೀರು ಕುಡಿದು, ಅರಣ್ಯವನ್ನೆಲ್ಲ ಸುತ್ತುತ್ತ, ಸಂತೋಷದಿಂದ ಉಬ್ಬಿ ಮೆಯ್ಬಲಿತು ಒಮ್ಮೆ ಗಟ್ಟಿಯಾಗಿ ಗುಟುರು ಹಾಕಿತು. ಅದೇ ಅರಣ್ಯದಲ್ಲಿ ಪಿಂಗಳಕನೆಂಬ ಸಿಂಹವು ಪರಾಕ್ರಮದಿಂದ ರಾಜ್ಯಭಾರ ಮಾಡುತ್ತ ಸುಖವಾಗಿದ್ದಿತು. ಅಡವಿಯ ಮೃಗಗಳು ಸಿಂಹಕ್ಕೆ ಅಭಿಷೇಕ ಮುಂತಾದ ಯಾವ ಸಂಸ್ಕಾರಗಳನ್ನೂ ಮಾಡಿ ಪಟ್ಟಕಟ್ಟುವುದಿಲ್ಲ. ಅದು ತನ್ನ ಪರಾಕ್ರಮದಿಂದಲೇ ರಾಜ್ಯವನ್ನು ಸಂಪಾದಿಸಿ, ತಾನಾಗಿಯೇ ಮೃಗರಾಜನೆನಿಸುವುದು."

"ಆ ಸಿಂಹವು ಒಂದು ದಿನ ನೀರಡಿಕೆಯಿಂದ ಬಳಲಿ, ಯಮುನಾ ನದಿಯ ಮಡುವಿಗೆ ಹೋಗಿದ್ದಾಗ, ಸಂಜೀವಕನ ಗುಟುರನ್ನು ಕೇಳಿತು. ಸಿಡಿಲಿನಂತೆ ಭಯಂಕರವಾದ ಈ ಧ್ವನಿಯನ್ನು ಪಿಂಗಳಕನು ಇಂದಿನ ವರೆಗೆ ಕೇಳಿರಲಿಲ್ಲ. ಈ ಶಬ್ದವು ಕಿವಿಗೆ ಬಿದ್ದೊಡನೆಯೇ ಹೆದರಿ ತತ್ತರಗೊಂಡು ನೀರು ಕುಡಿಯದೆಯೇ ತನ್ನ ಗವಿಯ ಬಳಿಗೆ ಬಂದು,—"ಇದೇನಿರಬಹುದು?" ಎಂಬುದಾಗಿ ಯೋಚಿಸುತ್ತ ಸುಮ್ಮನೆ ಕುಳಿತಿದ್ದಿತು. ಈ

ಸಮಯದಲ್ಲಿ ಆ ಸಿಂಹದ ಮಂತ್ರಿಪುತ್ರರಾದ ಕರಟಕ, ದಮನಕ ಎಂಬ ಎರಡು ನರಿಗಳು ಆ ಸಿಂಹವನ್ನು ಕಂಡುವು. ಆಗ ದಮನಕನು ಕರಟಕನನ್ನು ಕುರಿತು,—"ಸಖನೆ! ನಮ್ಮ ಅರಸನು ಇಂದು ನೀರಡಿಕೆಯಿಂದ ಬಳಲಿದ್ದರೂ ನೀರು ಕುಡಿಯದೆ ಸುಮ್ಮನೆ ಬಂದು ಬಿಟ್ಟನಲ್ಲಾ! ಕಾರಣವೇನಿರ ಬಹುದು?" ಎಂಬುದಾಗಿ ಪ್ರಶ್ನೆಮಾಡಿದನು. ಆಗ ಕರಟಕ ನರಿಯು ಹೀಗೆ ಹೇಳಿತು:—"ಮಿತ್ರನೆ! ನಾನು ಮನಃಪೂರ್ವಕವಾಗಿ ಈ ರಾಜನ ಊಳಿಗವನ್ನು ಕೈಕೊಂಡಿರುವುದಿಲ್ಲ. ಈತನು ಹೇಗಿದ್ದರೂ ನಮಗೇನು? ಈತನಿಂದ ಅಪಮಾನಪಟ್ಟು ಹಿಂದೆ ಎಷ್ಟೋ ದುಃಖವನ್ನು ಅನುಭವಿಸಿರು ವೆವು. ಸಾಕು! ರಾಜಸೇವೆಯೂ ಸಾಕು! ಅದರ ಸುಖವೂ ಸಾಕು!"

"ಹಣದ ಸಲುವಾಗಿ ಸೇವಾವೃತ್ತಿಯನ್ನು ಕೈಕೊಂಡವರು ಏನು ಮಾಡುತ್ತಿರುವರೆಂಬುದನ್ನು ನೋಡು. ಈ ಮೂಢರಿಗೆ ತಮ್ಮ ದೇಹದ ಮೇಲೆ ಯೇ ಸ್ವಾತಂತ್ರ್ಯವಿಲ್ಲ. ಇತರರನ್ನು ಸೇವಿಸುವುದಕ್ಕಾಗಿ, ಚಳಿ, ಬಿಸಿಲು, ಗಾಳಿಗಳನ್ನು ಲೆಕ್ಕಿಸದೆ ಕಷ್ಟಪಡುವುದರಲ್ಲಿ ಅರ್ಧ ಭಾಗದಷ್ಟು ಕ್ಲೇಶವನ್ನು ಸಹಿಸಿ ತಪಸ್ಸು ಮಾಡಿದಲ್ಲಿ ಎಷ್ಟೋ ಸುಖವಾಗಿರಬಹುದಲ್ಲಾ! ಸ್ವತಂತ್ರ ವಾಗಿ ಬದುಕುವುದು ಜನ್ಮವನ್ನೆತ್ತಿದುದಕ್ಕೆ ಫಲ. ಇತರರ ಅಧಿಕಾರಕ್ಕೆ ಒಳಪಟ್ಟು, ಸೇವೆಯನ್ನು ಕೈಕೊಂಡವರು ಬದುಕಿರುವರೆಂದರೆ ಸತ್ತವ ರಾದರೂ ಯಾರು? ನೀನೇ ಹೇಳು! ಆಹಾ! ಮನುಷ್ಯರ ಸಾಹಸವನ್ನು ಏನೆಂದು ಹೇಳಬಹುದು? ಹಾವುಗಳೊಂದಿಗೆ ಸರಸವಾಡುವರು. ಪರ ನಾರಿಯರನ್ನು ಸೋಕುವರು. ಅರಸನನ್ನು ಓಲೈಸುವರು. ಆ ಅರಸ ರಾದರೂ ಇವರನ್ನು ಅಕ್ಕರೆಯಿಂದ ಮನ್ನಿಸುವರೇ? "ಬಾ, ಹೋಗು, ಏಳು, ಬಿದ್ದುಕೊಂಡಿರು, ಮಾತನಾಡು, ಬಾಯಿ ಮುಚ್ಚು" ಈ ಬಗೆಯ ಸಾಮು ಗಳನ್ನು ಮಾಡಿಸಿ, ಆಶಾಪಿಶಾಚಗ್ರಸ್ತರಾದ ಯಾಚಕರೊಂದಿಗೆ ಹಣಗಾರರು ಕ್ರೀಡಿಸುವರಲ್ಲವೇ? ಪಣ್ಯಾಂಗನೆಯರಂತೆ ಮೂಢರು ಹಣದ ಸಲುವಾಗಿ, ತಮ್ಮನ್ನು ಅನೇಕ ಬಗೆಯಿಂದ ಸಂಸ್ಕಾರಪಡೆದು ತಮ್ಮ ದೇಹವನ್ನೇ ಇತರರಿಗೆ ಒಪ್ಪಿಸುವರಲ್ಲವೇ? ಇನ್ನೂ ಕೇಳು!"

"ಸಹಜವಾಗಿಯೇ ಮಲಿನವೂ ಚಂಚಲವೂ ಎನಿಸಿದ, ತಮ್ಮ ಪ್ರಭು ವಿನ ನೋಟವನ್ನು ಎಷ್ಟೋ ದೊಡ್ಡದಾಗಿ ಭಾವಿಸುತ್ತಾರೆ. ತಮ್ಮ ಏಳಿಗೆಯ

ಸಲುವಾಗಿ ಇತರರಿಗೆ ತಲೆಬಾಗುವರು. ಬದುಕಬೇಕೆಂಬ ಆಸೆಯಿಂದ ಪ್ರಾಣಗಳನ್ನೇ ಕಳೆದುಕೊಳ್ಳುವರು. ಸುಖವನ್ನು ಪಡೆಯುವ ಸಲುವಾಗಿ ಎಷ್ಟೋ ದುಃಖವನ್ನು ಅನುಭವಿಸುವರು. ಆಹಾ! ಸೇವಕನಿಗಿಂತಲೂ ಹೆಡ್ಡನು ಲೋಕದಲ್ಲಿ ಮತ್ತೊಬ್ಬನಿರುವನೇ? ಮಾತನಾಡದೆ ಮೌನವನ್ನು ತಳೆದಿದ್ದರೆ ಮೂಗನೆನ್ನುವರು. ಮಾತುಬಲ್ಲವನಾಗಿದ್ದು ಒಂದೆರಡು ಮಾತುಗಳನ್ನು ಆಡಿದರೆ, ಬಾಯಿಬಡಿಕ, ಇಲ್ಲವೆ ಹರಟೆಯ ಮಲ್ಲ ಎನ್ನುವರು. ತಾಳ್ಮೆಯಿಂದ ಸುಮ್ಮನಿದ್ದರೆ ಪುರುಕನೆನಿಸುವನು. ಸ್ಥೈರಣೆ ಇಲ್ಲದಿದ್ದರೆ ಹೀನ ಕುಲದಲ್ಲಿ ಹುಟ್ಟಿದವನಾಗುವನು. ಪಕ್ಕದಲ್ಲಿ ನಿಂತರೆ ದಿಟ್ಟನೆನಿಸುವನು. ದೂರವಾಗಿ ನಿಂತಲ್ಲಿ ಹೆಡ್ಡನೆನ್ನುವರು. ಆಹಾ! ಇನ್ನು ಸೇವಿಸುವ ಬಗೆಯಾದರೂ ಯಾವುದು? ಅತ್ಯಂತ ಗಹನವಾದ ಸೇವಾ ವೃತ್ತಿಯ ಗುಟ್ಟನ್ನು ಯೋಗಿಗಳೂ ತಿಳಿಯಲಾರರಲ್ಲವೇ!''

ಇಂತು ಕರಟಕನ ಮಾತುಗಳನ್ನೆಲ್ಲಾ ಕೇಳಿ ದಮನಕನು, "ಮಿತ್ರ! ಎಂದಿಗೂ ಈ ರೀತಿ ಭಾವಿಸಬೇಡ. ಈಗಲಾದರೂ ನೀನು ಸ್ವಾಮಿ ಯನ್ನು ಸೇವಿಸದೆ ಸುಮ್ಮನಿರುವೆಯಾ? ಪ್ರಭುವು ಬೇಗನೆ ಪ್ರಸನ್ನನಾಗಿ ನಿನ್ನ ಇಷ್ಟಾರ್ಥವನ್ನು ಈಡೇರಿಸುವನು. ಸೇವೆ ಮಾಡದವರಿಗೆ ಚಾಮರ ಗಳನ್ನು ಬೀಸಿಸಿಕೊಳ್ಳುವ ಭಾಗ್ಯವೂ, ಶ್ವೇತಚ್ಛತ್ರವನ್ನು ಹಿಡಿಸಿಕೊಳ್ಳುವ ಅದೃಷ್ಟವೂ, ಆನೆ, ಕುದುರೆ, ತೇರು, ಕಾಲ್ಬಲಗಳಿಂದ ದಟ್ಟವಾದ ಸೇನೆಯೂ ಎಲ್ಲಿಂದ ಬರುವುದು?'' ಎಂದನು. ಕರಟಕನು—"ಆದರೂ ನಮಗೇಕೆ ಈ ಗೊಡವೆ? ನಮ್ಮನ್ನು ಕರೆಯದವರ ಹತ್ತಿರ ನಾವು ತಲೆ ಇಡುವುದು ಸರಿಯಲ್ಲ. ಸಂಬಂಧವಿಲ್ಲದ ಕಾರ್ಯದಲ್ಲಿ ಪ್ರವೇಶಿಸುವವನು ಬೆಣೆ ಯನ್ನು ಕಿತ್ತ ಮಂಗನಂತೆ ಪೆಟ್ಟುತಿಂದು, ತಾನಾಗಿಯೇ ಸಾಯುವನು'' ಎಂದನು. ಆ ಕಥೆಯನ್ನು ಸಂಪೂರ್ಣವಾಗಿ ಹೇಳುವಂತೆ ದಮನಕನು ಕೇಳಲಾಗಿ ಕರಟಕನು ಹೇಳತೊಡಗಿದನು.

### ೧ನೆಯ ಕಥೆ.

ಪೂರ್ವಕಾಲದಲ್ಲಿ ಮಗಧದೇಶದಲ್ಲಿ ಧರ್ಮಾರಣ್ಯದ ಬಳಿಯಲ್ಲಿ ಶುಭದತ್ತನೆಂಬ ಕಾಯಸ್ಥನು ಬೌದ್ಧಾಲಯದ ಮಂಟಪವನ್ನು ಕಟ್ಟಿಸುತ್ತಿ ದ್ದನು. ಅಲ್ಲಿ ಬಡಗಿಯು ಒಂದು ಕಂಬವನ್ನು ಅರೆಯಾಗಿ ಗರಗಸದಿಂದ

ಕುಯ್ದು, ಅದರಲ್ಲಿ ಒಂದು ಬೆಣೆಯನ್ನು ಹೊಡೆದಿದ್ದನು. ಆಗ ಅಲ್ಲಿಗೆ ಕಾಡು ಮಂಗಗಳ ಹಿಂಡು ಅಲೆಯುತ್ತ ಬಂದಿತು. ಅವುಗಳಲ್ಲಿ ಒಂದು ಕೋತಿಯು ಯಮನ ಪ್ರೇರಣೆಯಿಂದಲೋ ಎಂಬಂತೆ ಆ ಬೆಣೆಯನ್ನು ತನ್ನ ಎರಡು ಕೈಗಳಿಂದಲೂ ಬಲವಾಗಿ ಅಲ್ಲಾಡಿಸಿ ಕಿತ್ತಿತು. ಅದು ಸುಲಭ ವಾಗಿ ಕೀಳುವಂತಿರಲಿಲ್ಲ. ಆಗ ಅದರ ಅಂಡಕೋಶವು ಆ ಕಂಬದ ಸೀಳು ಗಳ ನಡುವೆ ನೇತಾಡುತ್ತಿದ್ದಿತು. ಬಳಿಕ ಮರ್ಕಟವು ತನ್ನ ಜಾತಿಗೆ ಸಹಜ ವಾದ ಚಾಪಲ್ಯದಿಂದ, ಬಲವನ್ನೆಲ್ಲ ವೆಚ್ಚನಾಡಿ, ಹೇಗೋ ಸಾಹಸಪಟ್ಟು ಆ ಬೆಣೆಯನ್ನು ಕಿತ್ತಿತು. ಒಡನೆಯೇ ಸೀಳಾಗಿದ್ದ ಕಂಬದ ಎರಡೂ ಹೋಳು ಗಳು ಕೂಡಿಕೊಂಡುವು. ಅವುಗಳ ನಡುವೆ ಜೋಲುತ್ತಿದ್ದ ಅಂಡಗಳೆರಡೂ ಸಿಗಿದು, ಆ ವಾನರವು ಅಲ್ಲಿಯೇ ಸತ್ತಿತು. ಆ ಕಾರಣ "ಸಂಬಂಧವಿಲ್ಲದ ಕಾರ್ಯದಲ್ಲಿ ತಲೆಹಾಕಬಾರದು" ಎಂದೆನು ಎಂಬುದಾಗಿ ಕರಟಕನು ಹೇಳಿದನು. ಆಗ ದಮನಕನು "ಆದರೂ ಅರಸನ ಕಾರ್ಯಗಳನ್ನು ಗಮನಿಸುವುದು ಸೇವಕನ ಕರ್ತವ್ಯವಲ್ಲವೇ?" ಎಂದಿತು. ಅದನ್ನು ಕೇಳಿ, ಕರಟಕನು—"ಸರ್ವಾಧಿಕಾರಗಳಲ್ಲಿಯೂ ನಿಯಮಿತನಾಗಿರುವ ಪ್ರಧಾನ ಮಂತ್ರಿಯು ಹಾಗೆಯೇ ಮಾಡಬಹುದಷ್ಟೆ! ಏಕೆಂದರೆ, ಅನುಜೀವಿಯು ಇತ ರರ ಕರ್ತವ್ಯವನ್ನು ಮೇಲೆ ಹಾಕಿಕೊಂಡು, ಚರ್ಚೆಮಾಡಬಾರದು. ಇತ್ತ ನೋಡು. ಅರಸನ ಮೇಲ್ಮೆಯನ್ನು ಬಯಸಿ ಹೆರರ ಅಧಿಕಾರಗಳ ಮೇಲೆ ಚರ್ಚೆಮಾಡಿದಲ್ಲಿ "ಕಿರಚಿ ಪೆಟ್ಟು ತಿಂದು ಸತ್ತ ಕತ್ತೆಯಂತೆ ದುಃಖಕ್ಕೆ ಗುರಿಯಾಗುವನು" ಎಂದನು. ಅದರ ಪರಿಯೆಂತೆಂದು ದಮನಕನು ಕೇಳ ಲಾಗಿ ಕರಟಕನು ಹೇಳತೊಡಗಿದನು.

### ೨ನೆಯ ಕಥೆ

ಕಾಶೀಪಟ್ಟಣದಲ್ಲಿ ಕರ್ಪೂರಪಟನೆಂಬ ಮಡಿವಾಳನಿದ್ದನು. ಒಂದು ರಾತ್ರಿ ಅವನು ನಿದ್ದೆ ಮಾಡುವಾಗ ಕಳ್ಳರು ಮನೆಗೆ ನುಗ್ಗಿದರು. ಅಂಗಳ ದಲ್ಲಿ ಕತ್ತೆಯನ್ನು ಕಟ್ಟಿದ್ದನು. ಅದರ ಹತ್ತಿರವೇ ಒಂದು ನಾಯಿಯೂ ಇದ್ದಿತು. ಆಗ ಕತ್ತೆಯು ನಾಯಿಯನ್ನು ಕುರಿತು—"ಇದೀಗ ನಿನ್ನ ಕರ್ತವ್ಯನಿಷ್ಠತೆಯನ್ನು ಹೊರಪಡಿಸುವುದಕ್ಕೆ ತಕ್ಕ ಸಮಯ. ಹೀಗಿದ್ದರೂ ನೀನು ಬೊಗಳಿ ದಣಿಯನ್ನು ಎಬ್ಬಿಸದಿರುವೆಯಲ್ಲಾ? ಕಾರಣವೇನು?"

 

ಎಂದಿತು. ಆಗ ನಾಯಿಯು—“ನನ್ನ ಕೆಲಸದ ಗೊಡವೆ ನಿನಗೇಕೆ? ಅದನ್ನೆಲ್ಲ ನೀನು ವಿಚಾರಿಸ ಕೆಲಸವಿಲ್ಲ. ಹಗಲೂ ಇರುಳೂ ಆತನ ಮನೆಯನ್ನು ಹೇಗೆ ಕಾದುಕೊಂಡಿರುವೆನೆಂಬುದನ್ನು ನೀನೇನು ಅರಿಯೆಯಾ? ಅದರಿಂದ ಅಲ್ಲವೇ ಆತನು ಇಲ್ಲಿಯ ವರೆಗೂ ಸುಖವಾಗಿರುತ್ತ, ನನ್ನ ಉಪಯೋಗವೇನೆಂಬುದನ್ನೇ ಇನ್ನೂ ತಿಳಿಯದಿರುವನು? ನನಗೀಗ ಇಷ್ಟು ಕೂಳು ಹಾಕುವುದಕ್ಕೂ ಆತನಿಗೆ ಮನಸ್ಸು ಬರುವುದಿಲ್ಲ. ಅದೂ ಯುಕ್ತವೇ ಸರಿ. ಪ್ರಭುಗಳು ಇಕ್ಕಟ್ಟಿಗೆ ಸಿಲುಕಿ ಪಾಡುಪಟ್ಟರಲ್ಲವೇ ಸೇವಕರ ವಿಷಯದಲ್ಲಿ ಆದರ ಹುಟ್ಟುವುದು?” ಎಂದಿತು. ಈ ಮಾತನ್ನು ಕೇಳಿ ಗರ್ದಭವು—“ಎಲೋ, ಮೂರ್ಖಶಿಖಾಮಣಿಯೇ! ಹುಟ್ಟಿನಿಂದಲೇ ನಾಯಿ ಜಾತಿಯನ್ನು ಸೋಕಬಾರದು. ಅದರಲ್ಲಿಯೂ ನೀನು ಊಳಿಗದ ಪಂಗಡಕ್ಕೆ ಸೇರಿದವನು. ಇತ್ತ ನೋಡು, ಕೆಲಸವು ಒದವಿದಾಗ ಬೇಡತಕ್ಕವನು ಒಬ್ಬ ಬಂಟನೇ? ಅವನನ್ನು ಗೆಳೆಯನೆನ್ನಬಹುದೇ? ಕಾರ್ಯವು ಕೈಮೀರಿದ ಬಳಿಕ ಬಂಟನಿಂದಾಗಲಿ, ಗೆಳೆಯನಿಂದಾಗಲಿ ಪ್ರಯೋಜನವಿಲ್ಲವಷ್ಟೆ” ಎಂದಿತು.

ಆ ಮಾತನ್ನು ಕೇಳಿ ಕುಕ್ಕುರವು ಹೀಗೆ ಹೇಳಿತು:—“ಕೆಲಸವಿದ್ದಾಗ ಮಾತ್ರವೇ ಸೇವಕರನ್ನು ಮನ್ನಿಸುವವನು ಒಬ್ಬ ಅರಸನೋ? ಭೃತ್ಯರನ್ನೂ ಹೆಂಡತಿಯನ್ನೂ ಅನುದಿನವು ಕಾಪಾಡುವುದು ಪ್ರಭುವಿನ ಕರ್ತವ್ಯವಲ್ಲವೇ? ಆಳುಗಳನ್ನು ಸಲಹುವಿಕೆ, ಅರಸರ ಊಳಿಗ, ಧರ್ಮಕಾರ್ಯಗಳನ್ನು ನಡೆಯಿಸುವಿಕೆ, ಮಕ್ಕಳ ಅಭಿವೃದ್ಧಿ—ಈ ವಿಷಯದಲ್ಲಿ ಪ್ರತಿನಿಧಿಗಳು ಸಲ್ಲರು.” ಆಗ ರಾಸಭವು ಸಿಟ್ಟಿನಿಂದ—“ನೀನು ಮಹಾ ಪಾಪಿ! ಇಂತಹ ವಿಪತ್ತಿನಲ್ಲಿಯೂ ದಣಿಯ ಕೆಲಸವನ್ನು ಅಸಡ್ಡೆ ಮಾಡುತ್ತಿರುವೆಯಲ್ಲಾ! ಇನ್ನು ನಾನೇ ಯಜಮಾನನನ್ನು ಎಚ್ಚರಗೊಳಿಸುವೆನು. ಏಕೆಂದರೆ, ಬೆನ್ನು ತಿರುಗಿಸಿ ಬಿಸಿಲನ್ನು ಸೇವಿಸಬೇಕು. ಬೆಂಕಿಯನ್ನು ಹೊಟ್ಟೆಗೆ ಕಾಸಿಕೊಳ್ಳಬೇಕು. ಅರಸನನ್ನು ಹಿಂದುಮುಂದು ಎನ್ನದೆ ಸರ್ವ ಕಾಲದಲ್ಲಿಯೂ ಸರ್ವ ವಿಧದಲ್ಲಿಯೂ ಸೇವಿಸಬೇಕು. ಸತ್ಯವರ್ತನದಿಂದ ಪರಲೋಕವನ್ನು ಗೆಲ್ಲಬೇಕು” ಎಂಬುದಾಗಿ ಹೇಳಿ ಒಡನೆಯೇ ಗಟ್ಟಿಯಾಗಿ ಕಿರಚಿತು. ಇದರ ಕೂಗನ್ನು ಕೇಳಿ ಅಗಸನು ಎಚ್ಚತ್ತು, ನಿದ್ದೆ ಕೆಡಿಸಿತೆಂಬ

ಸಿಟ್ಟಿನಿಂದ ದೊಣ್ಣೆಯನ್ನು ತಂದು, ಅದಕ್ಕೆ ಬಲವಾದ ಎರಡು ಪೆಟ್ಟು ಕೊಟ್ಟನು. ಕೂಡಲೇ ಕತ್ತೆಯು ಸತ್ತಿತು. ಅದರಿಂದ “ಅರಸರ ಮೇಲ್ಮೆಯನ್ನು ಬಯಸಿ ಹೆರರ ಅಧಿಕಾರಗಳ ಮೇಲೆ ಚರ್ಚೆ ಮಾಡಬಾರದು” ಎಂಬುದಾಗಿ ಹೇಳಿದೆನು. ಇನ್ನೂ ಕೇಳು. ಬೇಟೆಯನ್ನು ಹುಡುಕಿ ತೋರುವುದು ನಮ್ಮ ಕೆಲಸ. ನಮ್ಮ ಕರ್ತವ್ಯವನ್ನು ನಾವು ಮಾಡಿದರೆ ಸಾಕು. ಸ್ವಲ್ಪ ಯೋಚಿಸಿದಲ್ಲಿ ಸದ್ಯಕ್ಕೆ ಅದರ ಯೋಚನೆಯೂ ನಮಗಿಲ್ಲ. ನಮ್ಮ ಅರಸನು ತಾನು ತಿಂದು ಮಿಕ್ಕ ಬೇಟೆಯನ್ನೆಲ್ಲ ನಮಗೆ ಕೊಟ್ಟಿರುವನಷ್ಟೆ!” ಎಂಬುದಾಗಿ ಕರಟಕನು ಹೇಳಿದ ಮಾತನ್ನು ಕೇಳಿ, ದಮನಕನು ರೋಷದಿಂದ ಇಂತೆಂದನು:—“ಏನಿದು? ನೀನು ಹೊಟ್ಟೆ ಹೊರೆದುಕೊಳ್ಳುವುದಕ್ಕಾಗಿಯೇ ಅರಸನನ್ನು ಸೇವಿಸುತ್ತಿರುವೆಯಾ? ನಿನ್ನ ಮಾತು ಸರಿಯಲ್ಲ, ಏಕೆಂದರೆ, ಗೆಳೆಯರಿಗೆ ಒತ್ತಾಸೆ ಮಾಡುವುದಕ್ಕೂ, ಹಗೆಗಳ ಸೊಕ್ಕನ್ನು ಮುರಿಯುವುದಕ್ಕೂ, ಬುದ್ಧಿಶಾಲಿಗಳು ರಾಜಾಶ್ರಯವನ್ನು ಬಯಸುವವರಲ್ಲವೇ? ಈ ಹಾಳು ಹೊಟ್ಟೆಯನ್ನು ಯಾರು ತಾನೇ ತುಂಬಿಸಿಕೊಳ್ಳುವುದಿಲ್ಲ! ಯಾವನು ಬದುಕಿದ್ದರೆ ಮಿತ್ರರೂ, ಬ್ರಾಹ್ಮಣರೂ, ಬಂಧುಬಳಗದವರೂ ಬದುಕುವರೋ ಅವನ ಬದುಕು ಲೇಸು! ತನ್ನ ಒಬ್ಬನ ಹೊಟ್ಟೆಯನ್ನು ನೋಡಿಕೊಳ್ಳುವುದು ಒಂದು ಕೆಲಸವೇ? ಯಾವಾತನನ್ನು ಆಶ್ರಯಿಸಿ ಅನೇಕ ಮಂದಿ ಜೀವಿಸುವರೋ ಆತನು ಬದುಕಿದುದು ಸಾರ್ಥಕ. ಕಾಗೆಯೂ ತನ್ನ ಕೊಕ್ಕಿನಿಂದ ಹೊಟ್ಟೆ ತುಂಬಿಕೊಳ್ಳುವುದಿಲ್ಲವೇ?”

“ಒಬ್ಬ ಬಂಟನು ಐದು **ಪುರಾಣ***ಗಳಿಗಾಗಿ ಸೇವೆಯನ್ನು ಕೈಕೊಳ್ಳುವನು. ಮತ್ತೊಬ್ಬನು ಲಕ್ಷ ಪುರಾಣಗಳಿಗೆ ದಾಸ್ಯವನ್ನು ವಹಿಸುವನು. ಇನ್ನೊಬ್ಬನು ಲಕ್ಷಗಟ್ಟಲೆ ಕೊಟ್ಟರೂ ಊಳಿಗವನ್ನು ಒಪ್ಪಲಾರನು. ದಣಿಯೂ ಮನುಷ್ಯನೇ, ಬಂಟನೂ ಮನುಷ್ಯನೇ. ಇಂತು ಇಬ್ಬರೂ ಮನುಷ್ಯಜಾತಿಯವರೇ ಆಗಿದ್ದರೂ, ಒಬ್ಬನು ಮತ್ತೊಬ್ಬನಿಗೆ ದಾಸನಾಗುವಿಕೆ ಎಂಬುದು

---

*** ೮೦ ಕವಡೆಗಳ ಬೆಲೆಯುಳ್ಳ ನಾಣ್ಯಕ್ಕೆ “ಪುರಾಣ”ವೆಂಬುದಾಗಿ ಹಿಂದಿನ ಕಾಲದಲ್ಲಿ ರೂಢಿಯಲ್ಲಿದ್ದಿತು. ಉತ್ತರ ಹಿಂದೂಸ್ಥಾನದಲ್ಲಿ ಈಗಲೂ ಕವಡೆಗಳು ನಾಣ್ಯಕ್ಕೆ ಬದಲಾಗಿ ಚಲಾವಣೆಯಲ್ಲಿವೆ.**

ಬಹಳ ಹೀನವಾದುದು. ಅಂತಹ ಸೇವಾವೃತ್ತಿಯನ್ನು ಕೈಕೊಂಡರೂ, ಅದರಲ್ಲಿಯೂ ಮೊದಲನೆಯವನಾಗದಿದ್ದರೆ, ಅವನು ಬದುಕಿರುವವರಲ್ಲಿ ಲೆಕ್ಕವೇ? ಹಿರಿಯರು ಅಂತೆಯೇ ಹೇಳಿರುವರು.''

"ಆನೆ, ಕುದುರೆ, ಲೋಹ, ಮರಮುಟ್ಟು, ಕಲ್ಲು, ಬಟ್ಟೆ, ಹೆಣ್ಣು, ಗಂಡು, ನೀರು ಇವುಗಳಲ್ಲಿಯೂ ಒಂದೊಂದಕ್ಕೂ ಎಷ್ಟೋ ವ್ಯತ್ಯಾಸಗಳುಂಟು. ಎಲ್ಲಿಯೋ ಸ್ವಲ್ಪಮಟ್ಟಿಗೆ ವಪೆಯಿಂದ ಕೂಡಿ, ಕೊಳೆತುಂಬಿ, ರಕ್ತವೂ ಮಾಂಸವೂ ಇಲ್ಲದೆ ನಾರುತ್ತಿರುವ ಯಾವುದೋ ಒಂದು ಎಲುಬನ್ನು ಸಂಪಾದಿಸಿ, ಶುನಕವು ಅಪಾರವಾದ ಸಂತೋಷವನ್ನೈದುವುದು. ಈ ಎಲುಬಿನಿಂದ ಅದರ ಹಸಿವು ತೀರುವಂತಿಲ್ಲ. ಸಿಂಹವು ತನ್ನ ಪಕ್ಕದಲ್ಲಿರುವ ನರಿಯನ್ನು ಬಿಟ್ಟು, ಆನೆಯನ್ನೇ ಹುಡುಕಿ ಕೊಲ್ಲುವುದು. ಅಂತೆಯೇ ಮನುಷ್ಯನೂ ಎಂತಹ ಸಂಕಟಕ್ಕೆ ಗುರಿಯಾದರೂ, ತನ್ನ ಶಕ್ತಿಗೆ ತಕ್ಕ ಫಲವನ್ನೇ ಬಯಸುವನು. ಇನ್ನು ಸ್ವಾಮಿಗೂ ಭೃತ್ಯನಿಗೂ ಇರುವ ಭೇದವನ್ನಾದರೂ ನೋಡು.''

"ಶುನಕವು ತನಗೆ ಕೂಳು ಹಾಕುವವನ ಇದಿರಾಗಿ ಬಾಲವನ್ನಾಡಿಸುತ್ತ, ಕಾಲಿಗೆ ಅಡ್ಡಬಿದ್ದು, ನೆಲದ ಮೇಲೆ ಹೊರಳುತ್ತ ಮೋರೆಯನ್ನೂ ಹೊಟ್ಟೆಯನ್ನೂ ತೋರುವುದು. ಆನೆಯಾದರೋ, ಗಂಭೀರವಾದ ನೋಟದಿಂದ ನೋಡುವುದು. ನೂರಾರು ಸವಿ ಮಾತುಗಳನ್ನಾಡದೆ ಡಾಣವನ್ನು ತಿನ್ನುವುದಿಲ್ಲ. ತಿಳಿವಳಿಕೆಗೂ, ಪರಾಕ್ರಮಕ್ಕೂ, ಕೀರ್ತಿಗೂ ಲೋಪ ಬಾರದಂತೆ ಒಂದು ನಿಮಿಷವಾದರೂ ಬದುಕುವುದೇ ಬದುಕು. ಕಾಗೆಯು ವರ್ಷಗಟ್ಟಲೆ ಬದುಕುತ್ತದೆ. ಕೊಕ್ಕಿನಿಂದ ಹೇಗೋ ಹೊಟ್ಟೆಯನ್ನೂ ತುಂಬಿಕೊಳ್ಳುತ್ತದೆ. ಕೀಳು, ಮೇಲು ಎಂಬ ವಿಚಾರವಿಲ್ಲದೆ, ಬಾರಿಬಾರಿಗೂ ವೈದಿಕಮಾರ್ಗಕ್ಕೆ ತಪ್ಪಿ ನಡೆಯುತ್ತ, ನಿಂದೆಗೆ ಗುರಿಯಾಗಿ, ಹೊಟ್ಟೆ ಹೊರೆದುಕೊಳ್ಳುವ ವಿಚಾರವನ್ನೇ ಹಗಲೂ ಇರುಳೂ ಯೋಚಿಸುತ್ತ ಕಾಲ ಕಳೆಯುವ ನರನಿಗೂ ಪಶುವಿಗೂ ಭೇದವೇನು?''

ಇದನ್ನು ಕೇಳಿ ಕರಟಕನು—"ನಾವೇನೂ ಮಂತ್ರಿ ಪ್ರಧಾನರಲ್ಲವಷ್ಟೆ! ಹೀಗಾಗಿ ನಮಗೇಕೆ ಇದರ ಗೊಡವೆ?'' ಎಂದನು. ಆಗ ದಮನಕನು—"ಮನುಷ್ಯನು ಪ್ರಧಾನನೆನಿಸುವುದಕ್ಕಾಗಲಿ, ಅಪ್ರಧಾನನೆನಿಸುವುದಕ್ಕಾಗಲಿ

ಬಹಳ ಕಾಲ ಬೇಕಿಲ್ಲ. ಯಾವನೊಬ್ಬನು ಮತ್ತೊಬ್ಬನನ್ನು ಉತ್ತಮ ನೆಂದಾಗಲಿ ಅಧಮನೆಂದಾಗಲಿ ತಿಳಿಯಲಾರನು. ಲೋಕದಲ್ಲಿ ತಿರಸ್ಕಾರ ಪುರಸ್ಕಾರಗಳು ಅವನವನ ನಡೆವಳಿಯನ್ನು ಅನುಸರಿಸುತ್ತವೆ. ಮತ್ತು ಒಂದು ಬಂಡೆಯನ್ನು ಬೆಟ್ಟದ ತುದಿಗೆ ಏರಿಸಬೇಕಾದರೆ ಹೆಚ್ಚು ಸಾಹಸವು ಬೇಕು. ಅದನ್ನು ಕೆಳಗೆ ಉರುಳಿಸುವುದು ಒಂದೇ ಒಂದು ಕ್ಷಣದ ಕೆಲಸ. ಪುರುಷನ ಗುಣದೋಷಗಳೂ ಹೀಗೆಯೇ ಸರಿ. ಉದಾಹರಣೆಗಾಗಿ ಬಾವಿ ಯನ್ನು ಅಗೆಯುವವನನ್ನೂ ಗೋಡೆ ಕಟ್ಟುವವನನ್ನೂ ಇಟ್ಟುಕೊಳ್ಳೋಣ! ಬಾವಿಯನ್ನು ಅಗೆಯತಕ್ಕವನು ಕೆಳಕೆಳಗೆ ಹೋಗುವನು. ಗೋಡೆಕಟ್ಟ ತಕ್ಕವನು ಮೇಲೆ ಮೇಲೆ ಹೋಗುವನು. ಅಂತೆಯೇ ಮನುಷ್ಯರೂ ತಮ್ಮ ಕಾರ್ಯಗಳಿಂದಲೇ ಕೀಳು ಮೇಲಾಗುವರು. ಅದರಿಂದ, ಮಿತ್ರನೆ! ತನ್ನ ಗೌರವವು ತನ್ನ ಪ್ರಯತ್ನಗಳ ಮೇಲೆ ಹೊಂದಿ ಇರುವುದು'' ಎಂಬುದಾಗಿ ಹೇಳಿದನು.

ಕರಟಕ—"ಹಾಗಾದರೆ, ನೀನೇನು ಮಾಡಬೇಕೆಂದಿರುವೆ?''

ದಮನಕ—"ನಮ್ಮ ಅರಸನಾದ ಪಿಂಗಳಕನು ಯಾವ ಕಾರಣ ದಿಂದಲೋ ಹೆದರಿ, ನೀರು ಕುಡಿಯದೆ ಹಿಂದಿರುಗಿ ಸುಮ್ಮನೆ ಯೋಚಿಸುತ್ತ ಕುಳಿತಿರುವನು.''

ಕರಟಕ—"ಅದಕ್ಕೆ ಕಾರಣವೇನೆಂಬುದನ್ನು ನೀನು ಬಲ್ಲೆಯಾ?''

ದಮನಕ—"ಪ್ರಜ್ಞಾವಂತರಿಗೂ ತಿಳಿಯದಿರುವುದಾವುದು? ಬಾಯಿ ಬಿಟ್ಟು ಹೇಳಿದರೆ, ಅದರ ಅಭಿಪ್ರಾಯವನ್ನು ಪಶುವೂ ಗ್ರಹಿಸುತ್ತದೆ. ಕುದುರೆಗಳೂ ಆನೆಗಳೂ ನಡೆಯಿಸಿದಂತೆ ನಡೆಯುತ್ತವೆ. ಬುದ್ಧಿ ಶಾಲಿಯು, ಬಾಯಾರೆ ಹೇಳದ ವಿಷಯವನ್ನೂ ಊಹಿಸುವನು. ಇತರರ ಇಂಗಿತವನ್ನು ಅರಿಯುವುದೇ ಬುದ್ಧಿಯಿರುವುದಕ್ಕೆ ಪ್ರಯೋಜನ ವಲ್ಲವೇ? ಮುಖಚೇಷ್ಟೆಗಳಿಂದಲೂ, ಅಂಗವಿಕಾರಗಳಿಂದಲೂ, ಅಭಿಪ್ರಾಯ ಗಳಿಂದಲೂ, ನಡೆವಳಿಯಿಂದಲೂ, ಕಣ್ಣು-ಮೋರೆ ಮುಂತಾದುವುಗಳ ಸನ್ನೆ ಗಳಿಂದಲೂ ಮನಸ್ಸಿನಲ್ಲಿರುವುದನ್ನು ತಿಳಿಯಬಹುದು. ಈ ಕಾರಣದಿಂದ ಈ ಸಂದರ್ಭದಲ್ಲಿ ನಮ್ಮ ಪ್ರಭುವನ್ನು ವಶಪಡಿಸಿಕೊಳ್ಳುವೆನು. ಸಮ

ಯಕ್ಕೆ ತಕ್ಕ ಮಾತು, ನಂಬಿಕೆಗೆ ತಕ್ಕ ನಡತೆ, ಶಕ್ತಿಗೆ ತಕ್ಕ ಸಿಟ್ಟು—ಈ ಮೂರನ್ನು ಅರಿತವನೇ ಜಾಣನು."

ಕರಟಕ—"ಆಹ್ವಾನವಿಲ್ಲದೆ ಹೋಗುವವನು, ಪ್ರಶ್ನೆಯಿಲ್ಲದೆ ಮಾತ ನಾಡುವವನು, ದೊರೆಯು ತನ್ನನ್ನು ಮೆಚ್ಚಿರುವನೆಂಬುದಾಗಿ ನೆಚ್ಚುವವನು- ಈ ಮೂವರೂ ಹೆಡ್ಡರು."

ದಮನಕ-"ಮಂಗಳಕರನೆ! ನಾನೇನು ಸೇವಾಧರ್ಮವನ್ನು ಅರಿಯ ದವನಲ್ಲವಷ್ಟೆ! ಇತ್ತ ಕೇಳು! ಒಳ್ಳೆಯದು, ಕೆಟ್ಟುದು ಎಂಬಿವು ಸ್ವಾಭಾ ವಿಕ ಗುಣಗಳಲ್ಲವಷ್ಟೆ! ಯಾವುದು ಯಾವನಿಗೆ ಇಷ್ಟವೋ ಅದು ಅವನಿಗೆ ಒಳ್ಳೆಯದು. ಯಾವನಿಗೆ ಯಾವ ಅಭಿಪ್ರಾಯವಿರುವುದೋ, ಅವನನ್ನು ಅದೇ ಅಭಿಪ್ರಾಯದಿಂದಲೇ ಒಳಹೊಕ್ಕು ವಶಪಡಿಸಿಕೊಳ್ಳಬೇಕು. ಇದೀಗ ಜಾಣನ ಲಕ್ಷಣ. 'ಯಾರಲ್ಲಿ?' ಎಂದೊಡನೆಯೇ 'ನಾನು' ಎನ್ನಬೇಕು. 'ಅರಸನ ಅಪ್ಪಣೆ ಏನು?' ಎಂಬುದಾಗಿ ಬಾಯ್ದೆರೆದು ಕೇಳಬೇಕು. ಶಕ್ತಿವಂಚನೆಯಿಲ್ಲದೆ ದಣಿಯ ಅಪ್ಪಣೆಯನ್ನು ನೆರವೇರಿಸಬೇಕು. ಅರಸರಿಗೆ ಅಂಕೆಯನ್ನು ಮೀರುವುದೂ, ಬ್ರಾಹ್ಮಣನಿಗೆ ಮಾನಭಂಗ ಮಾಡುವುದೂ, ಮಡದಿಯರಿಗೆ ಬೇರೆ ಹಾಸಿಗೆಯೂ, ಇವು ಶಸ್ತ್ರವಿಲ್ಲದ ಸಾವು. ಆದುದ ರಿಂದ ಅಲ್ಪಸಂತೋಷಿಯೆನಿಸಿ, ನೆಳಲಿನಂತೆ ಯಾವಾಗಲೂ ಎಡೆಬಿಡದೆ, ಮರುಮಾತನ್ನಾಡದೆ, ಆಜ್ಞೆಯನ್ನು ನೆರವೇರಿಸುವವನೇ ಅರಮನೆಯಲ್ಲಿ ವಾಸಮಾಡುವುದಕ್ಕೆ ತಕ್ಕವನು."

ಕರಟಕ—"ಒಂದು ವೇಳೆ 'ಸಮಯವರಿಯದೆ ಏಕೆ ಬಂದೆ?' ಎಂಬು ದಾಗಿ ಅರಸನು ನಿನ್ನನ್ನು ಅವಮಾನಗೊಳಿಸಿದರೆ ಏನು ಮಾಡುವೆ?"

ದಮನಕ—"ಹಾಗೆಯೇ ಆಯಿತೆನ್ನುವ! ಆಗಲೂ ಪಕ್ಕದಲ್ಲಿಯೇ ಇರಬೇಕಾದುದು ಸೇವಕನ ಕರ್ತವ್ಯವಷ್ಟೆ! ಕೇಡು ಬರುವುದೋ ಏನೋ ಎಂಬ ಶಂಕೆಯಿಂದ ಯಾವ ಕೆಲಸಕ್ಕೂ ಮೊದಲು ಮಾಡದಿರುವುದು ಕಾಪುರುಷನ ಲಕ್ಷಣ. ಅನ್ನವು ಜೀರ್ಣವಾಗುವುದೋ ಇಲ್ಲವೋ ಎಂಬ ಸಂದೇಹದಿಂದ ಯಾರೂ ಊಟವನ್ನು ಮಾಡದೆ ಇರುವುದಿಲ್ಲವಷ್ಟೆ! ನಿನ್ನ ಸಂದೇಹಕ್ಕೂ ಉತ್ತರ ಹೇಳುವೆನು, ಕೇಳು. ಯಾವಾಗಲೂ ಪಕ್ಕದಲ್ಲಿಯೇ

ಇರುವವರ ಮೇಲೆ ಅರಸರಿಗೆ ಹೆಚ್ಚು ಮಮತೆ; ಅವನು ವಿದ್ಯಾಹೀನನೇ ಆಗಿದ್ದರೂ, ಕೀಳು ಜಾತಿಯವನೇ ಆಗಿದ್ದರೂ, ನಂಟನಲ್ಲದಿದ್ದರೂ, ಅವನೇ ಅರಸನಿಗೆ ಮೆಚ್ಚುಗೆಯವನು. ಸಾಮಾನ್ಯವಾಗಿ ಬಳ್ಳಿಗಳು ಪಕ್ಕದಲ್ಲಿರುವುದನ್ನೇ ಸುತ್ತಿಕೊಳ್ಳುವುದಿಲ್ಲವೇ? ಅರಸರೂ ಅಂತೆಯೇ ಸರಿ.''

ಕರಟಕ—''ಅಲ್ಲಿ ಹೋಗಿ ನೀನು ಏನು ಹೇಳುವೆ?''

ದಮನಕ—''ಅರಸನಿಗೆ ನನ್ನಲ್ಲಿ ಪ್ರೀತಿಯಿರುವುದೋ ಇಲ್ಲವೋ ಎಂಬುದನ್ನು ಮೊದಲು ತಿಳಿಯುವೆನು.''

ಕರಟಕ—''ಅದನ್ನು ತಿಳಿಯುವ ಬಗೆ ಯಾವುದು?''

ದಮನಕ—''ದೂರದಲ್ಲಿ ಬರುತ್ತಿರುವಾಗಲೇ ಪ್ರಸನ್ನವಾದ ದೃಷ್ಟಿ, ನಗೆಮೊಗ, ಆದರದಿಂದ ಪ್ರಶ್ನೆಮಾಡುವಿಕೆ, ಪರೋಕ್ಷದಲ್ಲಿ ಗುಣಶ್ಲಾಘನೆ, ಪ್ರಿಯ ವಸ್ತುಗಳು ದೊರೆತಾಗ ನೆನಪು, ಸೇವಕನ ಆಳಿನ ಮೇಲೆ ಅಕ್ಕರೆ, ಏನಾದರೂ ಕೊಡುವಾಗ ಸವಿಮಾತು, ದೋಷಗಳನ್ನೂ ಗುಣಗಳೆಂಬುದಾಗಿ ಭಾವಿಸುವಿಕೆ—ಇವೆಲ್ಲವೂ ಅಕ್ಕರೆಯುಳ್ಳ ಅರಸರ ಲಕ್ಷಣಗಳು. ಕಾಲಹರಣ, ಆಸೆದೋರುವುದು, ಫಲಸಮಯವೊದವಿದಾಗ ಭಂಗಗೊಳಿಸುವಿಕೆ—ಇವು ಪ್ರೀತಿಶೂನ್ಯನಾದ ರಾಜನ ಕುರುಹುಗಳು. ಇವುಗಳನ್ನು ಬುದ್ಧಿಶಾಲಿಯು ಮಾತ್ರವೇ ಕಂಡುಹಿಡಿಯಬಲ್ಲನು. ಅದರಿಂದ ಪಿಂಗಳಕರಾಜನನ್ನು ಒಲಿಸಿಕೊಳ್ಳುವ ಬಗೆಯನ್ನು ನಾನು ಬಲ್ಲೆನು. ಅದಕ್ಕೆ ತಕ್ಕಂತೆಯೇ ಅಲ್ಲಿ ಮಾತನಾಡುವೆನು. ಜಾಣನು ಅಪಾಯಸಂದರ್ಶನದಿಂದಲೇ ಮುಂದೆ ಬರುವ ಆಪತ್ತನ್ನೂ, ಉಪಾಯಸಂದರ್ಶನದಿಂದ ಮುಂದೆ ತನಗೆ ಒದಗಬಹುದಾದ ಕಾರ್ಯಸಿದ್ಧಿಯನ್ನೂ ಪ್ರತ್ಯಕ್ಷವಾಗಿರುವಂತೆ ಕಾಣುವನು. ಇದೀಗ ನೀತಿಯ ಪ್ರಭಾವ.''

ಕರಟಕ—''ಹಾಗಾದರೂ ಅನವಸರವಾಗಿ ಮಾತನಾಡುವುದು ಸರಿಯಲ್ಲವಷ್ಟೆ! ಏಕೆಂದರೆ, ಬೃಹಸ್ಪತಿಯೇ ಆದರೂ, ಸಮಯವರಿತು ಮಾತನಾಡದಿದ್ದರೆ ಬುದ್ಧಿಶೂನ್ಯನೆನಿಸುವುದು ಮಾತ್ರವಲ್ಲದೆ, ಶಾಶ್ವತವಾದ ಅಪಮಾನಕ್ಕೂ ಗುರಿಯಾಗುವನು. ಯಾವಾಗಲೂ ಪ್ರಿಯವನ್ನೇ ನುಡಿಯ

ತಕ್ಕವರು ಎಲ್ಲೆಲ್ಲಿಯೂ ದೊರೆಯುವರು. ಅಪ್ರಿಯವಾಗಿದ್ದರೂ ಹಿತವನ್ನು ಹೇಳತಕ್ಕವರು ಮಾತ್ರ ದುರ್ಲಭ."

ದಮನಕ—"ಸಖನೆ! ಹೆದರಬೇಡ, ನಾನು ಸಮಯವರಿಯದೆ ಮಾತ ನಾಡತಕ್ಕವನಲ್ಲ. ಏಕೆಂದರೆ, ಹಿತವನ್ನು ಬಯಸುವ ಭೃತ್ಯನು ಆಪತ್ಕಾಲ ದಲ್ಲಿಯೂ, ದಾರಿತಪ್ಪಿ ನಡೆಯುವಾಗಲೂ, ಕಾರ್ಯದ ಸಮಯವು ಮೀರು ವಾಗಲೂ, ಅರಸನು ಪ್ರಶ್ನೆಮಾಡದಿದ್ದರೂ, ಹೇಳಲೇ ಬೇಕು. ಒಂದು ವೇಳೆ ಅಂತಹ ಸಮಯದಲ್ಲಿಯೂ ನನ್ನ ಸಲಹೆಯು ರಾಜನ ಕಿವಿಗೆ ತೂರದಿದ್ದಲ್ಲಿ ನನಗೆ ಈ ಮಂತ್ರಿಪದವಿಯೇ ಬೇಡ. ಏಕೆಂದರೆ, ಜೀವನೋಪಾಯಕ್ಕೂ, ಜನಗಳ ಹೊಗಳಿಕೆಗೂ ಪಾತ್ರವಾಗುವಂತಹ ಗುಣವನ್ನೇ ವೃದ್ಧಿಪಡಿಸಿ ಕೊಳ್ಳಬೇಕು. ಇನ್ನು ನಾನು ಹೊರಡುವೆನು. ನನಗೆ ಅನುಜ್ಞೆಕೊಡು."

ಕರಟಕ—"ನಿನಗೆ ಮಂಗಳವಾಗಲಿ! ನಿನ್ನ ಹಾದಿಯು ಶುಭಕರವಾ ಗಿರಲಿ! ನಿನ್ನ ಇಷ್ಟದಂತೆಯೇ ಮಾಡು."

ತರುವಾಯ ದಮನಕನು ಪಿಂಗಳಕನ ಬಳಿಸಾರ್ದು, ಅಚ್ಚರಿಗೊಂಡವ ನಂತೆ ನಿಂತನು. ಪಿಂಗಳಕನು ಇವನನ್ನು ದೂರದಿಂದಲೇ ಅಕ್ಕರೆಯಿಂದ ಬರಮಾಡಿಕೊಂಡನು. ಇದರಿಂದ ದಮನಕನು ಸಂತಸಗೊಂಡು ಸಾಷ್ಟಾಂಗ ವೆರಗಿ ಕುಳಿತನು. ಆಗ ಮೃಗರಾಜನು ಈ ರೀತಿ ಪ್ರಶ್ನೆಮಾಡಿದನು:— "ಏನಿದು? ನಾನು ನಿನ್ನನ್ನು ನೋಡಿ ಎಷ್ಟು ದಿನಗಳಾದುವು?" ಆ ಮಾತಿಗೆ ದಮನಕನು—"ಶ್ರೀಮಂತರೆನಿಸಿದ ಮಹಾ ಪ್ರಭುಗಳಿಗೆ ನನ್ನಿಂದ ತುಸ ವಾದರೂ ಪ್ರಯೋಜನವಿಲ್ಲದಿದ್ದರೂ ಸಮಯ ಬಂದಾಗ ಮಾತ್ರ ಪ್ರಭು ಸಮೀಪದಲ್ಲಿರಬೇಕಾದುದು ಸೇವಕನ ಕರ್ತವ್ಯವಾದುದರಿಂದ ಬಂದೆನು. ಏಕೆಂದರೆ, ತಮ್ಮ ಅರಸನ ಸಲುವಾಗಿ ರಣರಂಗದಲ್ಲಿ ಹರಿತವಾದ ಕೈದುಗಳ ಇರಿತದಿಂದ ಬಿರಿದ ಆನೆಗಳ ಕುಂಭಸ್ಥಳದ ರಕ್ತದಿಂದ ತೊಯ್ದ ಭೂಮಿ ಯನ್ನು ಗೆದ್ದು, ತಮ್ಮ ಅರಸನಿಗೆ ಸಮರ್ಪಿಸಿದ ಶೂರಶಿಖಾಮಣಿಗಳು, ರಾಜನ ಬಳಿಗೆ ಬಂದಾಗ ಅಂಜಿ, ಗಾಬರಿಯಿಂದ ತೊದಲು ಮಾತನಾಡು ವುದು ಸಹಜ. ಅರಸನ ಬಳಿಯಲ್ಲಿಯೂ, ಪಂಡಿತರ ನಡುವೆಯೂ, ತರುಣಿಯರಲ್ಲಿಯೂ, ಎಂತಹ ಜಾಣನಾದರೂ ತೊದಲುವುದುಂಟು. ಈಗ ಇಲ್ಲಿಯೂ ಒಂದು ಪ್ರಯೋಜನವಿರುವುದು."

“ಹಲ್ಲು ಉಜ್ಜಿಕೊಳ್ಳುವುದಕ್ಕೋ, ಇಲ್ಲವೆ ಕಿವಿಯನ್ನು ಕೆರೆದುಕೊಳ್ಳುವುದಕ್ಕೋ, ಒಂದು ಹುಲ್ಲುಕಡ್ಡಿಯು ಅರಸರಿಗಾದರೂ ಪ್ರಯೋಜನಕ್ಕೆ ಬರುವುದಷ್ಟೆ! ಇಂತಿರುವಲ್ಲಿ, ಮಾತನಾಡುವ ಸಾಮರ್ಥ್ಯವನ್ನು ಪಡೆದು, ವಿವೇಕಿಯೆನಿಸಿದ ಮನುಷ್ಯನು ಉಪಯೋಗಕ್ಕೆ ಬಾರನೇ?”

“ಪ್ರಭುಗಳವರು ಬಹುಕಾಲದ ಹಿಂದೆಯೇ ನನ್ನನ್ನು ಉದ್ಯೋಗದಿಂದ ತೊಲಗಿಸಿದ ಕಾರಣ ಅಂದು ಆ ಅಧಿಕಾರದೊಂದಿಗೇ ನನ್ನ ಬುದ್ಧಿಕೌಶಲ್ಯವೂ ತೊಲಗಿತೆಂದು ಭಾವಿಸಿರುವಂತಿದೆ. ಹಾಗೆ ತಿಳಿಯಲು ಅವಕಾಶವಿಲ್ಲ. ಏಕೆಂದರೆ, ಗುಣವಂತನ ಗುಣಸಂಪತ್ತಿಯು ಎಂದಿಗಾದರೊಂದು ದಿನ ತಾನಾಗಿಯೇ ಹೊರಬೀಳದೆ ಇರುವುದಿಲ್ಲ. ಕಸ್ತೂರಿಯನ್ನು ಬಟ್ಟೆಯಲ್ಲಿ ಕಟ್ಟಿಟ್ಟು, ಪರಿಮಳವು ಬರಬಾರದೆಂಬದಾಗಿ ಆಣೆ ಇಟ್ಟರೆ ನಿಲ್ಲುವುದೇ? ರತ್ನವು ಕಾಡಿನಲ್ಲಿ ಹೊರಳಾಡುತ್ತಿರಬಹುದು. ಅದಕ್ಕೆ ಬದಲಾಗಿ ಗಾಜಿನ ಚೂರನ್ನು ತಲೆಯ ಮೇಲೆ ಧರಿಸಲೂ ಬಹುದು. ಆದರೆ ಕ್ರಯವಿಕ್ರಯಗಳಲ್ಲಿ ಮಾತ್ರ ಗಾಜು ಗಾಜೇ, ರತ್ನವು ರತ್ನವೇ.”

“ಧೀರನನ್ನು ಅಲ್ಲಗಳೆದರೂ ಅವನ ತೀಕ್ಷ್ಣತೆಯು ಮಾತ್ರ ಎಂದಿಗೂ ಕಡಿಮೆಯಾಗುವುದಿಲ್ಲ. ಬೆಂಕಿಯನ್ನು ಗುಣಿಯಲ್ಲಿಟ್ಟರೂ ಉರಿಯು ಮೇಲ್ಗಡೆಗೇ ಬರುವುದಲ್ಲದೆ ಅದರ ಜ್ವಾಲೆಯು ಕೆಳಗಡೆಗೆ ಹೋಗುವುದಿಲ್ಲವಷ್ಟೇ!”

“ಮಹಾಪ್ರಭೋ! ಭೃತ್ಯರ ತಾರತಮ್ಯವನ್ನು ಚೆನ್ನಾಗಿ ಅರಿತವನೇ ರಾಜನೆನಿಸತಕ್ಕವನು. ಪ್ರಭುಗಳು ತಾರತಮ್ಯವನ್ನರಿಯದೆ, ಎಲ್ಲರನ್ನೂ ಒಂದೇ ವಿಧವಾಗಿ ನೋಡಿದರೆ, ಪ್ರಯತ್ನಶೀಲರೂ ಸಮರ್ಥರೂ ಎನಿಸಿದ ಭೃತ್ಯರ ಉತ್ಸಾಹವು ಭಗ್ನವಾಗುವುದು. ಸೇವಕರಲ್ಲಿಯೂ ಉತ್ತಮರು, ಮಧ್ಯಮರು, ಅಧಮರು ಎಂಬುದಾಗಿ ಮೂರು ಬಗೆಯುಂಟು. ಅವರವರ ಯೋಗ್ಯತೆಯನ್ನರಿತು ತಕ್ಕ ಕೆಲಸಗಳಲ್ಲಿ ನಿಯಮಿಸುವುದು ಅರಸನ ಕರ್ತವ್ಯ. ಏಕೆಂದರೆ, ಸೇವಕರನ್ನೂ ಆಭರಣಗಳನ್ನೂ ತಕ್ಕ ಸ್ಥಾನದಲ್ಲಿಯೇ ಇರಿಸಬೇಕು. ಚೂಡಾಮಣಿಯನ್ನು ಕಾಲಿನಲ್ಲಿಯೂ, ಕಾಲ್ಕಡಗವನ್ನು ತಲೆಯಲ್ಲಿಯೂ ಧರಿಸಿದರೆ ಶೋಭಿಸುವುದಿಲ್ಲವಷ್ಟೆ!”

“ಚಿನ್ನದ ಒಡವೆಯಲ್ಲಿ ಇರಿಸುವುದಕ್ಕೆ ಯೋಗ್ಯವಾದ ರತ್ನವನ್ನು ಸೀಸದಲ್ಲಿ ಕಟ್ಟಿದರೆ ಆ ರತ್ನವು ಅಳುವುದಿಲ್ಲ; ಅದರ ಸಹಜವಾದ ಕಾಂತಿಯೂ

ಕಡಿಮೆಯಾಗುವುದಿಲ್ಲ. ಆದರೆ ಹಾಗೆ ಎರಡನ್ನೂ ಕೂಡಿಸಿದವನು ಮಾತ್ರ ಜನಗಳ ನಿಂದೆಗೆ ಗುರಿಯಾಗದಿರನು. ಗಾಜಿನ ಚೂರನ್ನು ಕಿರೀಟದಲ್ಲಿ ಸೇರಿಸಿದರೂ ರತ್ನವನ್ನು ಕಾಲಂದುಗೆಯಲ್ಲಿ ಹೊಂದಿಸಿದರೂ ರತ್ನಕ್ಕೆ ಯಾವ ಕೊರತೆಯೂ ಇಲ್ಲ. ಆದರೆ ವರ್ತಕನ ಹೆಡ್ಡತನವು ಮಾತ್ರ, ಹೊರಬೀಳದಿರದು. 'ಇವನು ಬುದ್ಧಿವಂತನು. ಇವನಲ್ಲಿ ಸ್ವಾಮಿಭಕ್ತಿಯು ತುಂಬಿರುವುದು. ಇವನು ಶೂರನು. ಇವನಿಂದ ಆಪತ್ತು ಬರಬಹುದು' ಎಂಬ ಈ ಬಗೆಯ ತಾರತಮ್ಯವನ್ನು ಚೆನ್ನಾಗಿ ಅರಿತ ಅರಸನ ಸುತ್ತಲೂ ಯಾವಾಗಲೂ ಭೃತ್ಯರು ಮುತ್ತಿಕೊಂಡಿರುವರು."

"ಕುದುರೆ, ಆಯುಧ, ವಿದ್ಯೆ, ವೀಣೆ, ಮಾತು, ಆಳು, ಹೆಣ್ಣು—ಇವು ತಾವು ಸೇರುವ ಮನುಷ್ಯನ ಯೋಗ್ಯತೆಯನ್ನು ಹಿಡಿದು ಶ್ಲಾಘನೆಯನ್ನೋ ನಿಂದೆಯನ್ನೋ ಪಡೆಯುವುವು. ಇನ್ನೂ ಲಾಲಿಸಬೇಕು. ಸಾಮರ್ಥ್ಯವಿಲ್ಲದ ಭೃತ್ಯನು ಸ್ವಾಮಿಭಕ್ತನಾಗಿದ್ದುದರಿಂದ ಫಲವಿಲ್ಲ. ಅಪಕಾರಿಯಾದ ಸೇವಕನು ಸಮರ್ಥನಾಗಿದ್ದರೆ ಮಾತ್ರ ಭಾಗ್ಯವೇನು? ಅರಸನೆ! ಅದರಿಂದ ಸಮರ್ಥನೂ ಸ್ವಾಮಿಭಕ್ತಿಸಂಪನ್ನನೂ ಎನಿಸಿದ ನನ್ನನ್ನು ತಿರಸ್ಕರಿಸಿರುವುದು ನಿನಗೆ ತರವಲ್ಲ. ಏಕೆಂದರೆ, ಅರಸನು ಅಲ್ಲಗಳೆದರೆ ಭೃತ್ಯನ ಬುದ್ಧಿಯು ಶೂನ್ಯವಾಗುವುದು. ಅದನ್ನೇ ನಿದರ್ಶನವಾಗಿಟ್ಟುಕೊಂಡು ಸಂಭಾವಿತರಾದವರು ಅಂತಹ ರಾಜನ ಹತ್ತಿರ ಸೇರಲೊಲ್ಲರು. ಈ ರೀತಿ ಸಂಪನ್ನರಾದ ಸೇವಕರು ದೂರ ಸರಿದರೆ ದೊರೆತನದಲ್ಲಿ ನೀತಿಯ ಬಿಗಿಯು ಸಡಿಲವಾಗುವುದು. ನೀತಿ ತಪ್ಪಿದರೆ ಲೋಕವೆಲ್ಲ ಹದ್ದುಮೀರಿ ಇದಿರು ನಿಲ್ಲುವುದು. ಅರಸನ ಮನ್ನಣೆಗೆ ಪಾತ್ರನಾದವನನ್ನು ಲೋಕವೆಲ್ಲ ಮನ್ನಿಸುವುದು. ರಾಜನು ಒಬ್ಬನನ್ನು ತಿರಸ್ಕರಿಸಿದನೆಂದರೆ ಲೋಕವೆಲ್ಲ ಅವನನ್ನು ಹೀಯಾಳಿಸುವುದು. ಯುಕ್ತಿಯಿಂದ ಕೂಡಿದ ಮಾತು ಹುಡುಗನ ಬಾಯಿಂದಲೇ ಬಂದರೂ, ಆ ಮಾತನ್ನು ವಿದ್ಯಾವಂತರು ಪರಿಗ್ರಹಿಸಲೇ ಬೇಕು. ಸೂರ್ಯನಿಲ್ಲದಿರುವಾಗ ದೀಪವು ಬೆಳಗುವುದಿಲ್ಲವೇ?"

ಪಿಂಗಳಕ—"ಭದ್ರ ದಮನಕ! ನೀನು ನಮ್ಮ ಪ್ರಧಾನಮಂತ್ರಿಯ ಮಗನು. ಇದು ವರೆಗೆ ಚಾಡಿಕೋರರ ಮಾತುಗಳನ್ನು ಕೇಳಿ ನೀನಾಗಿಯೇ ಬಾರದೆ ನಿಂತೆ. ಈಗ ನಿನ್ನ ಇಷ್ಟವಾದರೂ ಏನು? ಏತಕ್ಕೆ ಬಂದೆ? ಹೇಳಬಾರದೇ?"

ದಮನಕ—“ಪ್ರಭುವೇ! ಒಂದೇ ಒಂದು ಮಾತನ್ನು ಕೇಳುವೆನು. ಸಮರ್ಪಕವಾದ ಉತ್ತರವನ್ನು ದಯೆಪಾಲಿಸಬೇಕು. ಆಳಿದ ಸ್ವಾಮಿಯವರು ನೀರಡಿಕೆಯಿಂದ ಬಳಲಿದ್ದರೂ ನೀರು ಕುಡಿಯದೆ, ಬೆಚ್ಚುಬಿದ್ದು ಹಿಂದಿರುಗಿ ಚಿಂತಾಕ್ರಾಂತರಾಗಿ, ಈ ರೀತಿ ಕುಳಿತಿರಲು ಕಾರಣವೇನು? ಇದರ ವಿವರವನ್ನು ಅಪ್ಪಣೆಕೊಡಿಸಬೇಕು.”

ಪಿಂಗಳಕ—“ಭಲೆ! ಒಳ್ಳೆಯ ಪ್ರಶ್ನೆಯನ್ನೇ ಮಾಡಿದೆ! ಇದೊಂದು ರಹಸ್ಯ. ಹೇಳುವುದಕ್ಕೆ ಭರವಸೆಯುಳ್ಳವರೇ ದೊರೆಯಲಿಲ್ಲ. ಈಗ ನಿನಗೆ ರಹಸ್ಯವಾಗಿ ತಿಳಿಸುವೆನು. ಈಗ ಈ ನಮ್ಮ ಅರಣ್ಯದಲ್ಲಿ ಯಾವುದೋ ಒಂದು ಅಪೂರ್ವವಾದ ದೊಡ್ಡ ಪ್ರಾಣಿಯು ಸೇರಿಕೊಂಡಿದೆ. ಆ ಕಾರಣದಿಂದ ಆದಷ್ಟು ಬೇಗನೆ ನಾವು ಈ ಅಡವಿಯನ್ನು ಬಿಟ್ಟುಹೋಗಬೇಕು. ಇದರಿಂದಲೇ ಹಿಂದುಮುಂದು ತೋರದೆ ಬೆಪ್ಪನಾಗಿರುವೆನು. ಅದಕ್ಕೆ ಅನುಸಾರವಾಗಿ ಇಂದು ನಾನು ಭಯಂಕರವಾದ ಒಂದು ದೊಡ್ಡ ಶಬ್ದವನ್ನೂ ಕೇಳಿದೆನು. ಆ ಧ್ವನಿಯನ್ನು ಯೋಚಿಸಿದರೆ ಅದಾವುದೋ ಮಹಾ ಬಲಿಷ್ಠವಾದ ಪ್ರಾಣಿಯಾಗಿರಬಹುದೆಂಬುದಾಗಿ ತೋರುವುದು.”

ದಮನಕ—“ದೇವಾ! ನಾವೂ ಭಯಂಕರವಾದ ಆ ಗರ್ಜನೆಯನ್ನು ಕೇಳಿದೆವು. ಆದರೆ ಮೊದಲು ದೇಶತ್ಯಾಗಮಾಡಿ, ಅನಂತರ ಯುದ್ಧಮಾಡಬೇಕೆಂಬುದಾಗಿ ಸಲಹೆ ಕೊಡುವವನೂ ಒಬ್ಬ ಮಂತ್ರಿಯೇ? ಈ ಸಂದರ್ಭದಲ್ಲಿ ತಾವು, ಸೇವಕರಾದ ನಮ್ಮ ಪ್ರಯೋಜನವನ್ನು ಅರಿಯಬಹುದು. ಮನುಷ್ಯನು, ಬಂಧು, ಬಳಗ, ಮಡದಿ, ಆಳು, ಬುದ್ಧಿಚಾತುರ್ಯ, ಇವುಗಳನ್ನು ಪರೀಕ್ಷಿಸಬೇಕಾದರೆ, ಇಕ್ಕಟ್ಟಿಗಿಂತಲೂ ಬೇರೊಂದು ಒರೆಗಲ್ಲಿಲ್ಲ. ಅಂತೆಯೇ ನಮ್ಮ ಯೋಗ್ಯತೆಯನ್ನು ಪರೀಕ್ಷಿಸಬೇಕಾದರೂ ಇದೀಗ ತಕ್ಕ ಸಮಯ.”

ಪಿಂಗಳಕ-“ಮಂಗಳಕರನೆ! ನನಗೊಂದು ದೊಡ್ಡ ಸಂದೇಹವುಂಟು.”

ದಮನಕ (ತನ್ನ ಮನಸ್ಸಿನಲ್ಲಿ)—ಹಾಗಲ್ಲದಿದ್ದರೆ ರಾಜ್ಯಸುಖವನ್ನು ಸೂರೆಗೊಟ್ಟು ದೇಶಾಂತರಕ್ಕೆ ಓಡಿಹೋಗಬೇಕೆಂಬುದಾಗಿ ನನ್ನೊಂದಿಗೆ ಪ್ರಸ್ತಾವಿಸುತ್ತಿರಲಿಲ್ಲ. (ಪ್ರಕಾಶವಾಗಿ) “ದೇವಾ! ನಾನು ಜೀವದಿಂದ ಇರುವ ವರೆಗೂ ಹೆದರ ಕೆಲಸವಿಲ್ಲ. ಆದರೂ ಕರಟಕ ಮುಂತಾದವರನ್ನೂ

ಈಗಲೇ ಸೇರಿಸಿಕೊಳ್ಳಬೇಕು. ಏಕೆಂದರೆ, ಕಷ್ಟಬಂದಾಗ ಪ್ರತೀಕಾರ ಮಾಡುವುದಕ್ಕೆ ತಕ್ಕ ಸಿಬ್ಬಂದಿಯು ದೊರೆಯುವುದು ಅಸಾಧ್ಯವಲ್ಲವೇ?''

ಈ ಮಾತನ್ನು ಕೇಳಿ ಪಿಂಗಳಕನು ಒಡನೆಯೇ ಕರಟಕನನ್ನೂ ಬರಮಾಡಿಸಿ, ಅವರಿಬ್ಬರನ್ನೂ ಮನ್ನಿಸಿ, ಅಕ್ಕರೆಯಿಂದ ಬೀಳ್ಕೊಟ್ಟನು. ಕೂಡಲೇ ಕರಟಕ ದಮನಕರಿಬ್ಬರೂ ಅರಸನ ಮನ್ನಣೆಗೆ ತಕ್ಕಂತೆ ವಿನಯದಿಂದ ರಾಜನ ಹೆದರಿಕೆಗೆ ಪ್ರತೀಕಾರಮಾಡುವುದಾಗಿ ಪ್ರತಿಜ್ಞೆಮಾಡಿ, ಅಲ್ಲಿಂದ ಹೊರಟರು. ದಾರಿಯಲ್ಲಿ ಕರಟಕನು ದಮನಕನನ್ನು ಕುರಿತು—''ಮಿತ್ರನೇ! ಈ ಅಂಜಿಕೆಗೆ ತಕ್ಕ ಪ್ರತೀಕಾರವನ್ನು ಮಾಡಬಲ್ಲೆವೋ ಮಾಡಲಾರೆವೋ, ಯಾವುದೊಂದನ್ನೂ ಯೋಚಿಸದೆ 'ನಿನ್ನ ಹೆದರಿಕೆಯನ್ನು ಅಣಗಿಸುವೆವು' ಎಂಬುದಾಗಿ ಶಪಥಮಾಡಿ ಇಷ್ಟೊಂದು ಬಹುಮಾನಗಳನ್ನೆಲ್ಲ ಸ್ವೀಕರಿಸಿದೆವಲ್ಲಾ! ಏಕೆಂದರೆ, ಉಪಕಾರ ಮಾಡಲಾಗದವನು ಯಾರಿಂದಲೂ ಬಹುಮತಿಯನ್ನು ಕೈಕೊಳ್ಳುವುದು ಯುಕ್ತವಲ್ಲ. ಮುಖ್ಯವಾಗಿ ಅರಸನಿಂದ ತೆಗೆದುಕೊಳ್ಳಲೇ ಬಾರದು. ಇತ್ತ ನೋಡು! ರಾಜನೆಂದರೆ ಸಾಮಾನ್ಯ ಮನುಷ್ಯನಂತಲ್ಲ. ಅರಸನ ಅನುಗ್ರಹದಲ್ಲಿ ಲಕ್ಷ್ಮಿಯು ವಾಸವಾಗಿರುವಳು. ಪರಾಕ್ರಮದಲ್ಲಿ ವಿಜಯವು ನೆಲೆಗೊಂಡಿರುವುದು. ಸಿಟ್ಟಿನಲ್ಲಿ ಮೃತ್ಯುವು ಅಡಗಿರುವನು. ಇಂತಹ ದೊರೆಯು ಸರ್ವಸ್ವರೂಪಿಯೆನಿಸಿದ ಪರಮಾತ್ಮನೇ ಅಲ್ಲವೇ? ಅರಸನು ಹುಡುಗನೇ ಆಗಿದ್ದರೂ 'ನಮ್ಮಂತೆಯೇ ಅವನೂ ಒಬ್ಬ ಮನುಷ್ಯನು' ಎಂಬುದಾಗಿ ತಿರಸ್ಕರಿಸಬಾರದು. ಅವನು ಮನುಷ್ಯರೂಪದಿಂದ ಅವತರಿಸಿದ ದೇವರಲ್ಲವೇ!'' ಎಂಬುದಾಗಿ ಹೇಳಿದನು.

ಇದಕ್ಕೆ ದಮನಕನು ನಕ್ಕು ಇಂತೆಂದನು-''ಮಿತ್ರನೆ! ಸಾಕು. ಸುಮ್ಮನಿರು. ನಮ್ಮ ಅರಸನ ಹೆದರಿಕೆಗೆ ಎತ್ತಿನ ಗುಟುರು ಕಾರಣವೆಂಬುದನ್ನು ನಾನು ಆಗಲೇ ತಿಳಿದೆನು. ವೃಷಭವು ನಮ್ಮ ಆಹಾರವಷ್ಟೆ! ಇನ್ನು ಸಿಂಹಕ್ಕೆ ಹೇಳಬೇಕೇ?'' ''ಹಾಗಾದರೆ ಈ ವಿಷಯವನ್ನು ಆಗಲೇ ಅರಸನ ಸನ್ನಿಧಿಯಲ್ಲಿ ಪ್ರಕಾಶಪಡಿಸಬಾರದಾಗಿದ್ದಿತೇ?'' ಎಂಬುದಾಗಿ ಕರಟಕನು ಕೇಳಲಾಗಿ, ದಮನಕನು ''ಒಳ್ಳೆಯ ಮಾತನ್ನೇ ಹೇಳಿದೆ! ನಮ್ಮ ರಾಜನ ಹೆದರಿಕೆಯನ್ನು ನಾವು ಅಲ್ಲಿಯೇ ಆಗಲೇ ನಿರ್ಮೂಲಮಾಡಿದ್ದರೆ ಇಷ್ಟೊಂದು ಬಹುಮಾನವು ದೊರೆಯುವುದಾದರೂ ಹೇಗೆ? ಭೃತ್ಯನು ಯಾವಾಗಲೂ

ತನ್ನಿಂದ ಪ್ರಭುವಿಗೆ ಕೆಲಸವಿಲ್ಲದ ಹಾಗೆ ಮಾಡಿಕೊಳ್ಳಬಾರದು. ಸ್ವಾಮಿಯ ಅಕ್ಕರೆಯನ್ನು ತೀರಿಸಿದ ಸೇವಕನು ದಧಿಕರ್ಣನ ಗತಿಯನ್ನೇ ಪಡೆಯಬೇಕಾದೀತು'' ಎಂಬುದಾಗಿ ಪ್ರತ್ಯುತ್ತರ ಹೇಳಿದನು. ಆ ಕಥೆಯನ್ನು ತಿಳಿಸುವಂತೆ ಕರಟಕನು ಕೇಳಲಾಗಿ ದಮನಕನು ಈ ರೀತಿ ಹೇಳತೊಡಗಿದನು.

## ೩ನೆಯ ಕಥೆ

"ಉತ್ತರ ದಿಕ್ಕಿನಲ್ಲಿ ಅರ್ಬುದಶಿಖರವೆಂಬ ಬೆಟ್ಟದ ಕಿಬ್ಬಿಯಲ್ಲಿ ಒಂದು ಸಿಂಹವು ವಾಸವಾಗಿದ್ದಿತು. ಅದು ಗವಿಯಲ್ಲಿ ಮಲಗಿ ನಿದ್ದೆಮಾಡುವಾಗ ಅದರ ಕೇಸರಗಳ ತುದಿಯನ್ನು ಒಂದು ಇಲಿಯು ಕಡಿಯುತ್ತಿದ್ದಿತು. ಮೊಂಡಾದ ಕೇಸರಗಳನ್ನು ನೋಡಿ ಸಿಟ್ಟುಗೊಂಡ ಸಿಂಗವು ಸುತ್ತಲೂ ನೋಡಲಾಗಿ ಒಂದು ಇಲಿಯು ಕಾಣಿಸಿತು. ಅದನ್ನು ಹಿಡಿಯುವ ಸಲುವಾಗಿ ತನ್ನ ಪಂಜನ್ನು ಚಾಚಿ ಅಪ್ಪಳಿಸುವಷ್ಟರೊಳಗೆ ಇಲಿಯು ಒಂದು ಬಿಲವನ್ನು ತೂರಿತು. ಆಗ ಸಿಂಹವು ಈ ರೀತಿ ಚಿಂತಿಸತೊಡಗಿತು–"ಪರಾಕ್ರಮದಿಂದ ಗೆಲ್ಲುವುದಕ್ಕೆ ಸಾಧ್ಯನಾಗದ ಕ್ಷುದ್ರ ಶತ್ರುವನ್ನು ಕೊಲ್ಲುವುದಕ್ಕೆ ಆ ಹುಲುಹಗೆಗೆ ತಕ್ಕ ಒಬ್ಬ ಬಂಟನನ್ನೇ ನಿಯಮಿಸಬೇಕು''. ಹೀಗೆ ಯೋಚಿಸಿ ಒಂದು ಪಟ್ಟಣವನ್ನು ಹೊಕ್ಕು ದಧಿಕರ್ಣನೆಂಬ ಮಾರ್ಜಾಲವನ್ನು ಹಿಡಿತಂದು ಮಾಂಸದ ತುಂಡುಗಳನ್ನು ಅದಕ್ಕೆ ಆಹಾರವಿಕ್ಕಿ, ಅಕ್ಕರೆಯಿಂದ ಕಾಪಾಡುತ್ತಿದ್ದಿತು. ಅಂದುಮೊದಲು ಆ ಬೆಕ್ಕಿನ ಭಯದಿಂದ ಇಲಿಯು ಹೊರಗಡೆ ಸುಳಿಯುತ್ತಿರಲಿಲ್ಲ. ಈ ಮೂಲಕ ಸಿಂಹವು ಸುಖವಾಗಿ ನಿದ್ರಿಸುತಿದ್ದಿತು. ಇಂತಿರಲು ಒಂದು ದಿನ ಆ ಮೂಷಿಕವು ಹೊರಗೆ ಬಂದಿತು. ಕೂಡಲೆ ಮಾರ್ಜಾಲವು ಅದನ್ನು ಹಿಡಿದು ಕೊಂದು ತಿಂದಿತು. ತರುವಾಯ ಬಹಳ ದಿನಗಳವರೆಗೆ ಇಲಿಯು ಸುಳಿಯದಿರುವುದನ್ನು ಕಂಡು, ಆ ಮೃಗರಾಜನು "ಇನ್ನು ಈ ಬಿಡಾಲದಿಂದ ಉಪಯೋಗವಿಲ್ಲ'' ಎಂಬುದಾಗಿ ನಿಶ್ಚಯಿಸಿ ಅದಕ್ಕೆ ಮೇವು ಕೊಡುವುದರಲ್ಲಿ ಅಸಡ್ಡೆಮಾಡಿತು. ಆ ಕಾರಣ "ಭೃತ್ಯನು ಯಾವಾಗಲೂ ತನ್ನಿಂದ ಪ್ರಭುವಿಗೆ ಕೆಲಸವಿಲ್ಲದ ಹಾಗೆ ಮಾಡಿಕೊಳ್ಳಬಾರದು ಎಂಬುದಾಗಿ ಹೇಳಿದೆನು'' ಎಂದಿತು.

ಬಳಿಕ ಕರಟಕ ದಮನಕರಿಬ್ಬರೂ ಸಂಜೀವಕನಲ್ಲಿಗೆ ಹೋದರು. ಅಲ್ಲಿ ಕರಟಕನು ಒಂದು ಮರದ ಅಡಿಯಲ್ಲಿ ಠೀವಿಯಿಂದ ಗಂಭೀರವಾಗಿ

ಕುಳಿತುಕೊಂಡನು. ದಮನಕನು ಸಂಜೀವಕನ ಬಳಿಸಾರ್ದು—"ಎಲೋ ನೀಚ ವೃಷಭನೆ! ಅಗೋ ಅಲ್ಲಿ ನೋಡು. ಆತನು ಈ ಅರಣ್ಯಕ್ಕೆ ಅರಸನಾದ ಪಿಂಗಳಕನೆಂಬ ಮೃಗರಾಜನ ಸೇನಾಪತಿಯಾದ ಕರಟಕನು. ನಿನ್ನನ್ನು ತನ್ನ ಬಳಿಗೆ ಬರ ಹೇಳಿರುವನು. ಬೇಗನೆ ಬಾ. ಇಲ್ಲವಾದರೆ ಈ ಅಡವಿಯುನ್ನು ಬಿಟ್ಟು ತೊಲಗು. ಹಾಗೆ ಎರಡಕ್ಕೂ ಸಮ್ಮತಿಸದಿದ್ದರೆ ನಿನಗೆ ಕೇಡು ತಪ್ಪಿದುದೇ ಅಲ್ಲ. ಸಿಟ್ಟು ತಲೆಗೇರಿತೆಂದರೆ ನಮ್ಮ ಅರಸನು ಏನು ಮಾಡುವನೋ ತಿಳಿಯದು ಎಂಬುದಾಗಿ ನಮ್ಮ ಸೇನಾಪತಿಯು ನನ್ನ ಮೂಲಕ ಆಣತಿಯಿತ್ತಿರುವನು" ಎಂದನು. ಆಗ ಸಂಜೀವಕನು ಅಲ್ಲಿನ ವ್ಯವಹಾರವನ್ನು ಅರಿಯದ ಕಾರಣ ಬೇಗನೆ ಬಂದು ಕರಟಕನಿಗೆ ಅಡ್ಡ ಬಿದ್ದನು. ಅಂತೆಯೇ ಸರಿ. ಆನೆಯ ಮೇಲೆ ಕುಳಿತು ಮಾವುತನು ನಗಾರಿಯನ್ನು ಬಾಜಿಸುತ್ತಿರುವುದನ್ನು ನೋಡಿದರೆ, ಬಲಕ್ಕಿಂತಲೂ ಬುದ್ಧಿಯೇ ಶ್ರೇಷ್ಠವೆಂಬುದಾಗಿ ತೋರುತ್ತದೆ. ಇಲ್ಲವಾದರೆ, ಮಹಾ ಬಲಿಷ್ಠವಾದ ಆನೆಗೆ ಇಂತಹ ಗತಿಯು ಬರಬೇಕೇ?

ಬಳಿಕ ಸಂಜೀವಕನು ಹೆದರಿಕೆಯಿಂದ ಕರಟಕನ ಬಳಿ ನಿಂತು, "ಸೇನಾಪತಿಯೇ! ಅಪ್ಪಣೆಯಾಗಲಿ! ನನ್ನ ಕರ್ತವ್ಯವಾದರೂ ಏನು?" ಎಂಬುದಾಗಿ ಕೇಳಿದನು. "ಎಲೋ ವೃಷಭನೆ! ನಿನಗೆ ಇಲ್ಲಿಯೇ ಇರಬೇಕೆಂಬ ಇಚ್ಛೆ ಇದ್ದರೆ ಬೇಗನೆ ನಡೆ. ನಮ್ಮ ಅರಸನನ್ನು ಮರೆ ಹೊಕ್ಕು, ಆತನ ಕಾಲಿಗೆ ಅಡ್ಡಬೀಳು. ಇಲ್ಲವಾದರೆ, ಈಗಲೇ ಇಲ್ಲಿಂದ ತೊಲಗು" ಎಂಬುದಾಗಿ ಹೇಳಿದ ಕರಟಕನ ಮಾತನ್ನು ಕೇಳಿ ಸಂಜೀವಕನು "ದಯೆ ಮಾಡಿ ನನಗೆ ಅಭಯವನ್ನು ಕೊಡು. ಇದೋ ಬರುತ್ತಿರುವೆನು" ಎಂದನು. ಆಗ ಕರಟಕನು "ಎಲೋ! ಇತ್ತ ಕೇಳು. ಹೆದರಬೇಡ. ನಮ್ಮ ರಾಜನು ನಿನ್ನಂತಹ ಬಡ ಜಂತುಗಳ ಮೇಲೆ ಕಯ್ಮಾಡತಕ್ಕವನಲ್ಲ. ಚೇದಿರಾಜನಾದ ಶಿಶುಪಾಲನು ಬಾಯಿಗೆ ಬಂದಂತೆ ಬಯ್ಯುತ್ತಿದ್ದರೂ ಶ್ರೀಕೃಷ್ಣನು ಮಾತನಾಡಿದನೇ? ಸಿಂಹವು ಗುಡುಗಿನ ದನಿಯನ್ನು ಕೇಳಿ ಗರ್ಜಿಸುವುದೇ ಹೊರತು, ನರಿಯ ಕೂಗಿಗೆ ಆರ್ಭಟಿಸುವುದೇ? ಗಾಳಿಯು ಎತ್ತರವಾಗಿ ಬೆಳೆದಿರುವ ಮರಗಳನ್ನು ಮುರಿದು ಬುಡಮುಟ್ಟ ಕೀಳುವುದೇ ಹೊರತು, ಸಂಪೂರ್ಣವಾಗಿ ನೆಲದ ವರೆಗೂ ಬಾಗಿರುವ ಹುಲ್ಲನ್ನು ನಿರ್ಮೂಲಗೊಳಿ

ಸುವುದಿಲ್ಲ ಕಂಡೆಯಾ? ಅಂತೆಯೇ, ದೊಡ್ಡವರು ದೊಡ್ಡವರ ಮೇಲೆಯೇ ತಮ್ಮ ಪರಾಕ್ರಮವನ್ನು ತೋರುವರು" ಎಂಬುದಾಗಿ ಧೈರ್ಯ ಹೇಳಿದನು.

ತರುವಾಯ ಆ ನರಿಗಳೆರಡು ಸಂಜೀವಕನೊಡನೆ ನಡೆತಂದು, ಸಂಜೀವಕನನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿ, ಪಿಂಗಳಕನಲ್ಲಿಗೆ ಬಂದು, ನಮಸ್ಕರಿಸಿ ಕುಳಿತುಕೊಂಡುವು. ಆಗ ಪಿಂಗಳಕನು ದಮನಕನನ್ನು ಕುರಿತು—"ನೀನು ಆ ಜಂತುವನ್ನು ನೋಡಿದೆಯಾ?'' ಎಂದನು. ಅದಕ್ಕೆ ದಮನಕನು "ಸ್ವಾಮಿಾ! ನೋಡಿದೆನು, ಅದನ್ನು ವಿನೀತನನ್ನಾಗಿಯೂ ಮಾಡಿರುವೆನು. ಆದರೆ ಅದು ಸಾಮಾನ್ಯ ಪ್ರಾಣಿಯಲ್ಲ. ತಾವು ಊಹಿಸಿದಂತೆ ಮಹಾ ಬಲಿಷ್ಠವಾದ ಜಂತುವೇ ಸರಿ. ಆದರೂ ಈಗ ಶರಣು ಹೊಕ್ಕು ಮಹಾ ಸ್ವಾಮಿಯವರನ್ನು ಸಂದರ್ಶಿಸಬೇಕೆಂಬ ಕುತೂಹಲದಿಂದ ಇಲ್ಲಿಗೆ ಬಂದಿರುವುದು. ಅದರಿಂದ ತಾವು ದರ್ಪವನ್ನು ತಳೆದು ಗಂಭೀರಭಾವದಿಂದ ಕುಳಿತಿರಬೇಕು. ಇದೇ ನನ್ನ ಕೋರಿಕೆ. ಏಕೆಂದರೆ, ಅಣೆಕಟ್ಟು ನೀರಿನ ಸೆಳೆತದಿಂದ ಒಡೆಯುವುದು. ರಹಸ್ಯವಾಗಿಡದಿದ್ದರೆ ಗುಟ್ಟು ರಟ್ಟಾಗಿ ಅನರ್ಥವನ್ನು ತಂದೊಡ್ಡುವುದು. ಚಾಡಿಕೋರತನದಿಂದ ಸ್ನೇಹವು ಭಿನ್ನವಾಗುವುದು. ಪುರುಕನು ಮಾತುಗಳಿಗೆ ಹೆದರಿ ವಶನಾಗುವನು. ಆ ಕಾರಣ ತಾವು ಅದರ ಧ್ವನಿಗೆ ಹೆದರಬಾರದು. ಶಬ್ದಕ್ಕೆ ಕಾರಣವೇನೆಂಬುದನ್ನು ಚೆನ್ನಾಗಿ ತಿಳಿಯದೆ ಅಂಜಬಾರದು. ಶಬ್ದಕ್ಕೆ ಮೂಲವನ್ನು ತಿಳಿದ ಅಡು ಗೂಳಜ್ಜಿಯು ಗೌರವವನ್ನು ಪಡೆಯಲಿಲ್ಲವೇ'' ಎಂದನು. ಅದರ ಪರಿಯನ್ನು ತಿಳಿಸುವಂತೆ ಪಿಂಗಳಕನು ಕೇಳಲಾಗಿ ದಮನಕನು ಆ ಕಥೆಯನ್ನು ಹೇಳತೊಡಗಿದನು.

## ಆನೆಯ ಕಥೆ

ಶ್ರೀಪರ್ವತದ ನಡುವೆ ಬ್ರಹ್ಮಪುರವೆಂಬ ಪಟ್ಟಣವಿರುವುದು. ಆ ಬೆಟ್ಟದ ತುದಿಯಲ್ಲಿ ಘಂಟಾಕರ್ಣನೆಂಬ ರಾಕ್ಷಸನು ವಾಸಮಾಡುತ್ತಿರುವುದಾಗಿ ಜನಗಳು ಹೇಳಿಕೊಳ್ಳುತ್ತಿದ್ದರು. ಒಮ್ಮೆ ಘಂಟೆಯನ್ನು ಕದ್ದು ಓಡಿ ಹೋದ ಒಬ್ಬ ಕಳ್ಳನನ್ನು ಹುಲಿಯು ಕೊಂದಿತು. ಅವನಲ್ಲಿದ್ದ ಆ ಘಂಟೆಯು ಮಂಗಗಳ ಪಾಲಾಯಿತು. ಅವು ಆ ಘಂಟೆಯನ್ನು ಯಾವಾಗಲೂ ಬಾರಿಸತೊಡಗಿದುವು. ಊರ ಜನರು ಹುಲಿಯ ಬಾಯಿಗೆ ತುತ್ತಾದ ಕಳ್ಳನ

ದೇಹವನ್ನು ಕಾಡಿನಲ್ಲಿ ಕಂಡಿದ್ದರು. ಅದಕ್ಕೆ ಸರಿಯಾಗಿ ಘಂಟೆಯ ನಾದವೂ ಆಗಾಗ್ಗೆ ಕೇಳಿಸುತ್ತಿದ್ದಿತು. ಇದನ್ನು ಕೇಳಿ ಊರ ಜನರು "ಘಂಟಾಕರ್ಣನು ಸಿಟ್ಟುಗೊಂಡು ಮನುಷ್ಯರನ್ನು ಕೊಂದು ತಿನ್ನುತ್ತಾನೆ" ಎಂಬುದಾಗಿ ಹೇಳಿ ಕೊಳ್ಳುತ್ತ ಊರುಬಿಟ್ಟು ಓಡಿಹೋಗ ತೊಡಗಿದರು. ಅಷ್ಟರಲ್ಲಿ, "ಕೋತಿ ಗಳು ಗಂಟೆಯನ್ನು ಬಾಜಿಸುತ್ತವೆ" ಎಂಬ ವಾಸ್ತವಾಂಶವನ್ನು ತಿಳಿದ ಅಡುಗೂಳಜ್ಜಿಯೊಬ್ಬಳು ಆ ಪಟ್ಟಣದ ಅರಸನ ಬಳಿಸಾರ್ದು,—"ಪ್ರಭುವೆ! ಹಣವನ್ನು ವೆಚ್ಚಮಾಡಲು ಸಮ್ಮತಿಸುವೆಯಾದರೆ, ನಾನು ಈ ಘಂಟಾಕರ್ಣ ನನ್ನು ಕೊನೆಗಾಣಿಸುವೆನು" ಎಂಬುದಾಗಿ ಬಿನ್ನಯಿಸಿದಳು. ಬಳಿಕ ಅರಸನು ಅವಳಿಗೆ ಬೇಕಾದಷ್ಟು ಧನವನ್ನು ಕೊಟ್ಟು ಮನ್ನಿಸಿದನು. ತರುವಾಯ ಅವಳು ಅರಣ್ಯವನ್ನು ಹೊಕ್ಕು ಒಂದು ಮರದ ಅಡಿಯಲ್ಲಿ ಅಕ್ಕಿಯನ್ನೂ ಹಣ್ಣು ಗಳನ್ನೂ ಇಟ್ಟಳು. ಒಡನೆ ಮಂಗಗಳೆಲ್ಲ ಘಂಟೆಯನ್ನು ಬಿಸುಟು, ಹಣ್ಣಿನ ಆಸೆಯಿಂದ ಓಡಿಬಂದುವು. ಆಗ ಅಡುಗೂಳಜ್ಜಿಯು ಆ ಘಂಟೆಯನ್ನು ತೆಗೆದುಕೊಂಡು ಊರಿಗೆ ಬಂದಳು. ಅಂದಿನಿಂದ ಘಂಟೆಯ ಶಬ್ದವು ಕೇಳ ಬರಲಿಲ್ಲ. ಊರಿನವರೆಲ್ಲರು ಅವಳನ್ನು ಬಹಳವಾಗಿ ಮನ್ನಿಸಿದರು. ಅದ ರಿಂದ "ಶಬ್ದದ ಕಾರಣವನ್ನು ತಿಳಿಯದೆ ಹೆದರಬಾರದು" ಎಂದೆನು. ಹೀಗೆ ದಮನಕನು ಪಿಂಗಳಕನಿಗೆ ಹೇಳಿದ ನಂತರ ನರಿಗಳೆರಡೂ ಸಂಜೀವಕ ನನ್ನು ಕರೆದೊಯ್ದು ಅರಸನ ದರ್ಶನವನ್ನು ಮಾಡಿಸಿದುವು. ಅದು ಮೊದಲು ಸಂಜೀವಕನು ಆ ಅಡವಿಯಲ್ಲಿಯೇ ಬಹಳ ಸಂತೋಷದಿಂದ ಚಿರಕಾಲ ವಾಸವಾಗಿದ್ದನು.

ಹೀಗಿರುವಲ್ಲಿ ಒಂದು ದಿನ ಪಿಂಗಳಕನ ಅಣ್ಣನಾದ ಸ್ತಬ್ಧಕರ್ಣನು ಅಲ್ಲಿಗೆ ಬಂದನು. ಅವನನ್ನು ಪಿಂಗಳಕನು ಆದರದಿಂದ ಬರಮಾಡಿ ಕುಳ್ಳಿ ರಿಸಿ, ಆಹಾರಾರ್ಥವಾಗಿ ಬೇಟೆಯನ್ನು ಹುಡುಕಿಕೊಂಡು ಹೊರಟನು. ಆಗ ಸಂಜೀವಕನು ಪಿಂಗಳಕನನ್ನು ಕುರಿತು–"ಸ್ವಾಮಿ! ಈ ದಿನ ಅಷ್ಟೊಂದು ಮೃಗಗಳನ್ನು ಕೊಂದಿರಲ್ಲವೇ? ಆ ಮಾಂಸವೆಲ್ಲ ಏನಾಯಿತು?" ಎಂಬು ದಾಗಿ ಕೇಳಿದನು. "ಕರಟಕ ದಮನಕರೇ ಬಲ್ಲರು" ಎಂಬುದಾಗಿ ಪಿಂಗ ಳಕನು ಅದಕ್ಕೆ ಉತ್ತರ ಕೊಟ್ಟನು. ಮರಳಿ ಸಂಜೀವಕನು "ಇದೆಯೋ ಇಲ್ಲವೋ ವಿಚಾರಿಸೋಣ" ಎಂದನು. ಆಗ ಪಿಂಗಳಕನು ನಗುತ್ತ "ಅದರ

ಸುದ್ದಿ ಇನ್ನೇಕೆ? ಇಲ್ಲವೇ ಇಲ್ಲ'' ಎಂದನು. ಆಗ ಸಂಜೀವಕನು "ಏನು? ಅಷ್ಟೊಂದು ಮಾಂಸವನ್ನೆಲ್ಲ ಅವರಿಬ್ಬರೇ ತಿಂದರೇ?'' ಎಂದನು. ಆ ಮಾತಿಗೆ ಮೃಗರಾಜನು "ತಿಂದರು, ವೆಚ್ಚಮಾಡಿದರು, ಚೆಲ್ಲಿದರು. ಪ್ರತಿನಿತ್ಯವೂ ಇದೇ ಪದ್ಧತಿಯಷ್ಟೆ!'' ಎಂಬುದಾಗಿ ಹೇಳಿದನು. ಆ ಮಾತಿಗೆ ಸಂಜೀವಕನು "ಏನು? ಮಹಾಸ್ವಾಮಿಯವರಿಗೆ ಅರಿಕೆ ಇಲ್ಲದಂತೆಯೇ ಹೀಗೆ ಮಾಡುತ್ತಿರುವರೇ?'' ಎನಲು, ಪಿಂಗಳಕನು, "ಹೌದು, ನನಗೆ ತಿಳಿಯದೆಯೇ ಹೀಗೆ ಮಾಡುತ್ತಿರುವರು'' ಎಂದನು. ಆಗ ಸಂಜೀವಕನು "ಇದು ಸರಿಯಲ್ಲ. ಆಪತ್ತನ್ನು ತಪ್ಪಿಸುವ ಒಂದು ಕೆಲಸವನ್ನು ಬಿಟ್ಟು ಯಾವ ಕೆಲಸವನ್ನಾದರೂ ಅರಸನಿಗೆ ತಿಳಿಸದೆ ಮಾಡಬಾರದು. ಏಕೆಂದರೆ, ಮಂತ್ರಿಯು ಕಮಂಡಲು ವಿನಂತಿರಬೇಕು. ಸ್ವಲ್ಪವಾಗಿ ಕೊಡಬೇಕು. ಬಹಳವಾಗಿ ಸಂಗ್ರಹಿಸಬೇಕು. ರಾಜನೆ! ನಿಮಿಷವನ್ನು ಲೆಕ್ಕಿಸದವನು ಮೂರ್ಖನು. ಕವಡೆಯನ್ನು ಅಲಕ್ಷ್ಯ ಮಾಡುವವನು ದರಿದ್ರನು. ಕವಡೆ ಕವಡೆಯಂತೆ ಶೇಖರಿಸಿ ವೃದ್ಧಿಗೊಳಿಸತಕ್ಕವನೇ ಮಂತ್ರಿಪದವಿಗೆ ತಕ್ಕವನು. ಅರಸನಿಗೆ ಬೊಕ್ಕಸವೇ ಪ್ರಾಣವಲ್ಲದೆ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬ ಐದು ಬಗೆಯ ಪ್ರಾಣಗಳು ಎಂದಿಗೂ ರಾಜನಿಗೆ ಪ್ರಾಣಗಳಲ್ಲ. ಅರಸನು ಕುಲಾಚಾರ ನೀತಿಸಂಪನ್ನನಾಗಿದ್ದರೂ, ಧನಹೀನನಾಗಿದ್ದಲ್ಲಿ ಲೋಕವು ಅವನನ್ನು ಸೇವಿಸಲೊಲ್ಲದು. ಕೈ ಹಿಡಿದ ಮಡದಿಯೂ ಬಡವನನ್ನು ಜರೆದುಬಿಡುವಳು. ಇನ್ನು ಇತರರ ಮಾತು ಹೇಳಬೇಕೇ? ಲೆಕ್ಕವಿಲ್ಲದೆ ವೆಚ್ಚಮಾಡುವಿಕೆ, ಮೇಲ್ವಿಚಾರಣೆಯಿಲ್ಲದಿರುವಿಕೆ, ಅನ್ಯಾಯದಿಂದ ಸಂಪಾದಿಸುವಿಕೆ, ದೂರದಿಂದ ಬರಬೇಕಾದ ಹಣವನ್ನು ಉಪೇಕ್ಷೆಯಿಂದ ಬಿಡುವಿಕೆ ಇವು ಕೋಶವ್ಯಸನಗಳು. ಮುಂದಣ ಆದಾಯವು ಬೇಗನೆ ಬರುವುದೋ ಇಲ್ಲವೋ ಎಂಬುದನ್ನು ಯೋಚಿಸದೆ, ಇದ್ದುದನ್ನು ಮನಸ್ಸಿಗೆ ಬಂದಂತೆ ವೆಚ್ಚಮಾಡುವ ಅರಸನು ಕುಬೇರನಂತಹ ಹಣಗಾರನಾಗಿದ್ದರೂ ಬಡವನಾಗುವುದೇ ದಿಟ. ದುಂದುಗಾರತನವು ಅರಸನಿಗಾಗಲಿ ಮಂತ್ರಿಗಾಗಲಿ ತಕ್ಕುದಲ್ಲ. ಈ ವಿಷಯದಲ್ಲಿ ಪ್ರಭುಗಳು ತಕ್ಕ ವ್ಯವಸ್ಥೆಯನ್ನು ಮಾಡಬೇಕು'' ಎಂಬುದಾಗಿ ಬಿನ್ನವಿಸಿದನು. ಇದನ್ನೆಲ್ಲ ಕೇಳಿ ಸ್ತಬ್ಧಕರ್ಣನು ಇಂತೆಂದನು:—"ಸೋದರನೆ! ಇತ್ತ ಕೇಳು. ಈ ಕರಟಕ ದಮನಕರು

ಹಳೆಯ ಬಂಟರು. ಸಂಧಿ ವಿಗ್ರಹ ಮುಂತಾದ ಕೆಲಸಗಳು ಇವರನ್ನು ಸೇರಿವೆ. ಇಂತಹವರನ್ನು ಎಂದಿಗೂ ಬೊಕ್ಕಸದ ಅಧಿಕಾರದಲ್ಲಿ ಇರಿಸಲೇ ಬಾರದು. ಅಧಿಕಾರಿಗಳಿಂದ ಕೆಲಸ ಕಾರ್ಯಗಳನ್ನು ಮಾಡಿಸುವ ವಿಷಯದಲ್ಲಿ ನಾನು ಕೇಳಿ ತಿಳಿದಿರುವ ನನ್ನ ಅನುಭವದಲ್ಲಿರುವ ಒಂದೆರಡು ಮಾತುಗಳನ್ನು ಹೇಳುವೆನು."

"ಬ್ರಾಹ್ಮಣನನ್ನೂ, ಕ್ಷತ್ರಿಯನನ್ನೂ, ನಂಟನನ್ನೂ, ಹಳೆಯ ಬಂಟನನ್ನೂ ಕೋಶಾಧಿಕಾರದಲ್ಲಿ ನಿಯಮಿಸಬಾರದು. ಹಣವು ಸಿದ್ಧವಾಗಿದ್ದರೂ, ಎಂತಹ ಆಪತ್ತು ಬಂದರೂ, ಬ್ರಾಹ್ಮಣನು ಹಣವನ್ನು ವೆಚ್ಚಮಾಡುವುದೇ ಇಲ್ಲ. ಬೊಕ್ಕಸದ ಅಧಿಕಾರವು ಕ್ಷತ್ರಿಯನಿಗೆ ಬಂದಿತೆಂದರೆ, ಅವನು ದಿಟವಾಗಿಯೂ ಕತ್ತಿಯನ್ನೇ ತೋರುತ್ತಾನೆ. ನಂಟನು ತನ್ನ ಬಂಧುತ್ವವನ್ನೇ ಮುಂದುಮಾಡಿ ಹಣವನ್ನೆಲ್ಲ ನುಂಗಿಬಿಡುವನು. ಹಳೆಯ ಸೇವಕನಾದರೊ ತಪ್ಪು ಮಾಡಿದರೂ ಹೆದರದೆ, ಪ್ರಭುವನ್ನೂ ಲಕ್ಷ್ಯಕ್ಕೆ ತಾರದೆ ಇದಿರಿಲ್ಲದೆ ಮೆರೆಯುವನು. ಉಪಕಾರ ಮಾಡಿದವನನ್ನು ಕೋಶದಲ್ಲಿ ನಿಲ್ಲಿಸಿದರೆ, ಅವನು ಎಂದೆಂದಿಗೂ ತನ್ನ ಅಪರಾಧವನ್ನು ಎಣಿಸುವುದಿಲ್ಲ. ಮಾತುಮಾತಿಗೂ ತಾನು ಮಾಡಿದ ಉಪಕಾರವನ್ನೇ ನಿಮಿತ್ತವಾಗಿಟ್ಟುಕೊಂಡು, ಎಲ್ಲವನ್ನೂ ಅಪಹರಿಸುವನು. ಏಕಾಂತವಾಗಿ ಆಟಪಾಟಗಳಲ್ಲಿ ಒಡನಾಡಿಯಾದ ಮಂತ್ರಿಯು ತಾನೇ ಅರಸನಾಗಿ ಮೆರೆಯುವನು. ಸಲುಗೆಯಿಂದ ಅವನು ದಿಟವಾಗಿಯೂ ಅರಸನನ್ನು ಅಸಡ್ಡೆಮಾಡುವನು. ಇನ್ನು ಗೂಢವೈರಿಯಾದರೋ, ಅಂತರಂಗದಲ್ಲಿ ದ್ವೇಷವು ಉಕ್ಕಿಬರುತ್ತಿದ್ದರೂ, ಒಳ್ಳೆಯವನಂತೆಯೇ ಮಾತನಾಡುತ್ತಿದ್ದರೂ, ಅವನನ್ನು ನಂಬಲೇ ಬಾರದು. ಯಾವ ಸಮಯದಲ್ಲಿ, ಯಾವ ರೀತಿಯಿಂದ, ಸೇಡು ತೀರಿಸಿಕೊಳ್ಳುವನೆಂಬುದನ್ನು ಹೇಳಲಾಗದು. ಈ ವಿಷಯದಲ್ಲಿ ದುರ್ಯೋಧನನ ಸೋದರಮಾವನಾದ ಶಕುನಿಯೂ, ನವನಂದನರ ಮಂತ್ರಿಯಾದ ಶಕಟಾರನೂ ಉದಾಹರಣೆಯಾಗಿರುತ್ತಾರೆ."

"ಸಮೃದ್ಧನಾದ ಮಂತ್ರಿಯು ಎಂದಿಗೂ ಅಂಕೆಗೆ ಒಳಪಡುವುದಿಲ್ಲ. ಅವನೇ ಸಕಲಾಧಿಕಾರಗಳನ್ನೂ ನಡೆಯಿಸುವನು. ಏಕೆಂದರೆ, ಏಳಿಗೆಯು ಮನುಷ್ಯರ ಬುದ್ಧಿಯನ್ನು ವಿಕಾರಗೊಳಿಸಿ, ಹೆಮ್ಮೆಯನ್ನು ಹೆಚ್ಚಿಸುವು

ದೆಂಬುದಾಗಿ ನೀತಿರಹಸ್ಯವನ್ನು ಬಲ್ಲವರು ಹೇಳುತ್ತಾರೆ. ಮಂತ್ರಿಯು ಎಂತಹ ಹಣಗಾರನಾಗಿದ್ದರೂ, ಅಪಹರಿಸುವಿಕೆ, ಹಣವನ್ನು ಮಾರ್ಪಡಿಸುವಿಕೆ, ಸಮಯದಲ್ಲಿ ವೆಚ್ಚಮಾಡದೆ ತಡೆಯುವಿಕೆ, ಉಪೇಕ್ಷೆ, ಅವಿವೇಕ, ತಾನು ಮಾತ್ರವೇ ಅನುಭವಿಸುವಿಕೆ–ಇವನ್ನು ಮಾಡದಿರನು. ಇವೇ ಮಂತ್ರಿಯ ದೋಷಗಳು."

"ಅಧಿಕಾರಿಗಳು ಕೋಶದ ಹಣವನ್ನು ಅಪಹರಿಸದಿರುವುದಕ್ಕೂ, ಒಂದು ವೇಳೆ ದುರುಪಯೋಗಪಡಿಸಿದ್ದರೂ ಅದನ್ನು ಬರಮಾಡಿಕೊಳ್ಳುವುದಕ್ಕೂ, ಅರಸನು ದಿನದಿನವೂ ಕೋಶವನ್ನೂ, ಕೋಶಾಧಿಕಾರಿಯನ್ನೂ, ಜಾಗರೂಕತೆಯಿಂದ ಪರೀಕ್ಷಿಸುತ್ತಿರಬೇಕು. ಸಮಯಾನುಸಾರ ತಿಳಿವಳಿಕೆಯನ್ನೂ ಹೇಳುತ್ತಿರಬೇಕು. ಆಗಾಗ್ಗೆ ಅಧಿಕಾರಿಗಳನ್ನು ಮಾರ್ಪಡಿಸಬೇಕು. ಅಧಿಕಾರಿಗಳು ಕೆಟ್ಟ ಹುಣ್ಣಿನಂತಿರುವರು; ಚೆನ್ನಾಗಿ ಹಿಸುಕದಲ್ಲದೆ, ಒಳಗಣ ಕೆಟ್ಟ ಸಾರವು ಹೊರಬೀಳಲಾರದು. ಆ ಕಾರಣದಿಂದ ರಾಜನು ಬಾರಿಬಾರಿಗೂ, ತನ್ನ ಅಧಿಕಾರಿ ವರ್ಗವನ್ನು ಹಿಂಡಿ, ಧನಧಾರೆಗಳನ್ನು ಪಡೆಯಬೇಕು. ಸ್ನಾನದ ಮಡಿಪಂಚೆಯು ಒಮ್ಮೆ ಹಿಂಡಿದ ಮಾತ್ರದಿಂದಲೇ, ಹೀರಿರುವ ನೀರನ್ನು ಬಿಡುವುದಿಲ್ಲವಷ್ಟೆ! ಇದೆಲ್ಲವನ್ನೂ ಚೆನ್ನಾಗಿ ಅರಿತು ಸಮಯಾನುಸಾರ ನಡೆಯಬೇಕು."

ಈ ರೀತಿಯಾಗಿ ಅಣ್ಣನಾದ ಸ್ತಬ್ಧಕರ್ಣನ ಉಪದೇಶವನ್ನು ಕೇಳಿ ಪಿಂಗಳಕನು—"ನೀನು ಹೇಳಿದುದೆಲ್ಲ ಯುಕ್ತವೇ ಸರಿ. ಆದರೆ ಇವರಿಬ್ಬರು ಎಂದಿಗೂ, ನನ್ನ ಮಾತಿನಂತೆ ನಡೆಯತಕ್ಕವರಲ್ಲವಲ್ಲಾ!" ಎಂದನು. ಆಗ ಸ್ತಬ್ಧಕರ್ಣನು—"ಇದು ಯೋಗ್ಯವಲ್ಲ. ಏಕೆಂದರೆ, ಅಂಕೆ ಮೀರಿದವರು ಮಕ್ಕಳೇ ಆಗಿದ್ದರೂ, ಅರಸನು ಅವರನ್ನು ಶಿಕ್ಷಿಸಲೇಬೇಕು. ಹಾಗೆ ನಿಷ್ಪಕ್ಷಪಾತವಾಗಿ ನಡೆಯದಿರುವ ಅರಸನಿಗೂ, ಚಿತ್ತಾರದಲ್ಲಿರುವ ಅರಸನಿಗೂ ವ್ಯತ್ಯಾಸವೇನು? ಆಲಸನಿಗೆ ಕೀರ್ತಿಯೂ, ವಂಚಕನಿಗೆ ಸ್ನೇಹವೂ, ಇಂದ್ರಿಯಗಳನ್ನು ಬಿಗಿಹಿಡಿಯದವನಿಗೆ ಕುಲವೂ, ಲೋಭಿಗೆ ಧರ್ಮವೂ, ಮದ್ಯಪಾನ ಮುಂತಾದ ದುರಭ್ಯಾಸವುಳ್ಳವನಿಗೆ ಓದಿನ ಫಲವೂ, ಹಣದಾಸೆಯುಳ್ಳವನಿಗೆ ಆತ್ಮಸೌಖ್ಯವೂ, ಕೊಬ್ಬಿದ ಅಧಿಕಾರಿಗಳುಳ್ಳ ಅರಸನಿಗೆ ರಾಜ್ಯವೂ ದಕ್ಕುವುದಿಲ್ಲ. ಮುಖ್ಯವಾಗಿ ಕಳ್ಳರು,

ಅಧಿಕಾರಿಗಳು, ಹಗೆಯರಸರು, ಆಪ್ತರು, ಲೋಭ ಇವುಗಳಿಗೆ ವಶರಾಗ ದಂತೆ ತನ್ನ ಪ್ರಜೆಗಳನ್ನು ತಂದೆಯು ಹಾಗೆ ಕಾಪಾಡುವುದು ಅರಸನ ಮುಖ್ಯ ಧರ್ಮವಷ್ಟೆ! ಸೋದರನೆ! ನನ್ನ ಮಾತನ್ನು ಅಲ್ಲಗಳೆಯದೆ ಸಂಪೂರ್ಣವಾಗಿ ನೆರವೇರಿಸು. ಈಗ ನನಗೆ ಊಟವೂ ಆಗಿದೆ. ಇತ್ತ ನೋಡು. ಸಸ್ಯಭಕ್ಷಕನಾದ ಈ ಸಂಜೀವಕನನ್ನು ಭೋಜನಾಧಿಕಾರದಲ್ಲಿ ನಿಯಮಿಸು'' ಎಂಬುದಾಗಿ ಮರಳಿ ಹೇಳಿದನು.

ಪಿಂಗಳಕನು ಒಡನೆಯೇ ಅಣ್ಣನ ಆಣತಿಯನ್ನು ನೆರವೇರಿಸಿದನು. ಇದರಿಂದ ಸಂಜೀವಕನು ಪಿಂಗಳಕನ ಮೆಚ್ಚಿಕೆಗೆ ಪಾತ್ರನಾದನು. ಹೀಗಾಗಿ ಪಿಂಗಳಕ ಸಂಜೀವಕರಿಬ್ಬರೂ ವಿಶೇಷವಾಗಿ ಅನ್ಯೋನ್ಯಭಾವದಿಂದ ಆಪ್ತ ಸ್ನೇಹಿತರಾಗಿದ್ದರು. ಆಗ ಕರಟಕ ಮುಂತಾದ ಮಿಕ್ಕ ಆಪ್ತ, ಬಂಧು, ಪರಿವಾರದವರಿಗೆಲ್ಲ ಕೈಕಟ್ಟಿದಂತಾಯಿತು. ಕ್ರಮವಾಗಿ ಪಿಂಗಳಕನು ಪರಿವಾರಕ್ಕೆ ಆಹಾರವನ್ನೊದವಿಸುವುದರಲ್ಲಿಯೂ ಅಸಡ್ಡೆ ಮಾಡುತ್ತ ಬಂದನು. ಇದನ್ನು ಕಂಡು ಕರಟಕ ದಮನಕರು ಪರಸ್ಪರವಾಗಿ ಯೋಚಿಸತೊಡಗಿದರು. ಆಗ ದಮನಕನು “ಇದು ನಾವಾಗಿ ಮಾಡಿಕೊಂಡ ಕೆಡಕು. ಸ್ವಯಂಕೃತಾಪರಾಧಕ್ಕೆ ಅತ್ತು ಫಲವಿಲ್ಲ. ಏಕೆಂದರೆ, ಸ್ವರ್ಣರೇಖೆಯನ್ನು ಸೋಕಿ ರಾಜಪುತ್ರನು ಕೆಟ್ಟನು. ರತ್ನವನ್ನು ಬಯಸಿ ವರ್ತಕನು ಕೆಟ್ಟನು. ಇವರಿಬ್ಬರೂ ತಮ್ಮ ತಪ್ಪಿನಿಂದಲೇ ದುಃಖಕ್ಕೆ ಗುರಿಯಾದರು'' ಎಂದನು. ಇದನ್ನು ಕೇಳಿ, ಕರಟಕನು ತನಗೆ ಆ ಕಥೆಯನ್ನು ವಿವರಿಸಬೇಕೆನಲು, ದಮನಕನು ಹೇಳತೊಡಗಿದನು.

## ೫ನೆಯ ಕಥೆ

ಸಿಂಹಳದ್ವೀಪಕ್ಕೆ ಅರಸನಾದ ಜೀಮೂತಕೇತುವಿಗೆ ಒಬ್ಬ ಮಗ ನಿದ್ದನು. ಒಂದು ದಿನ ಅವನು ಕ್ರೀಡಾವನದಲ್ಲಿರುವಾಗ ಒಬ್ಬ ವರ್ತಕನು ಅಲ್ಲಿಗೆ ಬಂದು, “ಈ ಸಮುದ್ರದ ನಡುವೆ ಒಂದೊಂದು ಚತುರ್ದಶಿಯ ದಿನವೂ, ಒಂದು ಕಲ್ಪವೃಕ್ಷವು ನೀರಿನಿಂದ ಮೇಲಕ್ಕೆ ಬಂದು ನಿಲ್ಲುವುದು. ಅದರ ಬುಡದಲ್ಲಿ ನವರತ್ನಗಳ ಕಾಂತಿಯಿಂದ ಜಿಗಿಯುವ ವಿಚಿತ್ರವಾದ ಮಂಚದ ಮೇಲೆ ಸಕಲಾಭರಣಭೂಷಿತೆಯಾಗಿ, ವೀಣೆಯನ್ನು ನುಡಿಸುತ್ತ, ಪಾಲ್ಗಡಲಕುವರಿಯೋ ಎಂಬಂತೆ ಬೆಳಗುವ ಒಬ್ಬ ಯುವತಿಯು ಕಾಣಿಸು

ತ್ತಾಳೆ" ಎಂದನು. ಅದನ್ನು ಕೇಳಿದ ಕೂಡಲೇ ರಾಜಪುತ್ರನು ವರ್ತಕನನ್ನು ಸಂಗಡ ಕರೆದುಕೊಂಡು ಹಡಗು ಹತ್ತಿ ಅಲ್ಲಿಗೆ ಹೋದನು. ಆ ವರ್ತಕನು ಹೇಳಿದಂತೆಯೇ ನೀರಿನಲ್ಲಿ ಅರೆ ಮುಳುಗಿರುವ ಮಂಚದ ಮೇಲೆ ಆ ತರುಣಿಯು ಕಂಡುಬಂದಳು. ಒಡನೆಯೇ ಅರಸುಮಗನು ಎವೆಯಿಕ್ಕದೆ ಆಕೆಯನ್ನು ನೋಡುತ್ತ, ತಾನು ದುಮ್ಮಿಕ್ಕಿ ಅಲ್ಲಿಗೆ ಹೋಗಬೇಕೆನ್ನುವಷ್ಟರಲ್ಲಿ, ಆ ಸುದತಿಯು ತನ್ನ ಚೇಟಿಯೊಂದಿಗೆ ನೀರಿನಲ್ಲಿ ಮುಳುಗಿ ಕಣ್ಮರೆಯಾದಳು. ಆಕೆಯ ಸೌಂದರ್ಯಕ್ಕೆ ಮರುಳಾದ ರಾಜಪುತ್ರನು ಧೈರ್ಯದಿಂದ ನೀರಿನಲ್ಲಿ ದುಮ್ಮಿಕ್ಕಿ, ಆ ಕಲ್ಪವೃಕ್ಷದ ಕೊಂಬೆಯನ್ನು ಹಿಡಿದು, ಆ ಸುಂದರಿಯ ವಾಸಸ್ಥಾನವಾದ ಕನಕ ನಗರಕ್ಕೆ ಹೋದನು. ಅಲ್ಲಿ ಆ ಪಟ್ಟಣದ ವಿದ್ಯಾಧರಸ್ತ್ರೀಯರು ಸೇವಿಸುತ್ತಿರುವಲ್ಲಿ, ಮೊದಲಿನಂತೆಯೇ ಮಂಚದ ಮೇಲೆ ಕುಳಿತಿದ್ದ ಆ ಪೆಣ್ಮಣಿಯನ್ನು ನೋಡಿದನು. ಆಕೆಯು ಆ ರಾಜಪುತ್ರನನ್ನು ನೋಡಿದ ಕೂಡಲೇ ಒಬ್ಬ ದೂತಿಯನ್ನು ಅವನ ಬಳಿಗೆ ಕಳುಹಿದಳು. ಅವಳನ್ನು ಕಂಡು ಅರಸು ಮಗನು ಮಂಚದ ಮೇಲಿರುವ ತರುಣಿಯು ಯಾರೆಂಬುದಾಗಿ ಕೇಳಲಾಗಿ "ಈಕೆಯು ಇಲ್ಲಿನ ಅರಸನಾದ ಕಂದರ್ಪಕೇಳಿಯೆಂಬ ವಿದ್ಯಾಧರಚಕ್ರವರ್ತಿಯ ಮಗಳು. ಇವಳ ಹೆಸರು ರತ್ನಮಂಜರಿ. ಯಾವಾತನು ಸಾಹಸದಿಂದ ತಾನಾಗಿಯೇ ಈ ಕನಕನಗರಿಗೆ ಬಂದು ಈಕೆಯನ್ನು ನೋಡುವನೋ ಅವನನ್ನು ತನ್ನ ತಂದೆಯ ಅನುಮತಿಯಂತೆ ಮದುವೆಯಾಗುವೆನೆಂದು ಪ್ರತಿಜ್ಞೆಮಾಡಿರುವಳು. ಅದರಿಂದ ನೀನು ಈಗಲೇ ಈಕೆಯನ್ನು ಗಾಂಧರ್ವವಿಧಿಯಿಂದ ವಿವಾಹಮಾಡಿಕೊಳ್ಳಬೇಕು" ಎಂಬುದಾಗಿ ಹೇಳಿದಳು. ಅಂತೆಯೇ ಗಾಂಧರ್ವವಿವಾಹವು ನಡೆಯಲಾಗಿ, ರಾಜಪುತ್ರನು ಆ ಸುಕುಮಾರಿಯೊಡನೆ ಚಿರಕಾಲ ಸುಖವಾಗಿದ್ದನು.

ಹೀಗಿರುವಲ್ಲಿ, ಒಂದು ದಿನ ರತ್ನಮಂಜರಿಯು ರಾಜಪುತ್ರನನ್ನು ಕುರಿತು ಏಕಾಂತವಾಗಿ—"ಸ್ವಾಮಿಾ! ಇಷ್ಟಾನುಸಾರ ಇಲ್ಲಿರುವ ಸಕಲ ಭೋಗಭಾಗ್ಯಗಳನ್ನೂ ಅನುಭವಿಸಬಹುದು. ಆದರೆ ಈ ಚಿತ್ರದಲ್ಲಿರುವ ಸ್ವರ್ಣರೇಖೆ ಎಂಬ ವಿದ್ಯಾಧರಿಯನ್ನು ಮಾತ್ರ ಎಂದಿಗೂ ಸೋಕಬಾರದು" ಎಂಬುದಾಗಿ ಹೇಳಿದಳು. ಇದರಿಂದ ರಾಜಪುತ್ರನ ಕುತೂಹಲವು ಇಮ್ಮಡಿ

ಯಾಗಿ ಒಂದು ದಿನ ರತ್ನಮಂಜರಿಯು ಇಲ್ಲದಿರುವಾಗ ಚಿತ್ರದಲ್ಲಿರುವ ಸ್ವರ್ಣರೇಖೆಯನ್ನು ಮುಟ್ಟಿದನು. ಚಿತ್ರದಲ್ಲಿರುವವಳಾದರೂ ಆ ಸ್ವರ್ಣ ರೇಖೆಯು ಇವನನ್ನು ತನ್ನ ಕಾಲಿನಿಂದ ಒದ್ದಳು. ಕೂಡಲೇ ರಾಜಪುತ್ರನು ತನ್ನ ದೇಶದಲ್ಲಿ ಬಂದು ಬಿದ್ದನು. ಅಂದಿನ ಮೊದಲು ಅವನು ದುಃಖ ಪೀಡಿತನಾಗಿ ಸನ್ನ್ಯಾಸವನ್ನು ಕೈಕೊಂಡು ಭೂಮಿಯನ್ನೆಲ್ಲ ಅಲೆಯ ತೊಡಗಿದನು.

### ೬ನೆಯ ಕಥೆ

ಇನ್ನು ರತ್ನವನ್ನು ಬಯಸಿ ದುಃಖಕ್ಕೆ ಗುರಿಯಾದ ವರ್ತಕನ ಕಥೆ ಯನ್ನು ಹೇಳುವೆನು. ಕೇಳು:—

"ಮಣಿಪುರವೆಂಬ ಪಟ್ಟಣದಲ್ಲಿ ವಸುಪಾಲನೆಂಬ ಸೆಟ್ಟಿಯಿದ್ದನು. ಅವನು ಹನ್ನೆರಡು ವರ್ಷಗಳ ವರೆಗೆ ದೇಶಸಂಚಾರಮಾಡಿ, ಬಗೆಬಗೆಯ ವಸ್ತು ಗಳನ್ನೂ ಅಪೂರ್ವ ರತ್ನಗಳನ್ನೂ ಮಲಯಪರ್ವತದಿಂದ ತಂದು, ವ್ಯಾಪಾರ ದಲ್ಲಿ ವಿಶೇಷ ಲಾಭವನ್ನು ಪಡೆದು, ಮಾರ್ಗವಶಾತ್ ಬರುತ್ತಿರುವಲ್ಲಿ ಸಂಜೆ ಯಾಯಿತು. ಅಷ್ಟರಲ್ಲಿಯೇ ಸಮೀಪದಲ್ಲಿದ್ದ ರತ್ನಗಿರಿಯನ್ನು ಸೇರಿ ಒಬ್ಬ ಪಣ್ಯಾಂಗನೆಯ ಮನೆಯಲ್ಲಿ ಮಲಗಿದ್ದನು. ಆ ಮನೆಯ ಹೊಸ್ತಿಲಲ್ಲಿ ಒಂದು ಮರದ ಬೇತಾಳನನ್ನು ಇಟ್ಟಿದ್ದರಂತೆ. ಆ ಬೇತಾಳನ ನೆತ್ತಿಯ ಮೇಲೆ ಸರ್ವೋತ್ತಮವಾದ ಒಂದು ರತ್ನವು ಸೂರ್ಯಚಂದ್ರರ ಕಾಂತಿಯನ್ನೂ ಮೀರಿ ಮಿನುಗುತ್ತಿದ್ದಿತು. ಅದನ್ನು ನೋಡಿ ವರ್ತಕನು ಲೋಭಗೊಂಡನು. ಹೇಗಾದರೂ ಆ ರತ್ನವನ್ನು ಅಪಹರಿಸಬೇಕೆಂಬ ಆಸೆಯಿಂದ ಯೋಚಿಸಿ ಸರಿ ಹೊತ್ತಿನಲ್ಲಿ ಎದ್ದು ಆ ರತ್ನವನ್ನು ತೆಗೆದುಕೊಳ್ಳಲು ಅದರ ಮೇಲೆ ಕೈ ನೀಡಿ ದನು. ಕೂಡಲೇ ಬೇತಾಳನು ಸೂತ್ರದ ಮೂಲಕವಾಗಿ ಸಂಚಲಿಸುತ್ತ, ತನ್ನ ಎರಡು ತೋಳುಗಳಿಂದಲೂ ಇವನನ್ನು ಬಲವಾಗಿ ಅಪ್ಪಿಕೊಂಡು ಹಿಸುಕ ತೊಡಗಿದನು. ಅಷ್ಟರಲ್ಲಿ ಒಬ್ಬ ದೂತಿಯು ಎಚ್ಚತ್ತು ಬಂದು, ವರ್ತಕನ ಸ್ಥಿತಿಯನ್ನು ಕಂಡು, "ಅಯ್ಯೋ! ಇದರ ಕೈಗೆ ಸಿಲುಕಿದೆಯಾ? ಇನ್ನು ನೀನು ಪಾರಾಗುವ ಬಗೆಯೇ ಇಲ್ಲವಲ್ಲಾ! ಮುಂದೇನು ಗತಿ" ಎಂದಳು. ಇದನ್ನು ಕೇಳಿ ವರ್ತಕನು ಬೆಚ್ಚಿದನು. ಹೇಗಾದರೂ ಮಾಡಿ ತನ್ನ ಪ್ರಾಣಗಳನ್ನು ಉಳಿಸಿಕೊಂಡರೆ ಸಾಕೆನ್ನಿಸಿತು. ಆಗ ವರ್ತಕನು ಆ ದೂತಿಯನ್ನು ಬಗೆಬಗೆ

ಯಿಂದ ಬೇಡಿ, ಹೇಗಾದರೂ ತನ್ನನ್ನು ಈ ಬೇತಾಳನಿಂದ ಉಳಿಸಬೇಕೆಂಬು ದಾಗಿ ಅಂಗಲಾಚಿದನು. ಅದಕ್ಕೆ ಚೇಟಿಯು—"ಅಪ್ಪಾ! ನನಗೊಂದೂ ತಿಳಿಯದು. ನೀನು ಮಲಯಪರ್ವತದಿಂದ ಬಂದಿರುವೆಯಲ್ಲವೇ! ಅಲ್ಲಿಂದ ನೀನು ತಂದಿರುವ ಅಪೂರ್ವವಾದ ರತ್ನಗಳನ್ನೆಲ್ಲ ಇವನಿಗೆ ಒಪ್ಪಿಸಿದೆಯಾದರೆ ಬಿಡುವನೋ ಏನೋ? ಅಯ್ಯೋ! ಈ ಚೇಟನ ಮಹಿಮೆಯೇ ಇಂತಹುದು. ನೀನೇಕೆ ಇವನ ಗೋಜಿಗೆ ಹೋದೆ?" ಎಂಬುದಾಗಿ ಕಪಟವರ್ತನದಿಂದ ಮರುಕಗೊಂಡವಳಂತೆ ನಟಿಸಿದಳು. ವರ್ತಕನಿಗಾದರೋ ಬೇತಾಳನ ಬಾಧೆಯು ಬಲವಾಗುತ್ತ ಬಂದು, ಹೇಗಾದರೂ ಈ ವಿಪತ್ತಿನಿಂದ ಪಾರಾದರೆ ಸಾಕೆನ್ನಿಸಿತು. ಕೂಡಲೇ ತನ್ನಲ್ಲಿದ್ದ ರತ್ನಗಳನ್ನೆಲ್ಲ ಅದಕ್ಕೆ ಕೊಟ್ಟುಬಿಟ್ಟನು. ಇಂತು ಸರ್ವಸ್ವವನ್ನೂ ಹೋಗಲಾಡಿಸಿಕೊಂಡ ವರ್ತಕನು ದುಃಖಾ ಕ್ರಾಂತನಾಗಿ ಹಿಂದೆ ಹೇಳಿದ ಆ ರಾಜಪುತ್ರ ಸನ್ಯಾಸಿಯೊಡನೆ ಸೇರಿದನು" ಎಂದನು.

"ಆದುದರಿಂದ ಈಗ ನಮ್ಮ ಅಪರಾಧದ ಸಲುವಾಗಿ ನಾವು ಮರುಗಿ ಫಲವಿಲ್ಲ" ಎಂಬುದಾಗಿ ಹೇಳಿ, ಸ್ವಲ್ಪ ಹೊತ್ತು ಏನನ್ನೋ ಯೋಚಿಸು ತ್ತಿದ್ದು, "ಮಿತ್ರನೆ! ಈ ಸಂಜೀವಕನಿಗೂ, ನಮ್ಮ ಅರಸನಾದ ಪಿಂಗಳಕ ನಿಗೂ, ಹೇಗೆ ಸ್ನೇಹವನ್ನು ಬೆಳೆಸಿದೆನೋ, ಈಗ ಹಾಗೆಯೇ ಮಿತ್ರಭೇದ ವನ್ನು ಮಾಡಬೇಕು. ಇಲ್ಲವಾದರೆ ನಾವು ಮುಂದೆ ಬದುಕುವ ಮಾರ್ಗವೇ ಇಲ್ಲ. ಏಕೆಂದರೆ, ಚಿತ್ರಕಳೆಯಲ್ಲಿ ನಿಪುಣನಾದ ಶಿಲ್ಪಿಯು ಸಮನಾದ ಒಂದೇ ಹಲಗೆಯ ಮೇಲೆ ಹಳ್ಳತಿಟ್ಟುಗಳನ್ನು ಬರೆದು ತನ್ನ ಶಿಲ್ಪ ಚಾತುರ್ಯವನ್ನು ಹೇಗೆ ತೋರುವನೋ, ಅಂತೆಯೇ ನೀತಿನಿಪುಣರಾದವರು ಸುಳ್ಳನ್ನು ದಿಟಕ್ಕಿಂತಲೂ ಅತಿಶಯವಾಗಿ ತೋರ್ಪಡಿಸುವರು. ಕಾರ್ಯವು ಕೆಟ್ಟರೂ, ಎದೆಗುಂದದೆ ಯಾವಾತನು ಸಾಹಸದಿಂದ ಪಾಡುಪಡುವನೋ ಅವನು ಎಂತಹ ಇಕ್ಕಟ್ಟನ್ನಾದರೂ ಕಡೆಹಾಯಬಲ್ಲನು. ಉಪಾಯ ದಿಂದ ಸಾಧಿಸಬಹುದಾದ ಕೆಲಸದಲ್ಲಿ ಪರಾಕ್ರಮವನ್ನು ತೋರಿ ಫಲ ವಿಲ್ಲ. ಕಾಗೆಯು ಚಿನ್ನದ ಸರಪಳಿಯಿಂದ ಕೃಷ್ಣಸರ್ಪವನ್ನು ಕೊಲ್ಲಿಸ ಲಿಲ್ಲವೇ?"—ಎಂಬುದಾಗಿ ದಮನಕನು ಹೇಳಿದುದನ್ನು ಕೇಳಿ, ಆ ಕಥೆ ಯನ್ನು ತನಗೆ ವಿವರಿಸುವಂತೆ ಕರಟಕನು ಕೇಳಲು, ದಮನಕನು ಹೇಳ ತೊಡಗಿದನು.

## ೭ನೆಯ ಕಥೆ

ಒಂದಾನೊಂದು ಮರದಲ್ಲಿ ಎರಡು ಕಾಗೆಗಳು ವಾಸವಾಗಿದ್ದುವು. ಅದೇ ಮರದ ಪೊಟರೆಯಲ್ಲಿ ಒಂದು ಕರಿಯ ನಾಗರ ಹಾವೂ ವಾಸವಾಗಿದ್ದು ಆ ಕಾಗೆಗಳ ಮರಿಗಳನ್ನು ತಿನ್ನುತಿದ್ದಿತು. ಇಂತಿರಲು ಕೆಲವು ಕಾಲದ ಬಳಿಕ ಹೆಣ್ಣು ಕಾಗೆಯು ಮರಳಿ ಗರ್ಭವನ್ನು ಧರಿಸಿತು. ಒಂದು ದಿನ ಕಾಗೆಯು, ತನ್ನ ಪತಿಯನ್ನು ಕುರಿತು—"ನಾಥಾ! ಈ ಮರವನ್ನು ತೊರೆದುಬಿಡುವುದು ಲೇಸು. ಈ ಕೃಷ್ಣಸರ್ಪದ ಹಾವಳಿಯಿಂದ ನಮ್ಮ ಸಂತತಿಯು ಏಳಿಗೆಯಾಗುವಂತಿಲ್ಲ. ಏಕೆಂದರೆ, ಗಯ್ಯಾಳಿಯಾದ ಮಡದಿ, ಒಳಗೊಳಗೆ ಕೆಡಕು ಮಾಡುವ ಗೆಳೆಯ, ಇದಿರಾಡುವ ಆಳು, ಹಾವು ಇರುವ ಮನೆಯಲ್ಲಿ ಒಕ್ಕಲು, ಇವು ಮೃತ್ಯುಪ್ರದಗಳೆಂಬುದರಲ್ಲಿ ಸಂದೇಹವಿಲ್ಲ" ಎಂಬುದಾಗಿ ಹೇಳಿ ಕಂಬನಿ ಇಕ್ಕಿತು. ಆಗ ಗಂಡು ಕಾಗೆಯು "ಪ್ರಿಯೇ! ಹೆದರಬೇಡ. ಈ ಕಾಳೋರಗದ ಕೋಟಲೆಯನ್ನು ಇದು ವರೆಗೂ ನಾನು ಸೈರಿಸಿದೆನು. ಈ ಬಾರಿ ಎಷ್ಟು ಮಾತ್ರವೂ ಮನ್ನಿಸಲಾಗದು" ಎಂದಿತು. ಅದಕ್ಕೆ ವಾಯಸಿಯು "ಬಲವಂತನೆನಿಸಿದ ಇದರೊಂದಿಗೆ ಹೋರಾಡಲು ನಿನಗೆ ಶಕ್ತಿಯು ಎಲ್ಲಿಯದು?" ಎಂಬುದಾಗಿ ಪ್ರಶ್ನೆ ಮಾಡಲಾಗಿ, ವಾಯಸವು "ನೀನಿನ್ನು ಹೆದರಬೇಡ. ಹೇಗಾದರೂ ಇದನ್ನು ನಾನು ಈ ಬಾರಿ ತೀರಿಸಿಯೇ ಬಿಡುವೆನು. ಏಕೆಂದರೆ, ಬುದ್ಧಿಶಾಲಿಗೆ ಬಲವು ತಾನಾಗಿಯೇ ಬರುವುದು. ಬುದ್ಧಿಹೀನನಿಗೆ ಸಾಮರ್ಥ್ಯವು ಎತ್ತಣದು? ಇತ್ತ ಕೇಳು; ಕಾಡಿನಲ್ಲಿ ಕೊಬ್ಬಿದ ಸಿಂಹವನ್ನು ಒಂದು ಮೊಲವು ಕೊಲ್ಲಲಿಲ್ಲವೇ?" ಎಂದಿತು. ಆ ಕಥೆಯನ್ನು ಹೇಳುವಂತೆ ವಾಯಸಿಯು ಕೇಳಲಾಗಿ ಕಾಕವು ಹೇಳತೊಡಗಿತು.

## ಉಪಕಥೆ

ಮಂದರಪರ್ವತದಲ್ಲಿ ದುರ್ದಾಂತವೆಂಬ ಒಂದು ಸಿಂಹವು ಇದ್ದಿತು. ಅದು ಯಾವಾಗಲೂ ತನ್ನ ಮನಸ್ಸು ಬಂದಂತೆ ಮೃಗಗಳನ್ನು ಕೊಲ್ಲುತ್ತಿದ್ದಿತು. ಇದನ್ನು ಕಂಡು ಆ ಕಾಡಿನಲ್ಲಿದ್ದ ಮೃಗಗಳೆಲ್ಲವೂ ಗುಂಪುಸೇರಿ ಆ ಸಿಂಹದ ಬಳಿಸಾರ್ದು, "ಎಲೆ ಮೃಗರಾಜನೆ! ಈ ರೀತಿಯಾಗಿ ನಮ್ಮನ್ನೇಕೆ ಬಾಧೆಪಡಿಸುವೆ? ಇಂದಿನ ಮೊದಲು ನಾವಾಗಿಯೇ ದಿನದಿನವೂ

ನಿನ್ನ ಆಹಾರಾರ್ಥವಾಗಿ ಒಂದೊಂದು ಮೃಗವನ್ನು ಕಳುಹಿಸುವೆವು. ಇನ್ನು ಮೇಲೆ ನೀನು ನಮ್ಮನ್ನು ಪೀಡಿಸಬೇಡ" ಎಂಬುದಾಗಿ ಬಿನ್ನಯಿಸಿ ಕೊಂಡುವು. ಸಿಂಹವು ಅದಕ್ಕೆ ಒಪ್ಪಿತು. ಅದು ಮೊದಲ್ಗೊಂಡು ಮೃಗಗಳು ನಿತ್ಯವೂ ಸರದಿಯಂತೆ ಒಂದೊಂದು ಮೃಗವನ್ನು ಕಳುಹಿಸು ತ್ತಿದ್ದುವು. ಅವು ಕಳುಹಿಸಿದ ಪ್ರಾಣಿಯನ್ನೇ ತಿಂದು ಸಿಂಹವು ಜೀವಿಸು ತ್ತಿದ್ದಿತು.

ಇಂತಿರಲು ಒಂದು ದಿನ ಒಂದು ಮುದಿ ಮೊಲದ ಸರದಿ ಬಂದಿತು. ಆಗ ಅದು "ಪ್ರಾಣದ ಮೇಲಣ ಆಸೆಯಿಂದ ಇತರರಿಗೆ ಹೆದರಿ ವಿನಯ ವನ್ನು ತೋರಬೇಕು. ಈಗ ಹೇಗೂ ನನಗೆ ಸಾವು ತಪ್ಪಿದುದಲ್ಲ. ಹೀಗಿರುವಲ್ಲಿ ಸಿಂಹಕ್ಕೆ ಅಂಜಿ, ನಾನೇಕೆ ಬೇಗ ಹೋಗಬೇಕು? ಈಗ ನನಗೆ ವಿನಯದಿಂದಾಗುವ ಪ್ರಯೋಜನವಾದರೂ ಏನು? ಆ ಕಾರಣ ಮೆಲ್ಲಗೆ ಹೋಗುವೆನು" ಎಂಬುದಾಗಿ ಯೋಚಿಸಿ ಮೆಲ್ಲಮೆಲ್ಲನೆ ನಡೆದು ಬಂದಿತು.

ಇಷ್ಟರಲ್ಲಿ ಸಿಂಹವು ಹಸಿವಿನಿಂದ ಬಳಲಿ, ಸಿಟ್ಟುಗೊಂಡು, ಆಹಾ ರಾರ್ಥವಾಗಿ ಇಂದು ಮೃಗವು ಇನ್ನೂ ಏಕೆ ಬರಲಿಲ್ಲವೆಂಬುದಾಗಿ ಯೋಚಿಸುತ್ತಿದ್ದಿತು. ಆಗ ಮೊಲವು ಬಳಿಸಾರ್ದುದನ್ನು ಕಂಡು "ಏಕೆ ಇಷ್ಟು ಹೊತ್ತು ಮಾಡಿ ಬಂದೆ?" ಎಂದಿತು. ಅದಕ್ಕೆ ಶಶವು "ಸ್ವಾಮಿ! ನನ್ನಿಂದ ತಪ್ಪಿಲ್ಲ. ನಾನು ಬರುತ್ತಿರುವಾಗ ನಡುದಾರಿಯಲ್ಲಿ ಮತ್ತೊಂದು ಸಿಂಹವು ಅಡ್ಡಗಟ್ಟಿ ಬಲಾತ್ಕರಿಸಿ ನನ್ನನ್ನು ಮುಂದಕ್ಕೆ ಹೆಜ್ಜೆ ಇಡಗೊಳಿಸ ಲಿಲ್ಲ. ನಾನು ಏನೇನೋ ಹೇಳಿ, ಮರಳಿ ಬರುವಂತೆ ಭಾಷೆಕೊಟ್ಟು ಬಂದಿರುವೆನು" ಎನಲು, ಸಿಂಹವು ರೋಷದಿಂದ "ಆ ಖೂಳನು ಎಲ್ಲಿರು ವನು? ಈಗಲೇ ತೋರಿಸು" ಎಂಬುದಾಗಿ ಕೇಳಿತು. ಮೊಲವು ಸಿಂಹ ವನ್ನು ಸಂಗಡ ಕರೆದುಕೊಂಡು ಆಳವಾದ ಬಾವಿಯ ಬಳಿಗೆ ಬಂದು "ಪ್ರಭುಗಳಿಗೆ ಬಿನ್ನಹ! ಇಲ್ಲಿ ಚಿತ್ತಯಿಸಬೇಕು" ಎನ್ನುತ್ತ ಬಾವಿಯನ್ನು ತೋರಿಸಿತು. ಸಿಂಹವು ಬಂದು ಇಣಿಕಿ ನೋಡಲಾಗಿ ಸಿಂಹದ ನೆರಳು ನೀರಿ ನಲ್ಲಿ ಕಾಣಿಸಿತು. ಇದನ್ನು ಕಂಡು ಸಿಂಹವು ಕೋಪಾಟೋಪದಿಂದ ಆರ್ಭಟಿಸುತ್ತ ನೀರಿನೊಳಗೆ ಮಾರ್ಪೊಳೆದ ತನ್ನ ಪ್ರತಿಬಿಂಬದ ಮೇಲೆ

ಬಿದ್ದಿತು. ಹೀಗೆ ಬೀಳುವಾಗ ತಲೆಕೆಳಗಾಗಿ ಬಿದ್ದು ಸತ್ತಿತು. ಅದರಿಂದ ಬುದ್ಧಿಗಿಂತಲೂ ಬಲವು ಹೆಚ್ಚಿನದಲ್ಲ. ನೀನು ಯೋಚನೆ ಮಾಡಬೇಡ" ಎಂಬುದಾಗಿ ಗಂಡು ಕಾಗೆಯು ಹೇಳಿತು.

ಇದನ್ನು ಕೇಳಿ ಹೆಣ್ಣು ಕಾಗೆಯು "ಅದೆಲ್ಲ ಹಾಗಿರಲಿ. ಈಗ ಏನು ಮಾಡಬೇಕೆಂದಿರುವೆ? ಅದನ್ನು ಮುಂಚಿತವಾಗಿ ಹೇಳು" ಎಂದಿತು. ಆಗ ವಾಯಸವು "ಅರಸುಮಗನು ಪ್ರತಿನಿತ್ಯವೂ ಈ ಕೊಳದಲ್ಲಿ ಸ್ನಾನ ಮಾಡಲು ಬರುವನಷ್ಟೆ! ಆಗ ತನ್ನ ಆಭರಣಗಳನ್ನೆಲ್ಲ ತೆಗೆದು ಹಂತದ ಮೇಲಿಟ್ಟು ಕೊಳದಲ್ಲಿ ಇಳಿಯುವನು. ಅದೇ ಸಮಯದಲ್ಲಿ ನೀನು ಯಾವುದಾದರೊಂದು ಆಭರಣವನ್ನು ಕೊಕ್ಕಿನಿಂದ ಕಚ್ಚಿ ತಂದು ಮರದ ಪೊಟರೆಯಲ್ಲಿ ಹಾಕಿಬಿಡು" ಎನಲು, ಮರುದಿನ ಹೆಣ್ಣು ಕಾಗೆಯು ಕಾದಿದ್ದು, ರಾಜಪುತ್ರನು ಚಿನ್ನದ ಉಡಿದಾರವನ್ನು ತೆಗೆದು ಕೊಳದ ಮೆಟ್ಟಲಿನ ಮೇಲಿರಿಸಿ, ನೀರಿನಲ್ಲಿ ಇಳಿದ ಒಡನೆಯೇ, ಅದನ್ನು ಕಚ್ಚಿ ತಂದು ಮರದ ಪೊಟರೆಯಲ್ಲಿ ಹಾಕಿತು. ಬಳಿಕ ರಾಜಭಟರು ಕಾಗೆಯ ಹಿಂದೆಯೇ ಓಡಿ ಬಂದು, ಮರದ ಪೊಟರೆಯಲ್ಲಿದ್ದ ಕರಿಯ ನಾಗರ ಹಾವನ್ನು ಕೊಂದು, ಉಡಿದಾರವನ್ನು ತೆಗೆದೊಯ್ದರು. ಆ ಕಾರಣ ಉಪಾಯದಿಂದ ಸಾಧಿಸತಕ್ಕ ಕಾರ್ಯದಲ್ಲಿ ಪರಾಕ್ರಮವನ್ನು ತೋರಿಸಿ ಫಲವಿಲ್ಲ" ಎಂಬುದಾಗಿ ದಮನಕನು ಕರಟಕನಿಗೆ ಹೇಳಿದನು. ಅದನ್ನು ಕೇಳಿ, ಕರಟಕನು "ಹಾಗಾದರೆ ಹೊರಡು, ನಿನಗೆ ಮಂಗಳವಾಗಲಿ" ಎಂದನು.

ತರುವಾಯ ದಮನಕನು ಅಲ್ಲಿಂದ ಹೊರಟು ಪಿಂಗಳಕನ ಬಳಿ ಸಾರ್ದು ನಮಸ್ಕರಿಸಿ ಇಂತೆಂದನು:—"ಪ್ರಭುವೇ! ವಿಪತ್ತನ್ನು ಸೂಚಿಸುವ ದುಃಖಕರವಾದ ಒಂದು ಮಾತನ್ನು ಕೇಳಿದೆನು. ಅದನ್ನು ಕೇಳಿದೊಡನೆಯೇ ಅಲ್ಲಿ ನಿಲ್ಲಲು ಮನಸ್ಸು ಒಡಂಬಡಲಿಲ್ಲ. ಕೂಡಲೇ ಇಲ್ಲಿಗೆ ಬಂದಿರುವೆನು. ಏಕೆಂದರೆ, ವಿಪತ್ತಿನಲ್ಲಿಯೂ, ದಾರಿತಪ್ಪಿ ನಡೆವಾಗಲೂ, ಕಾರ್ಯದ ಸಮಯವು ಮೀರಿದಾಗಲೂ, ತನ್ನನ್ನು ಕೇಳದಿದ್ದರೂ ಹಿತವನ್ನು ಹೇಳುವುದು ನಿಷ್ಕಪಟನಾದ ದೂತನ ಕರ್ತವ್ಯವಾಗಿರುವುದು. ಅರಸನು ಭೋಗವನ್ನು ಅನುಭವಿಸತಕ್ಕವನು. ಕೆಲಸ ಮಾಡುವುದು ಆತನ ಕರ್ತವ್ಯವಲ್ಲ.

ರಾಜಕಾರ್ಯವನ್ನು ಕೆಡಿಸತಕ್ಕ ಮಂತ್ರಿಯು ಪಾತಕಕ್ಕೆ ಗುರಿಯಾಗುವನು. ಇದೀಗ ಮಂತ್ರಿಗಳ ಕರ್ತವ್ಯ. ಪ್ರಭುವಿನ ಪದವಿಯನ್ನು ಬಯಸುವ ಪಾತಕಕ್ಕಿಂತಲೂ ಮಿಗಿಲಾದ ಘೋರ ಪಾಪವಿರುವುದೇ? ಅದಕ್ಕಿಂತಲೂ ಪ್ರಾಣಗಳನ್ನು ಬಿಡುವುದು ಲೇಸು. ತಲೆಯನ್ನು ಕತ್ತರಿಸಿಕೊಳ್ಳುವು ದಾದರೂ ಮೇಲು. ದೇವಾ! ದೇವಾ! ಸ್ವಾಮಿದ್ರೋಹವನ್ನು ಎಂದಿ ಗಾದರೂ ಮಾಡಬಹುದೇ? ಅಂತಹ ದ್ರೋಹಿಯನ್ನು ಉಪೇಕ್ಷಿಸಿರುವುದು ಎಂದಿಗೂ ತರವಲ್ಲ."

ಈ ಮಾತನ್ನು ಕೇಳಿ ಪಿಂಗಳಕನು "ಈಗ ಹೇಳಬೇಕೆಂದಿರುವು ದಾದರೂ ಏನು?" ಎಂಬುದಾಗಿ ಪ್ರಶ್ನೆ ಮಾಡಲಾಗಿ ದಮನಕನು,— "ಸ್ವಾಮಿ! ಇದೋ ಇವನಿರುವನಲ್ಲವೇ ಸಂಜೀವಕನೆಂಬುವವನು. ಇವನು ತಮ್ಮ ವಿಷಯದಲ್ಲಿ ಪಾಪಕರವಾದ ವ್ಯವಹಾರವನ್ನು ನಡೆಯಿಸಬೇಕೆಂದಿರು ವನು. ಅದೇನೆಂದರೆ, ಶ್ರೀಮಂತರಾದ ಮಹಾಸ್ವಾಮಿಯವರ ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿ ಎಂಬೀ ಶಕ್ತಿತ್ರಯವನ್ನು ನಮ್ಮ ಇದಿರಿನಲ್ಲಿ ಅಲ್ಲಗಳೆದು, ಇನ್ನು ಮುಂದೆ ತಾನೇ ರಾಜ್ಯವನ್ನು ಆಳಬೇಕೆಂದಿರುವನು" ಎಂಬುದಾಗಿ ಒಕ್ಕಣಿಸಿದನು. ಈ ಮಾತನ್ನು ಕೇಳಿ ಪಿಂಗಳಕನು ಆಶ್ಚರ್ಯ ದಿಂದ ಮರುಳಾದನು. ಆಗ ದಮನಕನು "ಸ್ವಾಮಿ! ಮಂತ್ರಿಗಳನ್ನೆಲ್ಲ ತೊಲಗಿಸಿ, ಸಕಲ ಕಾರ್ಯಭಾರವನ್ನು ಇವನಿಗೊಬ್ಬನಿಗೇ ವಹಿಸಿದೆ ಯಲ್ಲವೇ? ಇದೇ ದೊಡ್ಡ ತಪ್ಪು. ಏಕೆಂದರೆ:—ಅರಸನೂ ಮಂತ್ರಿಯೂ ಉದಾರಚಿತ್ತರಾಗಿ ಐಕಮತ್ಯದಿಂದಿದ್ದರೆ, ರಾಜ್ಯಲಕ್ಷ್ಮಿಯು ಅವರೀರ್ವರ ಮೇಲೆ ತನ್ನ ಎರಡೂ ಪಾದಗಳನ್ನು ಚೆನ್ನಾಗಿ ಊರಿ ಸ್ಥಿರವಾಗಿ ನಿಲ್ಲು ವಳು. ಅವರಿಬ್ಬರಲ್ಲಿಯೂ ಏಕಾಭಿಪ್ರಾಯವು ಸಡಿಲವಾಯಿತೆಂದರೆ, ಆಗ ಲಕ್ಷ್ಮಿಯು ಸ್ತ್ರೀಜಾತಿಯ ಸಹಜವಾದ ಚಪಲತೆಯನ್ನು ತಳೆದು, ಭಾರವನ್ನು ಸಹಿಸಲಾರದೆ, ಅವರಿಬ್ಬರಲ್ಲಿ ಯಾರನ್ನಾದರೂ ಒಬ್ಬರನ್ನು ಪರಿ ತ್ಯಜಿಸುವುದು ದಿಟ. ಇನ್ನು, ಅರಸನು ಮಂತ್ರಿಯನ್ನೇ ರಾಜ್ಯಕ್ಕೆ ಮುಖ್ಯ ನನ್ನಾಗಿ ಮಾಡಿದನಾದರೆ, ಒಡನೆಯೇ ಆ ಪ್ರಧಾನನಿಗೆ ಅಜ್ಞಾನವು ಕವಿದು, ಮದವು ಉಕ್ಕುವುದು. ಬಳಿಕ ಅವನು ಹೆಮ್ಮೆಯಿಂದ ಕೆಲಸ ಕಾರ್ಯ ಗಳನ್ನು ಮಾಡಲೊಲ್ಲನು. ಇದರಿಂದ ಅರಸನು ಅವನನ್ನು ತೊಲಗಿಸ

ಬೇಕಾಗುವುದು. ಅಧಿಕಾರವನ್ನು ಕಳೆದುಕೊಂಡ ಮಂತ್ರಿಯು 'ರಾಜ್ಯವನ್ನು ಹೇಗಾದರೂ ಸಂಪಾದಿಸಿ ತಾನೇ ಆಳಬಾರದೇ?' ಎಂಬ ಕುತೂಹಲದಿಂದ ರಾಜನ ಪ್ರಾಣಗಳನ್ನು ಅಪಹರಿಸಲು ಎಳಸುವನು. ನೀತಿಜ್ಞರಾದ ಹಿರಿಯರು ಅಂತೆಯೇ ಹೇಳಿರುವರಲ್ಲವೇ?"

"ಮನಮುರಿದ ಸೇವಕನನ್ನೂ, ಅಲ್ಲಾಡುವ ಹಲ್ಲನ್ನೂ, ಹಗೆಯಾದ ಮಂತ್ರಿಯನ್ನೂ ಬುಡಮುಟ್ಟ ಕಿತ್ತುಹಾಕುವುದು ಲೇಸು. ಇಲ್ಲವಾದರೆ ಬಾಧೆಯು ತಪ್ಪುವುದಿಲ್ಲ. ಇನ್ನು ತನಗೆ ಪ್ರಜ್ಞೆಯಿಲ್ಲದೆ ಮಂತ್ರಿಯ ಮೂಲಕವಾಗಿಯೇ ರಾಜಕಾರ್ಯಗಳನ್ನೆಲ್ಲ ನಡೆಯಿಸುತ್ತ ಏಳ್ಗೆಯನ್ನು ಪಡೆದ ಅರಸನು, ಅಂತಹ ಮಂತ್ರಿಯು ಸಿಟ್ಟುಗೊಂಡರೆ, ತನ್ನ ಕಾರ್ಯಗಳು ನಿರಾತಂಕವಾಗಿ ನಡೆಯಲಾರದ ಕಾರಣ ಕುರುಡನಂತೆ ಕಷ್ಟಪಡುವನು. ಯಾವಾಗಲೂ ಮಂತ್ರಿಯನ್ನು ನಿಗ್ರಹಿಸುವುದು ಶಕ್ಯವಲ್ಲ. ಆತನು ಬೇರೂರಿಕೊಂಡರೆ ರಾಜ್ಯಾಂಗಗಳೆಲ್ಲವು ಅವನ ಅಧೀನದಲ್ಲಿಯೇ ನಿಲ್ಲುವುವು. ಸಂಪತ್ತು ಯಾವನ ಮನೋವೃತ್ತಿಯನ್ನಾದರೂ ಕೆಡಿಸದಿರದು. ಇದೇ ಮಹಾತ್ಮರ ಅನುಭವಯುಕ್ತವಾದ ಬೋಧೆ. ಈಗ ಸಂಜೀವಕನಾದರೂ ರಾಜ್ಯತಂತ್ರಗಳನ್ನೆಲ್ಲ ತನ್ನ ಮನಸ್ಸು ಬಂದಂತೆ ಮಾಡತೊಡಗಿರುವನು. ಇದು, ಪ್ರಭುಗಳ ಚಿತ್ತಕ್ಕೆ ವೇದ್ಯವಾಗಿರಬಹುದು. ಸಿರಿಯನ್ನು ಬಯಸದವನು ಲೋಕದಲ್ಲಿ ಯಾವನೂ ಇಲ್ಲ. ಪರನಾರಿಯರಿಗೆ ಸೋಲದವನಾದರೂ ಇರುವನೇ?" ಎಂಬುದಾಗಿ ಬಿತ್ತರಿಸಿದನು.

ಇದನ್ನೆಲ್ಲ ಕೇಳಿ ಪಿಂಗಳಕನು ಸ್ವಲ್ಪ ಹೊತ್ತು ಯೋಚಿಸಿ "ಎಲೆ ಮಂಗಳಕರನೆ! ನೀನು ಹೇಳಿದುದೆಲ್ಲ ದಿಟವಾಗಿಯೇ ಇರಬಹುದು. ಆದರೆ ಸಂಜೀವಕನೆಂದರೆ ನನಗೆ ಬಹಳ ಪ್ರೀತಿ. ನನ್ನ ಹೊರಗಣ ಪ್ರಾಣವೆಂತಲೇ ಅವನನ್ನು ಭಾವಿಸಿರುವೆನು. ಇತ್ತ ಕೇಳು; ಒಬ್ಬನು ಒಮ್ಮೆ ಪ್ರೇಮಾಸ್ಪದನಾದನೆಂದರೆ ಅವನೆಷ್ಟು ಬಗೆಯಿಂದ ಅಪಕಾರ ಮಾಡುತ್ತಿದ್ದರೂ, ಎಂದಿಗೂ ಪ್ರೀತಿಪಾತ್ರನೇ ಸರಿ. ಅನೇಕ ದೋಷಗಳಿಂದ ಕೂಡಿರುವುದಾದರೂ, ದೇಹವು ಯಾರಿಗೆ ಪ್ರಿಯವಲ್ಲ? ಮತ್ತು ಅಪ್ರಿಯಗಳನ್ನು ಮಾಡತಕ್ಕವನಾದರೂ ಇಷ್ಟನು ಯಾವಾಗಲೂ ಇಷ್ಟನೇ ಸರಿ. ಬೆಂಕಿಯು ಮನೆಯಲ್ಲಿರುವ ಸಕಲ ವಸ್ತುಗಳನ್ನು ಸುಡತಕ್ಕುದಾದರೂ, ಅದನ್ನು ಬೇಡವೆಂದು,

ಅಸಡ್ಡೆಯಿಂದ ಒತ್ತಟ್ಟು ಮಾಡಲಾಗುವುದೇ?" ಎಂದನು. ಆಗ ದಮನಕನು, "ಪ್ರಭೋ! ಇದೇ ದೊಡ್ಡ ಪ್ರಮಾದವು. ಮಗನೇ ಆಗಲಿ, ಮಂತ್ರಿಯೇ ಆಗಲಿ, ಸಂಬಂಧವಿಲ್ಲದವನೇ ಆಗಲಿ, ಯಾವನಲ್ಲಿಯೂ ಅರಸು ಹೆಚ್ಚು ಅಕ್ಕರೆಯನ್ನು ತೋರಬಾರದು. ಹಾಗೆ ಮಮತೆಯನ್ನು ಹೊರಪಡಿಸಿದರೆ ಅವನು ರಾಜನ ಸಿರಿಗೆ ಈಡಾಗುವನು. ಸ್ವಾಮಿಯು ಲಾಲಿಸಬೇಕು. ಪಥ್ಯವನ್ನು ಸೇವಿಸುವುದು ಕಷ್ಟ. ಆದರೆ ಅದು ಸೇವಿಸುವ ಕಾಲದಲ್ಲಿ ಹಿತವಲ್ಲದಿದ್ದರೂ ಪರಿಪಾಕದಲ್ಲಿ ಸುಖವನ್ನೇ ಒದವಿಸುವುದು. ಹಿತವಾದವನ್ನು ಹೇಳುವವನೂ ಕೇಳುವವನೂ ಇರುವ ಎಡೆಯಲ್ಲಿ ಸಕಲ ಸಂಪತ್ತುಗಳು ನೆಲೆಸಿರುವುವು. ಈಗ ಮಹಾ ಸ್ವಾಮಿಗಳಾದರೂ ವಂಶಪರಂಪರೆಯಿಂದ ಬಂದ ವಿಧೇಯರಾದ ಸೇವಕರನ್ನು ತೊಲಗಿಸಿದಿರಿ. ಹೊಸದಾಗಿ ಬಂದ ಯಾವನೋ ಒಬ್ಬನಲ್ಲಿ ಸಕಲ ಕಾರ್ಯಭಾರವನ್ನು ಇಟ್ಟು ಗೌರವಿಸಿದಿರಿ. ಇದು ಯುಕ್ತವಲ್ಲ. ಇದರಿಂದಲೇ ಇಷ್ಟೊಂದು ಅನರ್ಥಕ್ಕೆಲ್ಲ ಕಾರಣವಾಯಿತು. ಮೂಲ ಭೃತ್ಯರನ್ನು ತೊಲಗಿಸಿ, ಹೊಸಬರನ್ನು ಸನ್ಮಾನಿಸುವುದು ಯೋಗ್ಯವಲ್ಲ. ರಾಜ್ಯದಲ್ಲಿ ಇದಕ್ಕಿಂತಲೂ ಹೆಚ್ಚಿನ ಪ್ರಮಾದವು ಬೇರೆ ಯಾವುದೂ ಇಲ್ಲ" ಎಂಬುದಾಗಿ ಹೇಳಿದನು.

ಆಗ ಸಿಂಹವು ದಮನಕನನ್ನು ಕುರಿತು ಇಂತೆಂದಿತು:–"ನಿನ್ನ ಮಾತುಗಳು ನನಗೆ ಆಶ್ಚರ್ಯವಾಗಿ ತೋರುತ್ತಿವೆ. ಅಭಯಪ್ರದಾನ ಮಾಡಿ ನಾನಾಗಿಯೇ ಅವನನ್ನು ಇಲ್ಲಿಗೆ ಬರಮಾಡಿಕೊಂಡೆನು. ತಕ್ಕ ರೀತಿಯಿಂದ ಅವನನ್ನು ಅಭಿವೃದ್ಧಿಗೂ ತಂದುದಾಯಿತು. ಆದರೆ ಇವನು ನನಗೆ ದ್ರೋಹಿಯೆಂಬುದನ್ನು ಮಾತ್ರ ನಾನು ಎಷ್ಟು ಮಾತ್ರಕ್ಕೂ ನಂಬಲಾರೆನು." ಅದಕ್ಕೆ ದಮನಕನು ಹೇಳಿದುದೇನೆಂದರೆ;–"ದೇವಾ! ನಾಯಿಯ ಡೊಂಕು ಬಾಲಕ್ಕೆ ಬೆವರು ಬರುವಂತೆ ಮಾಡಿ, ಎಣ್ಣೆ ಹಚ್ಚಿ, ಹಿಸುಕಿ, ಬಗೆಬಗೆಯಿಂದ ಪಾಡುಪಟ್ಟರೂ, ಅದು ನೆಟ್ಟಗೆ ನಿಲ್ಲುವುದುಂಟೇ? ಅಂತೆಯೇ ದುರುಳರು ಯಾವಾಗಲೂ ಉಪಚಾರಗಳನ್ನು ಕೈಕೊಂಡು ಮನ್ನಣೆ ಪಡೆಯುತ್ತಿದ್ದರೂ, ವಕ್ರಸ್ವಭಾವವನ್ನು ಮಾತ್ರ ಬಿಡುವುದೇ ಇಲ್ಲ. ಬೆವರನ್ನು ಹೊರಡಿಸಿ, ಎಣ್ಣೆ ಹಚ್ಚಿ, ದಾರದಿಂದ ಬಿಗಿದು, ಹನ್ನೆರಡು ವರ್ಷಗಳ ವರೆಗೆ ಇಟ್ಟಿದ್ದರೂ, ನಾಯಿ ಬಾಲದ ಡೊಂಕು ಮೊದಲಿನ ಗತಿಗೇ ಬಂದಿತೆಂಬುದಾಗಿ ಹಿರಿಯರು

ಹೇಳಿರುವ ನೀತಿಯುನ್ನು ಕೇಳಲಿಲ್ಲವೇ? ಮತ್ತು ನಾವು ಅಭಿವೃದ್ಧಿಗೆ ತಂದು ಗೌರವಿಸಿದ ಮಾತ್ರದಿಂದಲೇ ದುರ್ಜನರು ನಮ್ಮ ವಿಷಯದಲ್ಲಿ ಪ್ರೀತಿಯುನ್ನು ತೋರುವರೆಂದು ಹೇಳಲಾಗದು. ಅಮೃತವನ್ನೆರೆದು ಬೆಳೆಯಿಸಿದರೂ ಬೇವು ಸವಿಯಾದ ಹಣ್ಣುಗಳನ್ನು ಕೊಡಬಲ್ಲುದೇ? ಆ ಕಾರಣದಿಂದ ಈಗ ನಾನು ಹೇಳುವುದಾದರೂ ಏನೆಂದರೆ, ತಾವು ನಮ್ಮ ಪ್ರಭುಗಳು. ವಂಶಪರಂಪರೆಯಿಂದ ನಮಗೂ ನಿಮಗೂ ಸ್ವಾಮಿ-ಭೃತ್ಯ ಭಾವವು ನಡೆದು ಬಂದಿರುವುದು. ಈ ಕಾರಣದಿಂದ ತಮಗೆ ಯಾವ ವಿಧದಲ್ಲಿಯೂ ನಮ್ಮಿಂದ ಅಪಾಯವು ಸಂಭವಿಸಬಾರದು. ಇದೇ ನಮ್ಮ ಹರಕೆ. ಇದಕ್ಕಾಗಿಯೇ ನಾನು ಇಷ್ಟು ಬಗೆಯಿಂದ ಒತ್ತಾಯ ಮಾಡುತ್ತಿರುವುದು. ಯಾವನು ಹೀನಸ್ಥಿತಿಗೆ ಬರುವುದು ನಮಗೆ ಸಮ್ಮತವಲ್ಲವೋ ಅಂತಹವನು ನಮ್ಮನ್ನು ಕರೆಯದಿದ್ದರೂ ಬಲಾತ್ಕಾರದಿಂದಲಾದರೂ ಹಿತವನ್ನು ಬೋಧಿಸುವುದು ನೀತಿಜ್ಞರಾದ ಹಿರಿಯರ ಕರ್ತವ್ಯ. ಇದಕ್ಕೆ ಪ್ರತಿಯಾಗಿ ನಡೆಯುವುದು ಧರ್ಮವಲ್ಲ. ಆಪತ್ತಿನಿಂದ ಅಡ್ಡಗಿಸುವವನೇ ಮಿತ್ರನು. ದೋಷರಹಿತವಾದುದೇ ಮಾಡಬೇಕಾದ ಕೆಲಸ. ಪತಿಯ ಹಿತವನ್ನೇ ಬಯಸುತ್ತ, ಆತನ ಆಜ್ಞೆಯನ್ನು ತುಸವಾದರೂ ಬೇಸರಗೊಳ್ಳದೆ ನಡೆಯಿಸುತ್ತ, ನೆಳಲಿನಂತೆ ಅನುಸರಿಸುವವಳೇ ಸತಿ. ಸಜ್ಜನರ ಮನ್ನಣೆಗೆ ಪಾತ್ರನಾದವನೇ ಜಾಣ. ಮದವನ್ನು ಉಕ್ಕಿಸದೆ ಮನುಷ್ಯನನ್ನು ಸಹಜಸ್ಥಿತಿಯಲ್ಲಿಟ್ಟಿರುವುದೇ ಸಿರಿ. ಆಸೆಯನ್ನು ತೊರೆಯದವನಿಗೆ ಸುಖವಿಲ್ಲ. ಕಪಟಸ್ವಭಾವದವನಿಗೆ ಗೆಳೆಯರಿಲ್ಲ. ಇಂದ್ರಿಯಧರ್ಮಗಳಿಗೆ ಒಳಗಾದವನು ಗಂಡುಸಲ್ಲ. ಸಂಜೀವಕನು ಪ್ರತಿಕಕ್ಷಿಯಾಗಿ ನಿಂತಿದ್ದರೂ, ನಾನಿಷ್ಟು ಬಗೆಯಿಂದ ಅರಿಕೆ ಮಾಡಿದರೂ, ಮಹಾಸ್ವಾಮಿಯವರು ಅವನನ್ನು ಪರಿತ್ಯಜಿಸಲಾರದೆ ಹೋದರೆ, ಇನ್ನು ಸೇವಕನಾದ ನಾನೇನು ಮಾಡಬಲ್ಲೆನು? ನನ್ನ ಅಪರಾಧವಾದರೂ ಇಲ್ಲವಷ್ಟೆ! ರಾಜನು ರಾಜಕಾರ್ಯಗಳನ್ನೂ ದೇಶಹಿತವನ್ನೂ ಪ್ರಜೆಗಳ ಕಷ್ಟ ಸುಖಗಳನ್ನೂ ವಿಚಾರಿಸದೆ ಕಾಮಪರತಂತ್ರನಾದರೆ ಮದಿಸಿದ ಆನೆಯಂತೆ ಸ್ವತಂತ್ರವಾಗಿ ನಡೆಯತೊಡಗುವನು. ಅದರಿಂದ ಗರ್ವವು ತಲೆಗೆ ಏರಿ, ಆ ಮೂಲಕ ದುಃಖವೆಂಬ ಅಡವಿಯ ಪಾಲಾಗಿ, ತನ್ನ ದೋಷಗಳನ್ನೇ ತಿಳಿಯದೆ, ಪರಿವಾರದ ಮೇಲೆ ತಪ್ಪು ಹೊರಿಸಿ, ಕಡೆಗೆ ಕಷ್ಟಪಡುವನು'' ಎಂಬುದಾಗಿ ಬಹು ವಿಧವಾಗಿ ಒಕ್ಕಣಿಸಿದನು.

ಇದನ್ನು ಕೇಳಿ ಪಿಂಗಳಕನು,—“ಇತರರು ಅಪವಾದ ಹೊರಿಸಿದ ಮಾತ್ರದಿಂದಲೇ ದಂಡಿಸುವುದು ರಾಜನೀತಿಯಲ್ಲ. ತನ್ನ ಮನಸ್ಸಿಗೆ ಯುಕ್ತವಾಗಿ ತೋರಿದಲ್ಲಿ ಶಿಕ್ಷೆರಕ್ಷೆಗಳನ್ನು ವಿಧಿಸುವುದು ರಾಜನ ಧರ್ಮ. ಗುಣದೋಷಗಳನ್ನು ವಿಮರ್ಶಿಸದೆ ಸತ್ಕಾರವನ್ನಾಗಲಿ ಶಿಕ್ಷೆಯನ್ನಾಗಲಿ ವಿಧಿಸಬಾರದು. ಹಾಗೆ ಹೆರರ ಹೇಳಿಕೆಯ ಮೇಲೆ ನಡೆದರೆ, ಹೆಮ್ಮೆಯಿಂದ ಹಾವಿನ ಬಾಯೊಳಗೆ ಕೈನೀಡಿದಂತೆ ತಾನೇ ತನಗೆ ವಿಪತ್ತನ್ನು ಬರಮಾಡಿಕೊಂಡಂತಾಗುವುದು. ನೀನೇ ಯೋಚಿಸಿ ಹೇಳು. ನಿನ್ನ ಮಾತನ್ನು ಕೇಳಿ ಈಗ ನಾನು ಸಂಜೀವಕನನ್ನು ತೊಲಗಿಸಲೇ?” ಎಂದನು.

ಆಗ ದಮನಕನು,-“ದೇವಾ! ಹಾಗೆ ಮಾಡಲಾಗದು. ಇದರಿಂದ ಮಂತ್ರವು ಕೆಡುವುದು. ಹಿರಿಯರೂ ಅಂತೆಯೇ ಹೇಳಿರುವರು. ಗುಪ್ತವಾದ ಮಂತ್ರ ಬೀಜವನ್ನು ಎಂದೆಂದಿಗೂ ಬಯಲಾಗದಂತೆ ಕಾಪಾಡಬೇಕು. ಅದು ರಟ್ಟಾಯಿತೆಂದರೆ ಮರಳಿ ಆ ಬೀಜವು ಮೊಳೆಯಲಾರದು. ಆ ಕಾರಣ ಯಾರಿಗೂ ತಿಳಿಯದಂತೆ ಗುಟ್ಟಾಗಿಯೇ ಕಾರ್ಯವನ್ನು ಸಾಧಿಸಬೇಕು. ಮತ್ತು ಕ್ರಯವಿಕ್ರಯಗಳನ್ನೂ, ಕರ್ತವ್ಯವನ್ನೂ ರಹಸ್ಯವಾಗಿ ಬೇಗನೆ ನಡೆಯಿಸಬೇಕು. ಸಾವಕಾಶ ಮಾಡಿದಲ್ಲಿ ಕಾಲವು ಅದರ ಸಾರವನ್ನು ಹೀರುವುದು. ಆ ಕಾರಣ ಮೊದಲು ಮಾಡಿದ ಕೆಲಸವನ್ನು ಮಹತ್ತರವಾದ ಪ್ರಯತ್ನದಿಂದ ಬೇಗನೆ ನೆರವೇರಿಸಬೇಕು. ಎದೆಗುಂದಿದ ಭಟನು ತನ್ನ ಸಕಲಾಂಗಗಳನ್ನು ಕವಚದಿಂದ ಮರೆಯಿಸಿದ್ದರೂ, ಹಗೆಗಳು ತನ್ನ ದೇಹವನ್ನು ಎಲ್ಲಿ ಭೇದಿಸುವರೋ ಎಂಬ ಶಂಕೆಯು ಮಾತ್ರ ಅಂತರಂಗವನ್ನು ಬಾಧಿಸುತ್ತಲೇ ಇರುವುದು. ಅಂತೆಯೇ ನಾವು ಮಂತ್ರಾಲೋಚನೆಯನ್ನು ಎಷ್ಟು ಗುಟ್ಟಾಗಿ ನಡೆಯಿಸಿದರೂ ಕೆಲವು ಕಾಲದಲ್ಲಿಯೇ ಅದು ರಟ್ಟಾಗುವುದಲ್ಲದೆ, ಬಹಳ ಕಾಲ ರಹಸ್ಯವಾಗಿರುವುದಿಲ್ಲ.”

“ಸಂಜೀವಕನ ದೋಷಗಳು ಮುಂದಟ್ಟಾದರೂ ಅವನೊಡನೆ ಮಾತನಾಡಿ, ತಿಳಿಯ ಹೇಳಿ ತಪ್ಪುಗಳನ್ನು ತಿದ್ದಿ ಸಂಧಿಮಾಡಿಕೊಳ್ಳಬಹುದೆಂಬ ಯೋಚನೆಯು ಸ್ವಾಮಿಯ ಚಿತ್ತದಲ್ಲಿ ತೋರಬಹುದು. ಅದು ಯುಕ್ತವಲ್ಲ. ಏಕೆಂದರೆ, ಒಮ್ಮೆ ಹಗೆಯಾದವನನ್ನು ಮರಳಿ ಸೇರಿಸಿಕೊಳ್ಳುವುದು ಧರ್ಮ

ವಲ್ಲ. ಅದು ಹೇಸರ ಕತ್ತೆಯ ಸೂಲಿನಂತೆ ನಮಗೇ ವಿಪತ್ತನ್ನು ಒಡ್ಡದಿರದು" ಎಂದನು.

ಆಗ ಪಿಂಗಳಕನು "ಒಳ್ಳೆಯದು, ಇದೆಲ್ಲ ಹಾಗಿರಲಿ! ಇವನು ನಮಗೆ ಯಾವ ಅಪಕಾರವನ್ನು ಮಾಡಬಲ್ಲನೋ ಅದನ್ನಾದರೂ ತಿಳಿದುಕೊಳ್ಳು" ಎಂದನು. ಆಗ ದಮನಕನು—"ಸಾಧಕನ ಸಾಧನಗಳನ್ನು ತಿಳಿಯದೆ, ಸಾಮರ್ಥ್ಯವನ್ನು ನಿರ್ಣಯಿಸಲಾಗದು. ಇತ್ತ ಲಾಲಿಸಬೇಕು. ತುಚ್ಛವಾದ ಒಂದು ಟಿಟ್ಟಿಭವು ಗಂಭೀರವಾದ ಸಮುದ್ರವನ್ನೇ ಕಳವಳಗೊಳಿಸಿತಲ್ಲವೇ?" ಎನಲು, ಅದರ ಪರಿಯನ್ನು ವಿವರಿಸುವಂತೆ ಮೃಗರಾಜನು ಕೇಳಲಾಗಿ ದಮನಕನು ಆ ಕಥೆಯನ್ನು ಹೇಳತೊಡಗಿದನು.

## ಆನೆಯ ಕಥೆ

ದಕ್ಷಿಣ ಸಮುದ್ರತೀರದಲ್ಲಿ ಟಿಟ್ಟಿಭದಂಪತಿಗಳು ವಾಸವಾಗಿದ್ದುವು. ಪ್ರಸವಕಾಲವು ಸಮೀಪಿಸಿದೊಡನೆಯೇ ಹೆಣ್ಣು ಹಕ್ಕಿಯು ತನ್ನ ಪ್ರಿಯನನ್ನು ಕುರಿತು—"ನಾಥಾ! ಹೆರಿಗೆಗೆ ಯೋಗ್ಯವಾದ ಒಂದು ರಹಸ್ಯ ಸ್ಥಳವನ್ನು ಹುಡುಕಬೇಕು" ಎಂಬುದಾಗಿ ಮೊರೆ ಇಟ್ಟಿತು. ಆಗ ಗಂಡು ಹಕ್ಕಿಯು "ಎಲೌ ಪ್ರೇಯಸಿ! ಈ ಸ್ಥಳವೇ ಒಕ್ಕಲುತನಕ್ಕೆ ಪ್ರಶಸ್ತವಾಗಿದೆ" ಎನಲಾಗಿ, ಟಿಟ್ಟಿಭಿಯು—"ಅಲೆಯ ನೀರು ಗೂಡಿನಲ್ಲೆಲ್ಲ ತುಂಬಿಕೊಳ್ಳುವುದು. ಹೀಗಾಗಿ ನಮ್ಮ ಹಿಂದಣ ಮೊಟ್ಟೆಗಳೆಲ್ಲ ಹಾಳಾದುವು" ಎಂದಿತು. ಆಗ ಟಿಟ್ಟಿಭವು—"ನಾನು ಹೇಡಿ ಎಂಬುದಾಗಿ ಭಾವಿಸಿದೆಯಾ? ನನ್ನ ಗೂಡಿನಲ್ಲಿರುವ ಮೊಟ್ಟೆಗಳನ್ನು ಅಪಹರಿಸುವುದು ಈ ಸಮುದ್ರನಿಗೆ ಶಕ್ಯವೇ?" ಎನಲು, ಆಗ ಹೆಣ್ಣು ಪಕ್ಷಿಯು—"ಕಾಂತಾ! ನೀನೆಲ್ಲಿ? ಸಮುದ್ರರಾಜನೆಲ್ಲಿ? ಇಷ್ಟು ಮಾತ್ರವಲ್ಲದೆ, ತಾರತಮ್ಯವನ್ನೂ ಯೋಗ್ಯತೆಯನ್ನೂ ವಿಂಗಡಿಸುವ ತಿಳಿವಳಿಕೆಯೂ ಶಾಸ್ತ್ರಜ್ಞಾನವೂ ಉಳ್ಳವನು ಎಂದಿಗೂ ಕೆಡಲಾರನು. ಮತ್ತು ಅಯುಕ್ತಕಾರ್ಯವನ್ನು ಕೈಕೊಳ್ಳುವಿಕೆ, ಬಂಧುದ್ವೇಷ, ಬಲಶಾಲಿಯೊಂದಿಗೆ ಹೋರಾಟ, ಕುಲಟೆಯರಲ್ಲಿ ನಂಬಿಕೆ-ಇವು ನಾಲ್ಕು ಮೃತ್ಯುವಿಗೆ ದ್ವಾರಗಳು" ಎಂಬುದಾಗಿ ಎದೆಗುಂದಿ ಮಾತನಾಡಿತು. ಗಂಡು ಹಕ್ಕಿಯು ಬೇರೊಂದು ಕಡೆಗೆ ಹೋಗಲು ಸಮ್ಮತಿಸಲಿಲ್ಲ. ಹೀಗಾಗಿ ಕಟ್ಟಕಡೆಗೆ ಗಂಡನ ಮಾತಿಗೆ

ಕಟ್ಟುಬಿದ್ದು ಅಲ್ಲಿಯೇ ಇದ್ದು ಪ್ರಸವಕಾಲ ಬರಲು ಅಲ್ಲಿಯೇ ಮೊಟ್ಟೆ ಇಕ್ಕಿತು. ಇವರಿಬ್ಬರ ಸಂವಾದವನ್ನೂ ಆಲಿಸಿ ಹೊಂಚು ಹಾಕಿ ಕೇಳುತ್ತಿದ್ದ ಸಮುದ್ರನು ಆ ಪಕ್ಷಿಯ ಬಲವನ್ನು ತಿಳಿಯುವ ಸಲುವಾಗಿ, ಅದರ ಮೊಟ್ಟೆಗಳನ್ನು ಅಪಹರಿಸಿದನು. ಆಗ ಹೆಣ್ಣು ಹಕ್ಕಿಯು—"ಕಾಂತಾ! ನಾನು ಮೊದಲೇ ಹೇಳಿದೆನಲ್ಲವೆ? ನನ್ನ ಕಷ್ಟವು ತೀರಲಿಲ್ಲ. ಸಮುದ್ರನು ನನ್ನ ಮೊಟ್ಟೆಗಳನ್ನು ಅಪಹರಿಸಿಯೇ ಬಿಟ್ಟನು" ಎಂಬುದಾಗಿ ಪ್ರಲಾಪಿಸಿತು. ಆ ಮಾತನ್ನು ಕೇಳಿ ಗಂಡು ಹಕ್ಕಿಗೆ ಕೋಪಬಂದಿತಾದರೂ ತಾಳ್ಮೆಯಿಂದ—"ಕಾಂತೆ! ಹೆದರದಿರು" ಎಂದು ಹೇಳಿ, ಹಕ್ಕಿಗಳ ಹಿಂಡನ್ನೆಲ್ಲ ಸಂಗಡ ಕರೆದುಕೊಂಡು ಪಕ್ಷಿರಾಜನಾದ ಗರುಡನ ಬಳಿಸಾರ್ದು—"ದೇವಾ! ಯಾವ ಅಪರಾಧವೂ ಇಲ್ಲದೆ ನಾನು ನನ್ನ ಮನೆಯಲ್ಲಿಯೇ ಇದ್ದರೂ ಸಮುದ್ರನು ನನ್ನ ಮೊಟ್ಟೆಗಳನ್ನೆಲ್ಲ ಅಪಹರಿಸಿ ಈ ರೀತಿ ಕಿರುಕುಳಕ್ಕೆ ಗುರಿಮಾಡಿರುವನು" ಎಂಬುದಾಗಿ ತನ್ನ ವೃತ್ತಾಂತವನ್ನೆಲ್ಲ ಬಿನ್ನಯಿಸಿತು.

ಆ ಮೊರೆಯನ್ನು ಕೇಳಿ ಗರುತ್ಮಂತನು ತನ್ನ ಪ್ರಭುವೂ, ಪ್ರಪಂಚದ ಸೃಷ್ಟಿ, ಸ್ಥಿತಿ, ಪ್ರಳಯಗಳಿಗೆ ಕಾರಣಭೂತನೂ ಎನಿಸಿದ ಭಗವಂತನಾದ ಶ್ರೀಮನ್ನಾರಾಯಣನಲ್ಲಿ ಅರಿಕೆಮಾಡಲಾಗಿ, ಆತನು ಟಿಟ್ಟಿಭದ ಮೊಟ್ಟೆಗಳನ್ನು ಹಿಂದಕ್ಕೆ ಕೊಡುವಂತೆ ಸಮುದ್ರನಿಗೆ ಆಣತಿಯಿತ್ತನು. ಬಳಿಕ ಮಹಾ ವಿಷ್ಣುವಿನ ಅಪ್ಪಣೆಯನ್ನು ತಲೆಯ ಮೇಲೆ ಧರಿಸಿ, ಸಮುದ್ರನು ಟಿಟ್ಟಿಭ ಪಕ್ಷಿಗೆ ಅದರ ಮೊಟ್ಟೆಗಳನ್ನು ಕೊಟ್ಟನು. ಆ ಕಾರಣ 'ಸಾಧಕನ ಸಾಧನಗಳನ್ನು ತಿಳಿಯದೆ ಸಾಮರ್ಥ್ಯವನ್ನು ನಿರ್ಣಯಿಸಲಾಗದು' ಎಂಬುದಾಗಿ ಹೇಳಿದೆನು. ತನ್ನ ಶಕ್ತಿಗೆ ಮೀರಿದವನೆಂಬುದನ್ನು ತಿಳಿಯದೆ ಹಗೆಯೊಂದಿಗೆ ಹೋರಾಡ ತೊಡಗುವವನು, ಟಿಟ್ಟಿಭದೊಂದಿಗೆ ಹೋರಾಡಿದ ಸಮುದ್ರನಂತೆ ತಿರಸ್ಕಾರಕ್ಕೆ ಗುರಿಯಾಗುವನು."

ಹೀಗೆ ದಮನಕನು ಹೇಳಿದ ಮಾತುಗಳನ್ನೆಲ್ಲ ಕೇಳಿ, ಪಿಂಗಳಕನು—"ಸಂಜೀವಕನು ದ್ರೋಹಿಯೆಂಬುದಾಗಿ ತಿಳಿಯುವುದು ಹೇಗೆ?" ಎನಲು, ಆಗ ದಮನಕನು "ಎಂದಿಗೆ ಅವನು ಕೆಚ್ಚಿನಿಂದ ತಲೆಯನ್ನು ಆಡಿಸುತ್ತ ಬೆದರಿದವನಂತೆ ಕೊಂಬುಗಳಿಂದ ತಿವಿಯುವುದಕ್ಕೆ ಸಿದ್ಧನಾಗಿ ಹತ್ತಿರ ಬರುವನೋ ಆಗಲೇ ಪ್ರಭುಗಳು ಇವನು ದ್ರೋಹಿಯೋ ಅಲ್ಲವೋ ಎಂಬು

ದನ್ನು ತಿಳಿಯುಬಹುದು'' ಎಂಬುದಾಗಿ ಪಿಂಗಳಕನೊಡನೆ ಹೇಳಿ, ಅಲ್ಲಿಂದ ಹೊರಟು, ಹೆದರಿದವನಂತೆ ಮೆಲ್ಲಮೆಲ್ಲನೆ ಅಡಿ ಇಡುತ್ತ, ಸಂಜೀವಕನ ಬಳಿಗೆ ಬಂದು ಕಾಣಿಸಿಕೊಂಡನು.

ಸಂಜೀವಕನು ಅಕ್ಕರೆಯಿಂದ ಕುಶಲಪ್ರಶ್ನೆಗಳನ್ನು ಮಾಡಿ-''ಮಂಗಳ ಕರನೆ! ಇದೇನು? ಅಪೂರ್ವವಾಗಿ ಇತ್ತಬಂದೆ?'' ಎಂದನು. ಆಗ ದಮನಕನು ನಿಟ್ಟುಸಿರು ಬಿಟ್ಟು—''ಸೇವಕರಿಗೆ ಕುಶಲವೆಂಬುದು ಎತ್ತಣದು? ಏಕೆಂದರೆ, ಅರಸನ ಊಳಿಗವನ್ನು ಕೈಕೊಂಡವನ ಸಂಪತ್ತುಗಳು ಇತರರ ಅಧೀನ. ಮನಸ್ಸಿಗೆ ಸುಖವೆಂಬುದು ಕನಸಿನ ಗಂಟು. ತನ್ನ ಪ್ರಾಣಗಳ ಮೇಲೆಯೇ ತನಗೆ ನಂಬುಗೆ ಇಲ್ಲ. ಇನ್ನು, ಹಣವನ್ನು ಗಳಿಸಿ ಅದರಿಂದ ಕೊಬ್ಬದವನೂ ಇರುವನೇ? ವಿಷಯಲಂಪಟನು ಆಪತ್ತಿನಿಂದ ಪಾರಾಗುವುದು ಉಂಟೇ? ಕಾಮಿನಿಯರ ವಿಲಾಸಕ್ಕೆ ಮರುಳಾಗದವನಾದರೂ ಯಾವನು? ರಾಜನಿಗೆ ಪ್ರೇಮಪಾತ್ರನು ಯಾವನು? ತಿರುಕನಿಗೂ ಗೌರವವು ದೊರೆಯುವುದೇ? ದುರುಳರ ಬಲೆಗೆ ಸಿಲುಕಿ ಹೊರಬಿದ್ದವನೂ ಇರುವನೇ?'' ಎಂಬುದಾಗಿ ವ್ಯಂಗ್ಯ ರೀತಿಯಿಂದ ಎಂಜಲು ನುಂಗುತ್ತ ಮಾತನಾಡಿತು. ಆಗ ನಿಷ್ಕಪಟಿ ಸಂಜೀವಕನು—''ಮಿತ್ರನೇ! ನಿನ್ನ ಮಾತುಗಳೊಂದೂ ನನಗೆ ಅರ್ಥ ವಾಗಲಿಲ್ಲ. ಸ್ಪಷ್ಟವಾಗಿ ಹೇಳು'' ಎಂದನು. ದಮನಕನು ಮತ್ತೊಮ್ಮೆ ನಿಟ್ಟುಸಿರು ಬಿಟ್ಟು-''ಅಯ್ಯೋ! ನನ್ನ ದುರದೃಷ್ಟವನ್ನು ಏನೆನ್ನಲಿ? ಇತ್ತ ಕೇಳು. ಸಮುದ್ರದಲ್ಲಿ ಕೊಚ್ಚಿಹೋಗುವಾಗ ಒಂದು ಹಾವು ಆಸರೆ ಸಿಕ್ಕಿದರೆ, ಹಿಡಿ ಯಲೂ ಆರದೆ ಬಿಡಲೂ ಆರದೆ ಒದ್ದಾಡುವಂತೆ, ನನ್ನ ಸ್ಥಿತಿಯು ವಿಚಿತ್ರ ವಾಗಿದೆ. ನನಗೊಂದೂ ತೋರುವುದಿಲ್ಲ. ಹೇಳಿದೆನೆಂದರೆ, ಅತ್ತ ಅರಸನಲ್ಲಿ ನಂಬುಗೆಗೆಡುವುದು; ಹೇಳದೆ ಸುಮ್ಮನಿರೋಣವೆಂದರೆ, ಇತ್ತ ಆಪ್ತಬಂಧುವು ಹಾಳಾಗುವನು. ಆಹಾ! ಎಂತಹ ಕಿರುಕುಳಕ್ಕೆ ಸಿಲುಕಿದೆನು? ಏನು ಮಾಡಲಿ? ಎಲ್ಲಿ ಹೋಗಲಿ? ನನ್ನ ದುಃಖಕ್ಕೆ ಪಾರವೇ ಇಲ್ಲವಲ್ಲಾ!'' ಎಂದು ಬಾರಿಬಾರಿಗೂ ನಿಟ್ಟುಸಿರುಬಿಡುತ್ತ ಸುಮ್ಮನೆ ಕುಳಿತನು. ಆಗ ಸಂಜೀವಕನು-''ಮಿತ್ರನೆ! ನಿನ್ನ ಮನಸ್ಸಿನಲ್ಲಿರುವುದನ್ನು ವಿಶದವಾಗಿ ಹೇಳು'' ಎಂಬುದಾಗಿ ಮತ್ತೆ ಪ್ರಶ್ನೆಮಾಡಿದನು.

ಆಗ ದಮನಕನು ಕೊರಳನ್ನು ಸರಿಪಡಿಸಿಕೊಂಡು ರಹಸ್ಯವಾಗಿ ಮೆಲ್ಲಮೆಲ್ಲನೆ—''ಇದೊಂದು ರಾಜರಹಸ್ಯ. ರಟ್ಟಾಯಿತೆಂದರೆ ನನ್ನ

ಪ್ರಾಣವು ಉಳಿಯುವಂತಿಲ್ಲ. ಜೋಕೆ! ಯಾರಲ್ಲಿಯೂ ಉಸಿರಬಾರದು. ಇತ್ತ ಕೇಳು. ನೀನು ನಮ್ಮ ಭರವಸೆಯಿಂದ ಇಲ್ಲಿ ಬಂದವನಲ್ಲವೇ? ನನಗೆ ಪರಲೋಕದ ಭೀತಿಯುಂಟು. ಆ ಕಾರಣ ನಿನಗೆ ಸಮಯದಲ್ಲಿ ಹಿತವನ್ನು ಹೇಳಲೇ ಬೇಕು. ನಮ್ಮ ದೊರೆಯ ಬುದ್ಧಿಯು ದಿನಗಳು ಕಳೆದ ಹಾಗೆಲ್ಲ ವಿಚಿತ್ರವಾಗಿ ಮಾರ್ಪಡುತ್ತಿದೆ. 'ಸಂಜೀವಕನನ್ನು ಕೊಂದು ನನ್ನ ಪರಿವಾರಕ್ಕೆಲ್ಲ ಔತಣಮಾಡಿಸುವೆನು' ಎಂಬುದಾಗಿ ಪ್ರತಿಜ್ಞೆಮಾಡಿ, ನನ್ನೊಂದಿಗೆ ರಹಸ್ಯವಾಗಿ ಹೇಳಿದನು. ಅಹಾ! ಎಂತಹ ಘೋರವಾದ ಪ್ರತಿಜ್ಞೆ!" ಎಂಬುದಾಗಿ ಹೇಳಿದನು.

ಈ ಮಾತು ಕಿವಿಯಲ್ಲಿ ಬಿದ್ದೊಡನೆಯೇ ಸಂಜೀವಕನು ಬೆಪ್ಪನಾಗಿ ಮರುಗತೊಡಗಿದನು. ಆಗ ಮರಳಿ ದಮನಕನು—"ಮಿತ್ರನೆ! ಚಿಂತಿಸಬೇಡ. ಸಮಯದಲ್ಲಿ ಹೀಗೆ ಎದೆಗುಂದಿ ಕುಳಿತರೇನಾಗುವುದು? ಧೈರ್ಯವನ್ನು ತಳೆದು, ಸಮಯವರಿತು ನಿನ್ನ ಕರ್ತವ್ಯವನ್ನು ನೀನು ಮಾಡು. ಬಿಡಬೇಡ" ಎಂಬುದಾಗಿ ಸೂಚಿಸಿದುದನ್ನು ಕೇಳಿ, ಸಂಜೀವಕನು ಕ್ಷಣಕಾಲ ಯೋಚಿಸಿ, ತನ್ನೊಳಗೆ ತಾನೇ ಇಂತೆಂದನು:—"ಇದೂ ಸರಿಯೇ. ಹಿರಿಯರೂ ಅಂತೆಯೇ ಹೇಳಿರುವರು. ಸಾಮಾನ್ಯವಾಗಿ ಅರಸರು ಅಯೋಗ್ಯರನ್ನೇ ವೃದ್ಧಿಗೆ ತರುವರು. ಹಣವು ಜಿಪುಣನಲ್ಲಿಯೇ ಸೇರುವುದು. ದೇವರು ಕೂಡ ಬೆಟ್ಟಗಳಲ್ಲಿಯೂ ಕಡಲಿನಲ್ಲಿಯೂ ಹೆಚ್ಚಾಗಿ ಮಳೆ ಸುರಿಸುವನು. ಸಿರಿಯು ನೀಚನನ್ನೇ ಒಲಿಯುವಳು. ಸರಸ್ವತಿಯು ಕುಲಗೇಡಿಯನ್ನು ಓಲಯಿಸುವಳು. ಒಂದು ವೇಳೆ ಇದು ದುರುಳರು ಹೂಡಿದ ತಂತ್ರವಾಗಿರಬಹುದೇ? ಅಥವಾ ರಾಜನೇ ಈ ರೀತಿ ನಿಶ್ಚಯಿಸಿದನೇ? ಎಂಬ ವಿಷಯವನ್ನು ಯಾವ ಬಗೆಯಿಂದಲೂ ಗೊತ್ತುಪಡಿಸಲು ಬರುವಂತಿಲ್ಲ. ಏಕೆಂದರೆ, ದುರುಳರು ಆಶ್ರಯಮಹಿಮೆಯಿಂದ ಸಜ್ಜನರಂತೆಯೇ ಕಾಣಿಸುವರು. ಕಾಮಿನಿಯರ ಕಂಗಳಲ್ಲಿ ತೀವಿದ ಕಾಡಿಗೆಯು ಸಹಜವಾಗಿಯೇ ಮಲಿನವಾಗಿದ್ದರೂ ವಿಶೇಷವಾಗಿ ಶೋಭಿಸುವುದಿಲ್ಲವೇ? ಅಕಟಾ! ಈ ವಿಪತ್ತು ನನಗೆ ಏಕೆ ಸಂಭವಿಸಿತು? ನಾನು ಎಷ್ಟು ನಿಷ್ಕಪಟವರ್ತನದಿಂದ ಸೇವಿಸಿದರೂ ಅರಸನು ಮಾತ್ರ ಸಂತೋಷಿಸದಿರುವುದು ಆಶ್ಚರ್ಯವೇ ಸರಿ. ಇದು ನನ್ನ ದುರದೃಷ್ಟವಲ್ಲದೆ ಬೇರೆಯಲ್ಲ. ಈ

ವಿಷಯದಲ್ಲಿ ಹೆರರನ್ನು ದೂರಿ ಫಲವಿಲ್ಲ. ಅನುದಿನವೂ ಸೇವೆಯನ್ನು ಕೈಕೊಳ್ಳುತ್ತಿದ್ದರೂ ವೈರವನ್ನು ಸಾಧಿಸುವನೆಂದರೆ ವಿಚಿತ್ರವಲ್ಲವೇ? ಇದು ಹೇಗೆ ಸಂಭವಿಸಿತೆಂಬುದಾಗಿ ಊಹಿಸಲೂ ಸಾಧ್ಯವಿಲ್ಲ. ಯಾವುದಾದರೊಂದು ನಿಮಿತ್ತದಿಂದ ಸಿಟ್ಟಾಗಿದ್ದರೆ, ಆ ನಿಮಿತ್ತವು ತೀರಿದೊಡನೆಯೇ ಸಿಟ್ಟು ಇಳಿದುಹೋಗುವುದು. ನಿಷ್ಕಾರಣವಾಗಿ ಸಿಟ್ಟಾದರೆ ಅಂತಹವನನ್ನು ಸಮಾಧಾನಗೊಳಿಸುವುದಾದರೂ ಹೇಗೆ? ನಾನು ಅರಸನಿಗೆ ಮಾಡಿದ ಅಪರಾಧವಾದರೂ ಯಾವುದು? ಅಥವಾ ಅಪರಾಧವಿದ್ದೇ ತೀರಬೇಕೆಂಬ ನಿಯಮವೂ ಇಲ್ಲವಷ್ಟೆ! ಅರಸರು ನಿಮಿತ್ತವಿಲ್ಲದೆಯೇ ಕೋಪಿಸಿಕೊಳ್ಳುವರು."

ಹೀಗೆ ಮರುಗುತ್ತಿರಲಾಗಿ ದಮನಕನು ಸಂಜೀವಕನನ್ನು ಕುರಿತು—"ಹಾಗಲ್ಲ. ಅದರ ವಿವರವನ್ನು ನಾನು ಹೇಳುವೆನು, ಕೇಳು. ಚಪಲಚಿತ್ತರಾದ ಅರಸನಿಗೆ ವಿವೇಕಿಗಳೂ ಬುದ್ಧಿಶಾಲಿಗಳೂ ಎನಿಸಿದ ಮಿತ್ರರ ಉಪಕಾರವು ದ್ವೇಷವಾಗಿ ಪರಿಣಮಿಸುವುದು. ಮತ್ತೆ ಕೆಲವರು ಪ್ರತ್ಯಕ್ಷವಾಗಿ ಅಪಕಾರ ಮಾಡಿದ್ದರೂ ಅವರ ಮೇಲೆ ದಿನದಿನಕ್ಕೂ ಪ್ರೀತಿಯು ಹೆಚ್ಚುವುದು. ಆಹಾ! ಈ ಅರಸರ ನಡೆವಳಿಯು ವಿಚಿತ್ರ! ಏನೊಂದು ವಿಚಿತ್ರವೋ ನಾನರಿಯೆ! ಸೇವಾಧರ್ಮವು ಇಂತಹುದೆಂದು ತಿಳಿಯಬರುವಂತಿಲ್ಲ. ಇದರ ಗುಟ್ಟನ್ನು ಯೋಗಿಗಳೂ ಅರಿಯರು. ದುರುಳರಿಗೆ ನೂರಾರು ಉಪಕಾರಗಳನ್ನು ಮಾಡಿದರೂ ಫಲವಿಲ್ಲ. ಮೂರ್ಖರಿಗೆ ಸಾವಿರ ಬಗೆಯಿಂದ ನೀತಿಯನ್ನು ತಿಳಿಸಿದರೂ ಪ್ರಯೋಜನವಿಲ್ಲ. ತಿಳಿವಳಿಕೆ ಇಲ್ಲದ ಹೆಡ್ಡನಿಗೆ ಎಷ್ಟುಬಗೆಯಿಂದ ಬುದ್ಧಿ ಕಲಿಸಿದರೂ ವ್ಯರ್ಥವೇ ಸರಿ. ಗಂಧದ ಮರಗಳಲ್ಲಿ ನಾಗರ ಹಾವುಗಳು ಸುತ್ತಿಕೊಂಡಿರುತ್ತವೆ. ಕಮಲಗಳಿಂದ ಕಂಗೊಳಿಸುವ ನೀರಿನಲ್ಲಿ ಮೊಸಳೆಗಳು ವಾಸಮಾಡಿಕೊಂಡಿರುತ್ತವೆ. ಹೆರರ ಸುಖವನ್ನು ಹೋಗಲಾಡಿಸಲು ದುರ್ಜನರು ಕಾದಿರುತ್ತಾರೆ. ಸುಖಗಳಿಗೆ ವಿಘ್ನಗಳು ತಪ್ಪಿದುದೇ ಅಲ್ಲ. ಗಂಧದ ಮರದ ಬುಡವನ್ನು ಹಾವುಗಳು ಆಕ್ರಮಿಸಿಕೊಂಡಿರುತ್ತವೆ. ತುಂಬಿಗಳು ಹೂವುಗಳನ್ನು ಮುತ್ತಿಕೊಂಡಿವೆ. ಕೊಂಬೆಗಳಲ್ಲಿ ಎಲ್ಲಿ ನೋಡಿದರೂ ಮಂಗಗಳೇ ಸೇರಿವೆ. ತುದಿಯ ಮೇಲೆ ಹಕ್ಕಿಗಳು ತಂಡತಂಡವಾಗಿವೆ.

ಒಟ್ಟಿನ ಮೇಲೆ ಗಂಧದ ಮರದ ಯಾವ ಭಾಗವನ್ನಾದರೂ ದುಷ್ಟ ಪ್ರಾಣಿಗಳು ಆಕ್ರಮಿಸದೆ ಇಲ್ಲ" ಎಂಬುದಾಗಿ ಹೇಳಿತು.

ಆಗ ಸಂಜೀವಕನು ಹೇಳತೊಡಗಿದನು:—"ನಮ್ಮ ಒಡೆಯನ ಮಾತಿನಲ್ಲಿ ಜೇನು ತೊಟ್ಟಿಕ್ಕುವುದು. ಹೃದಯದಲ್ಲಿ ತುಂಬ ವಿಷವು ತುಳುಕುತ್ತಿರಬೇಕು. ಏಕೆಂದರೆ, ದೂರದಲ್ಲಿ ಬರುತ್ತಿರುವಾಗಲೇ ಕೈಯೆತ್ತಿ ಕರೆದು, ಆನಂದಬಾಷ್ಪವನ್ನು ಸುರಿಸುತ್ತ, ತಾನು ಕುಳಿತಿರುವ ಪೀಠದಲ್ಲಿ ಅರ್ಧಭಾಗವನ್ನು ಬಿಟ್ಟು ಕೊಟ್ಟು, ಸಂತೋಷದಿಂದ ಬಿಗಿದಪ್ಪಿ, ಎಷ್ಟೋ ಉತ್ಸಾಹವನ್ನು ಹೊರಪಡಿಸಿ, ಯೋಗಕ್ಷೇಮಗಳನ್ನು ವಿಚಾರಿಸಿ, ತನ್ನ ಕಷ್ಟಸುಖಗಳನ್ನೆಲ್ಲ ವಿವರಿಸಿ, ಎಷ್ಟೋ ಬಗೆಯಿಂದ ಹೊರಗೆ ಅಮೃತವನ್ನು ಸೂಸುವನಲ್ಲವೇ? ಇವನ ಎದೆಯಲ್ಲಿ ವಿಷವೇ ತುಂಬಿರುವುದು. ಇಂತಹ ಕಪಟವರ್ತನದ ಜಾಣ್ಮೆಯನ್ನು ಈತನು ಎಲ್ಲಿ ಕಲಿತನೋ ಕಾಣೆನು. ದಾಟಲಾಗದ ಕಡಲಿಗೆ ಹಡಗು, ಕತ್ತಲೆಗೆ ದೀಪ, ಗಾಳಿಯಿಲ್ಲದಿರುವಾಗ ಬೀಸಣಿಗೆ, ಮದವೇರಿದ ಆನೆಗಳ ಸೊಕ್ಕನ್ನು ಮುರಿಯುವ ಸಲುವಾಗಿ ಅಂಕುಶ, ಈ ರೀತಿಯಾಗಿ ಬ್ರಹ್ಮನು ಉಪಾಯಗಳನ್ನು ಕಲ್ಪಿಸದಿರುವುದು ಈ ಲೋಕದಲ್ಲಿ ಯಾವುದೂ ಇಲ್ಲ. ಆದರೆ ದುರುಳರ ಚಿತ್ತವೃತ್ತಿಯನ್ನು ಮಾರ್ಪಡಿಸುವ ವಿಷಯದಲ್ಲಿ ಮಾತ್ರ ಆ ಪರಮಾತ್ಮನ ಪ್ರಯತ್ನವೂ ಭಗ್ನವಾಯಿತೆಂತಲೇ ತಿಳಿಯುವೆನು."

ತರುವಾಯ ಸಂಜೀವಕನು ಬಿಸುಸುಯ್ದು ಮರಳಿ ಈ ಪರಿ ಹೇಳತೊಡಗಿದನು—"ಸಸ್ಯಭಕ್ಷಕನಾದ ನನ್ನನ್ನು ಕೊಲ್ಲುವುದು ಸಿಂಹಕ್ಕೆ ತಕ್ಕುದೇ? ನಾನೇನು ಇದಕ್ಕೆ ಸರಿಯೇ? ಸಾಟಿಯೇ? ಕಷ್ಟ! ಬಹು ಕಷ್ಟ! ಏಕೆಂದರೆ, 'ಹಣದಲ್ಲಿಯೂ ಬಲದಲ್ಲಿಯೂ ಸಮಾನರೆನಿಸಿದವರಿಗೆ ವಿವಾದವು ವಿಹಿತವಾಗಿರುವುದು.' ನಾನು ಯಾವುದರಲ್ಲಿಯೂ ಇದಕ್ಕೆ ಸಮನಲ್ಲ. ಹಣವಾಗಲಿ ಬಲವಾಗಲಿ ಸಮಾನವಾಗಿಲ್ಲದಿದ್ದರೆ, ಅಂತಹವರಿಗೆ ಪರಸ್ಪರ ವಿವಾದವು ಯುಕ್ತವಲ್ಲವಲ್ಲಾ! ನನ್ನ ಮೇಲೆ ಯಾರು ಯಾವ ಚಾಡಿಯನ್ನು ಹೇಳಿರುವರೋ ತಿಳಿಯಲಿಲ್ಲ. ಇಲ್ಲವಾದರೆ ಅರಸನಿಗೆ ಇಷ್ಟೊಂದು ಸಿಟ್ಟುಬರಲು ಕಾರಣವಿಲ್ಲ. ಭೇದವನ್ನು ತಳೆದ ಅರಸನಿಂದ ಯಾವಾಗಲೂ ಭಯವು ಸಿದ್ಧವೇ ಸರಿ. ಏಕೆಂದರೆ, 'ಮುರಿದು

ಹೋದ ಪಳುಕಿನ ಕಡಗವನ್ನು ಮರಳಿ ಒಟ್ಟುಗೂಡಿಸಲು ಯಾರಿಗಾದರೂ ಸಾಧ್ಯವೇ? ಅದರಂತೆಯೇ ಮಂತ್ರಿಯ ಕುತಂತ್ರದಿಂದ ಮುರಿದ ರಾಜನ ಮನೋವೃತ್ತಿಯನ್ನು ಸರಿಪಡಿಸುವುದೂ ಅಶಕ್ಯವೇ ಸರಿ. ಸಿಡಿಲು, ರಾಜನ ಮನೋವೃತ್ತಿ, ಇವೆರಡೂ ಮಹತ್ತರವಾದ ಭಯವನ್ನುಂಟುಮಾಡತಕ್ಕುವು. ಸಿಡಿಲು ಮಾತ್ರ ಒಂದೆಡೆಯಲ್ಲಿಯೇ ಬೀಳುವುದು. ಮತ್ತೊಂದು ಇಂತಹ ಕಡೆಯಲ್ಲಿಯೇ ಇಂತಹ ಸಮಯದಲ್ಲಿಯೇ ಬೀಳುವುದೆಂಬ ನಿಯಮವಿಲ್ಲ. ಎಲ್ಲಿ ಯಾವಾಗ ಬೇಕಾದರೂ ಬೀಳುವುದು. ಆ ಕಾರಣದಿಂದ ಇನ್ನು ಈ ವಿಷಯದಲ್ಲಿ ಚಿಂತಿಸಿ ಫಲವಿಲ್ಲ. ಯುದ್ಧದಲ್ಲಿ ಸಾಯುವುದೇ ಲೇಸು. ಈಗ ಆತನ ಅಪ್ಪಣೆಯನ್ನು ಅನುವರ್ತಿಸುವುದು ಎಷ್ಟು ಮಾತ್ರಕ್ಕೂ ತರವಲ್ಲ. ಅದು ಹೇಡಿಯ ಲಕ್ಷಣ. ಏಕೆಂದರೆ, ಯುದ್ಧದಲ್ಲಿ ಮಡಿದೆನಾದರೆ ಸ್ವರ್ಗವು ಸಿಕ್ಕುವುದು. ಒಂದು ವೇಳೆ ನಾನೇ ಹಗೆಯನ್ನು ಗೆದ್ದೆನಾದರೆ ಸುಖವು ಸಿದ್ಧವಾಗಿಯೇ ಇರುವುದು. ಇವೆರಡು ಗುಣಗಳು ಶೂರರಿಗೆ ದೊರೆಯುವುದು ಕಷ್ಟ. ಇದೀಗ ಯುದ್ಧಕ್ಕೆ ತಕ್ಕ ಸಮಯ. ಹಿರಿಯರೂ ಅಂತೆಯೇ ಹೇಳಿರುತ್ತಾರೆ.''

''ಈಗ ನಾನು ಯುದ್ಧಮಾಡದಿದ್ದರೂ ಸಾಯುವುದೇನೋ ದಿಟ. ಯುದ್ಧ ಮಾಡಿದರಂತೂ ಬದುಕುವಂತಿಲ್ಲ. ಇದೇ ಯುದ್ಧಕ್ಕೆ ಯೋಗ್ಯವಾದ ಕಾಲವಲ್ಲವೇ? ಯುದ್ಧ ಮಾಡದಿದ್ದರೂ ತನಗೆ ಯಾವ ಹಿತವೂ ದೊರೆಯದಿರುವಾಗ ಪ್ರಜ್ಞಾವಂತನು ಹಗೆಯೊಡನೆ ಹೋರಾಡಿ ಸಾಯುವುದೇ ಲೇಸಲ್ಲವೇ? ಗೆದ್ದರೆ ರಾಜ್ಯಲಕ್ಷ್ಮಿಯನ್ನು ಮದುವೆಯಾಗಬಹುದು. ಸತ್ತರಂತೂ ದೇವವಿಲಾಸಿನಿಯರು ಸಿದ್ಧರಾಗಿಯೇ ಇರುವರು. ಈ ದೇಹವೂ ಶಾಶ್ವತವಲ್ಲ. ಯಾವ ಕ್ಷಣದಲ್ಲಿ ಏನು ಸಂಭವಿಸುವುದೋ, ಬಲ್ಲವರಾರು? ಮರಣವಾದರೇನು, ರಣವಾದರೇನು? ಇದಕ್ಕೇಕೆ ಇಷ್ಟು ಯೋಚನೆ!''

ಹೀಗೆ ಯೋಚಿಸಿ, ದಮನಕನನ್ನು ಕುರಿತು—''ಮಿತ್ರನೆ! ಒಳ್ಳೆಯದು. ಪಿಂಗಳಕರಾಯನು ನನ್ನನ್ನು ಕೊಲ್ಲಬೇಕೆಂದಿರುವನೆಂಬುದಾಗಿ ಹೇಳಿದೆಯಲ್ಲವೇ? ಅದನ್ನು ನಾನು ತಿಳಿಯುವುದಾದರೂ ಹೇಗೆ?'' ಎಂದಿತು. ಆಗ ದಮನಕನು—''ಆತನು ಬಾಯ್ದೆರೆದು ಬಾಲವನ್ನು

ಮೇಲಕ್ಕೆತ್ತಿ, ಕಿವಿಗಳನ್ನು ನೆಟ್ಟಗೆ ನಿಲ್ಲಿಸಿ, ಮುಂಗಾಲನ್ನು ಮೇಲಕ್ಕೆತ್ತಿ, ಯಾವಾಗ ನಿನ್ನನ್ನು ನೋಡುವನೋ ಆ ಸಮಯದಲ್ಲಿ ನೀನೇ ಮೊದಲು ನಿನ್ನ ಪರಾಕ್ರಮವನ್ನು ತೋರಿಸು. ಹೆದರಬೇಡ. ಏಕೆಂದರೆ, 'ಬಲಶಾಲಿಯಾಗಿದ್ದರೂ ತೇಜೋಹೀನನಾದರೆ ಎಲ್ಲರೂ ಅವನನ್ನು ಹೀಯಾಳಿಸುವರಲ್ಲವೇ?' ಲೋಕದಲ್ಲಿ ಬೂದಿಯ ಮೇಲೆ ನಿರ್ಭಯವಾಗಿ ಕಾಲೂರಿ ಎಲ್ಲರೂ ನಡೆಯುತ್ತಾರೆಂಬುದು ನಿನಗೆ ತಿಳಿಯದ ವಿಷಯವಲ್ಲವಷ್ಟೆ! ಆದರೆ ಇತ್ತ ನೋಡು. ಇದೆಲ್ಲವನ್ನು ಅತ್ಯಂತ ರಹಸ್ಯವಾಗಿ ನಡೆಯಿಸಬೇಕು. ಗುಟ್ಟು ರಟ್ಟಾಯಿತೆಂದರೆ ನೀನೂ ಉಳಿಯಲಾರೆ. ನಾನೂ ಬದುಕುವಂತಿಲ್ಲ" ಎಂಬುದಾಗಿ ಹೇಳಿ, ಅವನು ಕರಟಕನಿದ್ದಲ್ಲಿಗೆ ಹೋದನು.

ಆಗ ಕರಟಕನು-"ಏನಾಯಿತು ನಿನ್ನ ಪ್ರಯತ್ನ?" ಎಂದನು. ಅದಕ್ಕೆ ದಮನಕನು—"ಪರಸ್ಪರವಾಗಿ ಭೇದಬುದ್ಧಿಯು ಚೆನ್ನಾಗಿ ಬೇರು ಬಿಟ್ಟಿದೆ" ಎಂದನು. ಕರಟಕನು—"ಇದಕ್ಕೇನು ಸಂದೇಹ? ಏಕೆಂದರೆ, ದುಷ್ಟನಿಗೆ ಮಿತ್ರನಾದರೂ ಇರುವನೇ? ಹಣದಿಂದ ದಣಿದವರಾದರೂ ಇರುವರೇ? ಬೇಡಿದರೆ ಎಲ್ಲರಿಗೂ ಸಿಟ್ಟು ತಲೆಗೇರುವುದು. ಕೆಟ್ಟ ಕೆಲಸದಲ್ಲಿ ಯಾವನು ತಾನೇ ನಿಪುಣನಲ್ಲ? ಮತ್ತು ಮೋಸಗಾರರು ಹೇಗಾದರೂ ತಮ್ಮ ಕೆಲಸವನ್ನು ನೆರವೇರಿಸಿಕೊಳ್ಳಲು ಹಣಗಾರರನ್ನು ಕೆಟ್ಟ ದಾರಿಗೆ ಎಳೆಯುವರು. ಆಶ್ರಯಾಶನೆನಿಸಿದ ಬೆಂಕಿಯಂತೆ ದುರುಳರ ಸಹವಾಸವು ಏನನ್ನು ತಾನೇ ಮಾಡಲಾರದು?" ಎಂಬುದಾಗಿ ಹೇಳಿದನು.

ಅಲ್ಲಿಂದ ದಮನಕನು ಪಿಂಗಳಕನ ಹತ್ತಿರಕ್ಕೆ ಹೋಗಿ-" ಸ್ವಾಮಿ! ಆ ಪಾಪಾತ್ಮನು ಬಂದಿರುವನು. ಪ್ರಭುಗಳವರು ಜಾಗರೂಕತೆಯಿಂದಿರಬೇಕು" ಎಂಬುದಾಗಿ ಮೇಲೆ ಹೇಳಿದ ರೀತಿಯಿಂದ ಸಜ್ಜುಗೊಳಿಸಿದನು. ಸಂಜೀವಕನು ಕೂಡ ದಮನಕನ ದುರುಪದೇಶದಂತೆಯೇ ಬಂದು ನೋಡಲಾಗಿ, ಪಿಂಗಳಕನು ಎಂದಿನಂತಿರದೆ, ಬಾಯ್ದೆರೆದು, ಬಾಲವನ್ನು ಎತ್ತಿ, ಕಿವಿಗಳನ್ನು ನೆಟ್ಟಗೆ ನಿಲ್ಲಿಸಿ, ಮುಂಗಾಲಿನ ಪಂಜನ್ನು ಎತ್ತಿ ಯುದ್ಧಕ್ಕೆ ಸಿದ್ಧವಾಗಿರುವುದನ್ನು ಕಂಡು, ತನ್ನ ಪರಾಕ್ರಮವನ್ನು ತೋರತೊಡಗಿದನು. ಬಳಿಕ ಇಬ್ಬರೂ ಹೋರಾಡತೊಡಗಿದರು. ಮರುಕ್ಷಣದಲ್ಲಿಯೇ ಸಂಜೀವಕನು ಪಿಂಗಳಕನಿಂದ ಮಡಿದನು. ಆಗ ಸೇವಕನಾದ ಸಂಜೀವಕನನ್ನು ಕೊನೆ

ಗಾಣಿಸಿದ ಪಿಂಗಳಕನು ದುಃಖಾಕ್ರಾಂತನಾಗಿ ಮನಸ್ಸಿನಲ್ಲಿಯೇ ಮರುಗುತ್ತ ಇಂತೆಂದನು:—"ಆಹಾ! ನಾನು ಎಂತಹ ಕ್ರೂರ ಕೃತ್ಯವನ್ನು ಮಾಡಿದೆನು. ಸಿಂಹವು ಸಲಗನನ್ನು ಕೊಂದು ಮೃಗರಾಜನೆಂಬ ಕೀರ್ತಿಯನ್ನು ಪಡೆಯುವುದು. ಕೊಲ್ಲುವುದು ಮಾತ್ರವೇ ಸಿಂಹದ ಕೆಲಸ. ಅದರ ಮಾಂಸವನ್ನು ನಾಯಿ ನರಿ ಮುಂತಾದ ಪರಿವಾರವು ಅನುಭವಿಸುವುದು. ಅದರಿಂದ ಸಿಂಹಕ್ಕೆ ಸ್ವಲ್ಪವೂ ಪ್ರಯೋಜನವಿಲ್ಲ. ಇಂತೆಯೇ ಲೋಕದಲ್ಲಿ ಮಿತಿಮೀರಿದ ಪಾಪವು ಅರಸನ ಪಾಲಿಗೆ ಬರುವುದಲ್ಲವೇ? ರಾಜ್ಯಭೋಗಗಳನ್ನು ಮಾತ್ರ ಪರಿವಾರವು ಅನುಭವಿಸುವುದು."

"ಸಾರವತ್ತಾದ ಭೂಭಾಗವು ಹಾಳಾಗುವುದಕ್ಕೂ, ಬುದ್ಧಿಶಾಲಿಯೂ ನಿಷ್ಕಪಟಿಯೂ ಎನಿಸಿದ ಭೃತ್ಯನು ಸಾಯುವುದಕ್ಕೂ ಎಷ್ಟೋ ವ್ಯತ್ಯಾಸವಿರುವುದು! ಸೇವಕನು ಅಳಿದನಾದರೆ ರಾಜನೂ ಹಾಳಾಗುವನು. ಒಂದು ದೇಶವು ಪಾಳುಬಿದ್ದರೆ ಮರಳಿ ಅದನ್ನು ಸುಲಭವಾಗಿ ಸರಿಪಡಿಸಬಹುದಲ್ಲವೆ? ಅಕೃತ್ರಿಮ ಸ್ವಭಾವವುಳ್ಳ ಇಂತಹ ಸೇವಕನು ಮರಳಿ ನನಗೆ ದೊರೆಯುವನೇ?" ಹೀಗೆ ಹಂಬಲಿಸುತ್ತ ಚಿಂತಾಕ್ರಾಂತನಾಗಿ ಕುಳಿತಿರುವ ಪಿಂಗಳಕನನ್ನು ನೋಡಿ ದಮನಕನು—"ಪ್ರಭೋ! ತಮ್ಮ ಪ್ರಕೃತ ಸ್ಥಿತಿಯನ್ನು ನೋಡಿದರೆ ನನಗೆ ವಿಲಕ್ಷಣವಾಗಿ ತೋರುತ್ತಿದೆ. ಇದೆಲ್ಲಿಯ ನ್ಯಾಯ? ಹೊಸ ನಡೆವಳಿ! ಹಗೆಯನ್ನು ಕೊಂದು ಮರುಗುವುದೂ ಉಂಟೇ? ಏಕೆಂದರೆ, ಹೆತ್ತ ತಂದೆಯಾಗಲಿ, ಒಡಹುಟ್ಟಿದವನಾಗಲಿ, ತನ್ನ ಮಗನೇ ಆಗಲಿ, ಆಪ್ತಮಿತ್ರನಾಗಲಿ, ತನ್ನ ಪ್ರಾಣವನ್ನು ಅಪಹರಿಸುವುದಕ್ಕಾಗಿ ಪ್ರಯತ್ನಿಸಿದನಾದರೆ, ಶ್ರೇಯಸ್ಸನ್ನು ಬಯಸುವ ಅರಸು ಅಂತಹವನನ್ನು ಕೊಲ್ಲಲೇ ಬೇಕು. ಇಷ್ಟು ಮಾತ್ರವಲ್ಲದೆ, ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳ ತತ್ವವನ್ನು ಚೆನ್ನಾಗಿ ಬಲ್ಲವನು ಯಾವಾಗಲೂ ಮರುಕವುಳ್ಳವನಾಗಿರಲೇ ಬಾರದು. ಸೈರಣೆಯುಳ್ಳವನ ಕೈಯಲ್ಲಿರುವ ಅನ್ನವನ್ನೂ ತಿನ್ನಬಿಡುವುದಿಲ್ಲ. ಮತ್ತೇನೆಂದರೆ, ಶತ್ರುವಿನಲ್ಲಿಯೂ ಮಿತ್ರನಲ್ಲಿಯೂ ಸಮಾನವಾದ ಸೈರಣೆಯನ್ನು ತೋರುವುದು ಯತಿಗಳಿಗೆ ಮಾತ್ರವೇ ಸಲ್ಲುವುದಲ್ಲದೆ, ಅವರಿಗೆ ಅದು ಉತ್ತಮವಾದ ಭೂಷಣವೆನಿಸುವುದು. ಅಪರಾಧಿಗಳಲ್ಲಿ ಕ್ಷಮಾಗುಣವನ್ನು ತೋರ್ಪಡಿಸುವುದು

ಅರಸನಿಗೆ ಎಂದಿಗೂ ತರವಲ್ಲ. ದೊರೆತನಕ್ಕೆ ಆಸೆಪಟ್ಟು, ಹೆಮ್ಮೆಯಿಂದ ಅರಸನ ಪದವಿಯನ್ನು ಬಯಸತಕ್ಕವರಿಗೆಲ್ಲಾ ಒಂದೇ ಒಂದು ಪ್ರಾಯಶ್ಚಿತ್ತ; ಅಂತಹವರನ್ನು ನಿರ್ಮೂಲಗೊಳಿಸುವುದಲ್ಲದೆ ಬೇರೆ ಉಪಾಯವೇ ಇಲ್ಲ. ಇನ್ನು ಮರುಕವುಳ್ಳ ಅರಸನು, ಸರ್ವಸ್ವವನ್ನೂ ಸೂರೆಗೊಳ್ಳುವ ಬ್ರಾಹ್ಮಣನು, ಯಾರೊಬ್ಬರ ಅಧೀನದಲ್ಲಿಯೂ ಇರಲೊಲ್ಲದ ಹೆಂಗಸು, ದುರುಳನಾದ ಗೆಳೆಯ, ಇದಿರಿಸಿ ಮಾತನಾಡುವ ಬಂಟ, ಮೈಮರೆತಿರುವ ಅಧಿಕಾರಿ, ಉಪಕಾರವನ್ನು ಸ್ಮರಿಸದವನು, ಈ ಏಳು ಮಂದಿಯನ್ನು ಪರಿತ್ಯಜಿಸಿದಲ್ಲದೆ ಬೇರೆ ಮಾರ್ಗವೇ ಇಲ್ಲವಷ್ಟೆ!"

"ಪಣ್ಯಾಂಗನೆಯು ಸಮಯೋಚಿತವಾಗಿ ಮಾತನಾಡುವಳು. ಒಮ್ಮೆ ದಿಟವನ್ನೇ ನುಡಿಯುವಳು. ಮತ್ತೊಮ್ಮೆ ಸುಳ್ಳನ್ನು ದಿಟಕ್ಕಿಂತಲೂ ಅತಿಶಯವಾಗಿ ಹೇಳುವಳು. ಕೆಲವು ವೇಳೆ ಪ್ರಿಯ ವಾಕ್ಯಗಳನ್ನಾಡುವಳು. ಚಾಡಿಕೋರತನ, ದುಂದುಗಾರಿಕೆ, ಔದಾರ್ಯ, ವಿಶೇಷವಾದ ಆದಾಯ, ಇವುಗಳಿಗಂತೂ ತವರ್ಮನೆಯಂತಿರುವಳು. ರಾಜನೀತಿಯು ಸರ್ವವಿಧದಲ್ಲಿಯೂ ವಾರವಿಲಾಸಿನಿಯನ್ನು ಹೋಲುವುದಲ್ಲವೇ?"

ಈ ಬಗೆಯ ಮಾತುಗಳಿಂದ ದಮನಕನು ಪಿಂಗಳಕನನ್ನು ಸಮಾಧಾನಗೊಳಿಸಲಾಗಿ, ಮೃಗರಾಜನು ಮನಸ್ಸಿಗೆ ಶಾಂತಿಯನ್ನು ತಂದುಕೊಂಡು ತನ್ನ ಮೊದಲಿನ ಸ್ಥಳದಲ್ಲಿ ಸುಖವಾಗಿ ಕುಳಿತನು. ಆಗ ದಮನಕನು ಸಂತೋಷಪಟ್ಟು, "ನಮ್ಮ ಮಹಾರಾಜನು ಜಯಶೀಲನೆನಿಸಿ ದೀರ್ಘಕಾಲ ಸುಖವಾಗಿ ಬಾಳಲಿ! ಸಕಲ ಲೋಕಗಳಿಗೂ ಮಂಗಳವಾಗಲಿ!" ಎನ್ನುತ್ತ ತಾನೂ ಒಂದು ಕಡೆ ಸುಖವಾಗಿ ಕುಳಿತುಕೊಂಡನು.

ಹೀಗೆ ವಿಷ್ಣುಶರ್ಮನು ಕಥೆಯನ್ನು ಮುಗಿಸಿ, ಅರಸು ಮಕ್ಕಳನ್ನು ನೋಡಿ-"ಅಯ್ಯಾ ರಾಜನಂದನರೇ! ನೀವು ಸುಹೃದ್ಭೇದವನ್ನು ಕೇಳಿದಿರಲ್ಲವೇ?" ಎಂದನು. ಆ ಮಾತಿಗೆ ನೃಪತನಯರು "ತಮ್ಮ ಅನುಗ್ರಹದಿಂದ ಕೇಳಿ ನಾವು ಸುಖವನ್ನು ಅನುಭವಿಸಿದೆವು" ಎಂಬುದಾಗಿ ವಿನಯದಿಂದ ಉತ್ತರ ಕೊಟ್ಟರು. ಆಗ ಮರಳಿ ವಿಷ್ಣುಶರ್ಮನು ಇಂತೆಂದನು:—

"ಸುಹೃದ್ಭೇದವು ನಿಮ್ಮ ಹಗೆಗಳ ಮನೆಗಳಲ್ಲಿ ನೆಲೆಗೊಳ್ಳಲಿ. ಖೂಳರು ಯಮಪಾಶಕ್ಕೆ ಸಿಲುಕಿ ಹಾಳಾಗಲಿ. ಲೋಕವು ಅನುದಿನವೂ

ಸುಖಸಂಪತ್ತುಗಳಿಂದ ಮೆರೆಯಲಿ! ಮನೋಹರವಾದ ಈ ಕಥೆಯ ಪರಿಯನ್ನು ಆದರದಿಂದ ಕಿವಿಗೊಟ್ಟು ಕೇಳಿದ ತರಳರು ಯಾವಾಗಲೂ ಆನಂದಿಸಲಿ!!"

ಇಂತು ಹಿತೋಪದೇಶ ಕರ್ಣಾಟಕ ಗದ್ಯಾನುವಾದದಲ್ಲಿ ಸುಹೃದ್ಭೇದಂ ಸಂಪೂರ್ಣಂ.

**ಎರಡನೆಯ ಕಥೆಯು ಮುಗಿದುದು.**

---

## ವಿಗ್ರಹ.

ಮರುದಿನ ವಿಷ್ಣುಶರ್ಮನು ಕಥೆಯನ್ನು ಹೇಳತೊಡಗುವ ಸಂದರ್ಭದಲ್ಲಿ ರಾಜಪುತ್ರರು ವಿಷ್ಣುಶರ್ಮನನ್ನು ಕುರಿತು, "ಆರ್ಯ! ನಾವು ಅರಸು ಮಕ್ಕಳು. ವಿಗ್ರಹವನ್ನೂ ಕೇಳಬೇಕೆಂಬ ಕುತೂಹಲವುಂಟು. ದಯೆಮಾಡಿ ಹೇಳಬೇಕು" ಎಂಬುದಾಗಿ ಕೇಳಿದಲ್ಲಿ, ವಿಷ್ಣುಶರ್ಮನು "ನೀವು ಈ ಕಥೆಯನ್ನು ಕೇಳಲು ತವಕಗೊಂಡಿರುವಿರಿ; ಹಾಗಾದರೆ ಹೇಳುವೆನು. ಕೇಳಿರಿ."

"ಒಮ್ಮೆ ಹಂಸೆಗಳಿಗೂ ನವಿಲುಗಳಿಗೂ ಹೋರಾಟವು ಮೊದಲಿಟ್ಟಿತು. ಎರಡು ಪಕ್ಕಗಳಲ್ಲಿಯೂ ಯುದ್ಧವು ಸಮಾನವಾಗಿ ನಡೆಯುತ್ತಿದ್ದಿತು. ಆಗ ಕಾಗೆಯು ನಂಬುಗೆಯಿಂದ ಹಗೆಯ ಮನೆಯನ್ನು ಹೊಕ್ಕು, ಅಲ್ಲಿಯೇ ವಾಸಮಾಡುತ್ತಿದ್ದು ಹಂಸೆಗಳನ್ನು ಸೋಲಿಸಿತು." ಎಂದನು. ಅದನ್ನು ಕೇಳಿ ರಾಜಪುತ್ರರು "ಇದು ಹೇಗೆ ಎಂಬುದನ್ನು ವಿವರವಾಗಿ ಅಪ್ಪಣೆ ಕೊಡಿಸಿರಿ" ಎನಲಾಗಿ, ವಿಷ್ಣುಶರ್ಮನು ಕಥೆಯನ್ನು ಹೇಳತೊಡಗಿದನು.

"ಕರ್ಪೂರದ್ವೀಪದಲ್ಲಿ ಪದ್ಮಕೇಳಿಯೆಂಬ ಸರೋವರವಿದೆ. ಅಲ್ಲಿ ಹಿರಣ್ಯಗರ್ಭನೆಂಬ ಹಂಸರಾಜನು ರಾಜ್ಯವಾಳುತ್ತಿದ್ದನು. ಅಲ್ಲಿಯ ಜಲಚರ ಪಕ್ಷಿಗಳೆಲ್ಲವೂ ಅದನ್ನು ಬಹಳ ಗೌರವದಿಂದ ಕಾಣುತ್ತಿದ್ದುವು. ಒಳ್ಳೆಯ ರೀತಿಯಲ್ಲಿ ದೇಶವನ್ನು ಆಳುವ ಅರಸನು ಇಲ್ಲದಿದ್ದರೆ, ಅಂಬಿಗನಿಲ್ಲದ ಹಡಗಿನಂತೆ ದೇಶವು ಹಾಳಾಗುವುದು. ರಾಜನು ಪ್ರಜೆಗಳನ್ನು ಕಾಪಾಡುವನು. ಪ್ರಜೆಗಳು ಅರಸನನ್ನು ವೃದ್ಧಿಗೊಳಿಸುವರು. ವೃದ್ಧಿ

ಗೊಳಿಸುವುದಕ್ಕಿಂತಲೂ ಸಲಹುವುದು ಹೆಚ್ಚಿನ ಕೆಲಸ. ಸ್ಥಿತಿಕಾರ್ಯವು ಸರಿಯಾಗಿ ನಡೆಯದಿದ್ದರೆ ಮಿಕ್ಕವುಗಳಿಂದ ಫಲವೇನು?''

"ಒಮ್ಮೆ ಹಂಸರಾಜನು ವಿಶಾಲವಾದ ತಾವರೆಮಂಚದ ಮೇಲೆ ಕುಳಿತಿದ್ದನು. ಸುತ್ತಲೂ ಪರಿವಾರವು ಸೇವಿಸುತ್ತಿದ್ದಿತು. ಆಗ ಯಾವುದೋ ದೇಶದಿಂದ ದೀರ್ಘಮುಖನೆಂಬ ಬಕವು ಅಲ್ಲಿಗೆ ಬಂದು, ರಾಜನಿಗೆ ನಮಸ್ಕರಿಸಿ ಕುಳಿತುಕೊಂಡಿತು. ಆಗ ಹಂಸರಾಜನು "ಎಲೆ! ದೀರ್ಘಮುಖನೆ! ಅನೇಕ ದೇಶಗಳನ್ನು ತಿರುಗಿ ಬಂದಿರುವೆಯಷ್ಟೆ! ಅಲ್ಲಿನ ವಿದ್ಯಮಾನಗಳೇನು? ಹೇಳು" ಎಂದನು.

ಆಗ ದೀರ್ಘಮುಖನು "ಪ್ರಭೋ! ಅರಿಕೆಮಾಡಬೇಕಾದ ಸಮಾಚಾರವು ಬಹಳವಿದೆ. ಅದನ್ನೆಲ್ಲ ಬಿನ್ನಯಿಸುವ ಸಲುವಾಗಿಯೇ ಇಷ್ಟು ಬೇಗನೆ ಬಂದೆನು. ಲಾಲಿಸಬೇಕು. ಜಂಬೂದ್ವೀಪದಲ್ಲಿ ವಿಂಧ್ಯವೆಂಬ ಪರ್ವತಶ್ರೇಣಿಯಿರುವುದು. ಅಲ್ಲಿ ಚಿತ್ರವರ್ಣನೆಂಬ ಮಯೂರರಾಜನು ಪಕ್ಷಿರಾಜ್ಯದಲ್ಲಿ ಅಭಿಷಿಕ್ತನಾಗಿ ರಾಜ್ಯಭಾರಮಾಡುತ್ತಿರುವನು. ಒಮ್ಮೆ ನಾನು ಆ ಬೆಂಗಾಡಿನಲ್ಲಿ ತಿರುಗುತ್ತಿರುವಾಗ ಆತನ ಸೇವಕರು ನನ್ನನ್ನು ನೋಡಿ—"ನೀನು ಯಾರು? ಎಲ್ಲಿಂದ ಬಂದೆ?" ಎಂಬುದಾಗಿ ಕೇಳಿದರು. ಅದಕ್ಕೆ ನಾನು—"ಕರ್ಪೂರದ್ವೀಪದ ಚಕ್ರವರ್ತಿಯಾದ ಹಿರಣ್ಯಗರ್ಭನೆಂಬ ಹಂಸರಾಜನ ಅನುಚರನು. ದೇಶಗಳನ್ನು ನೋಡಬೇಕೆಂಬ ಕುತೂಹಲದಿಂದ ಬಂದಿರುವೆನು" ಎಂದೆನು. ಆ ಮಾತನ್ನು ಕೇಳಿ ಆ ಹಕ್ಕಿಗಳು—"ಒಳ್ಳೆಯದು, ಈ ಎರಡು ದೇಶಗಳಲ್ಲಿ ಯಾವುದು ಶ್ರೇಷ್ಠವಾದುದು? ಯಾವ ರಾಜನು ಉತ್ತಮನು?'' ಎಂಬುದಾಗಿ ಪ್ರಶ್ನೆಮಾಡಿದುವು. "ಛೀ! ಛೀ! ಇದೇನು? ಹೀಗೆ ಕೇಳುತ್ತೀರಿ? ನಾನೇನೆಂದು ಬಣ್ಣಿಸಲಿ! ಕರ್ಪೂರದ್ವೀಪವೆಂಬುದು ಎರಡನೆಯ ಸ್ವರ್ಗ. ಹಿರಣ್ಯಗರ್ಭನು ಎರಡನೆಯ ದೇವೇಂದ್ರ. ಈ ಮರಳು ಕಾಡಿನಲ್ಲಿ ನೀವೇನು ಮಾಡುವಿರಿ? ನಮ್ಮ ದೇಶಕ್ಕೆ ಬಂದು ಅಲ್ಲಿಯ ಭೋಗಭಾಗ್ಯಗಳನ್ನೂ ಪ್ರಜೆಗಳ ನಡೆವಳಿಯನ್ನೂ, ನಾಗರಿಕತೆ, ದೇಶಭಕ್ತಿ, ಮುಂತಾದುವುಗಳನ್ನೂ ನೋಡಿದರೆ, ಆಗ ನೀವೇ ತಿಳಿದುಕೊಳ್ಳುವಿರಿ'' ಎಂದೆನು. ಈ ಮಾತು ಕಿವಿಯಲ್ಲಿ ಬಿದ್ದಿತೋ ಇಲ್ಲವೋ ಅವುಗಳೆಲ್ಲವೂ ಸಿಟ್ಟಾಗಿ ಒಟ್ಟುಗೂಡಿ ನನ್ನ ಮೇಲೆ ಬೀಳತೊಡಗಿದುವು. ಇದು ಯುಕ್ತವೇ ಸರಿ. ಹಿರಿಯರು ಅಂತೆಯೇ ಹೇಳಿರುವರು.''

"ಹಾವಿಗೆ ಹಾಲೆರೆದರೆ ವಿಷವೇ ಏರುವುದು. ಮೂರ್ಖರಿಗೆ ಹಿತವನ್ನು ಹೇಳಿದರೆ ಮಿತಿಯಿಲ್ಲದ ಕೋಪಬರುವುದು. ಆ ಕಾರಣ, ಬುದ್ಧಿವಂತನಿಗೆ ಹಿತವನ್ನು ಉಪದೇಶಿಸಬೇಕಲ್ಲದೆ, ಮೂರ್ಖನಿಗೆ ಎಂದಿಗೂ ಹಿತವನ್ನು ಹೇಳಲೇ ಬಾರದು. ಮಂಗಗಳಿಗೆ ತಿಳಿಯೆ ಹೇಳಿ ಹಕ್ಕಿಗಳು ನೆಲೆಯಿಲ್ಲದೆ ಕಂಗೆಟ್ಟುವು" ಎಂದನು. ಆ ಮಾತನ್ನು ಕೇಳಿ ಅದರ ವಿವರವನ್ನು ತಿಳಿಸುವಂತೆ ಅಂಚೆಗಳ ಅರಸನು ಪ್ರಶ್ನೆಮಾಡಲಾಗಿ ದೀರ್ಘಮುಖನು ಹೇಳತೊಡಗಿದನು.

## ೧ನೆಯ ಕಥೆ

ನರ್ಮದಾ ನದಿಯ ತೀರದಲ್ಲಿ ಒಂದು ದೊಡ್ಡ ಬೂರಗ ಮರವಿದ್ದಿತು. ಅದರ ಮೇಲೆ ಅನೇಕ ಪಕ್ಷಿಗಳು ಗೂಡುಕಟ್ಟಿ ವಾಸವಾಗಿದ್ದವು. ಒಮ್ಮೆ ಮಳೆಗಾಲದಲ್ಲಿ ಕಪ್ಪು ಮೋಡಗಳು ಆಕಾಶವನ್ನೆಲ್ಲ ಕವಿದು ಮುಸಲಧಾರೆಗಳಿಂದ ಮಳೆಸುರಿಸಿದುವು. ಆಗ ಕೆಲವು ಮಂಗಗಳು ಮಳೆಯಲ್ಲಿ ತೊಯ್ದು, ಚಳಿಗೆ ನಡುಗುತ್ತ, ಆ ಮರದ ಅಡಿಯಲ್ಲಿ ನಿಂತಿದ್ದುವು. ಅವುಗಳನ್ನು ಕಂಡು ಕನಿಕರದಿಂದ ಹಕ್ಕಿಗಳು ಇಂತೆಂದುವು:—"ಎಲೆ, ಕಪಿಗಳಿರಾ! ಕೇಳಿರಿ. ಕೊಕ್ಕಿನ ಸಹಾಯದಿಂದಲೇ ಜೀವಿಸತಕ್ಕ ನಾವು ಹುಲ್ಲುಕಡ್ಡಿಗಳನ್ನು ತಂದು ಗೂಡು ಕಟ್ಟಿ ಸುಖವಾಗಿರುವೆವು. ಕೈಕಾಲು ಮುಂತಾದ ಸಲಕರಣೆಗಳುಳ್ಳ ನೀವು ಒಂದು ನೆಲೆಯನ್ನು ಮಾಡಿಕೊಳ್ಳದೆ, ಈ ರೀತಿ ಮಳೆಗೆ ಸಿಲುಕಿ ಬಾಧೆ ಪಡುತ್ತಿರುವಿರಲ್ಲಾ! ಇನ್ನು ಮೇಲೆಯಾದರೂ ಈ ಮಳೆ ನಿಂತ ಬಳಿಕ ಒಂದು ಮನೆಯನ್ನು ಕಟ್ಟಿಕೊಂಡು ಸುಖವಾಗಿರಬಾರದೇ?"

ಈ ಮಾತುಗಳನ್ನು ಕೇಳಿ ವಾನರಗಳಿಗೆ ಸಿಟ್ಟು ತಲೆಗೇರಿತು. ಆಗ ಅವು ಗಾಳಿಯಿಲ್ಲದ ಗೂಡುಗಳಲ್ಲಿ ವಾಸಮಾಡುವ ಈ ಹುಲು ಹಕ್ಕಿಗಳು ನಮ್ಮನ್ನು ಹಾಸ್ಯಮಾಡುತ್ತಿವೆ. ಇರಲಿ! ಮಳೆ ನಿಲ್ಲಲಿ, ಎಂಬುದಾಗಿ ಯೋಚಿಸಿದುವು. ಆಗ ಅವುಗಳಲ್ಲಿ ಒಂದು ಮರ್ಕಟವು ಆ ವಿಹಂಗಮಗಳನ್ನು ಕುರಿತು ಹೀಗೆ ಹೇಳಿತು:—"ಎಲೆ, ಸೂಜಿಯ ಮೂಗಿನ ಪ್ರಾಣಿಗಳಿರಾ! ನೀವೇ ನಮಗಿಂತಲೂ ಬಲ್ಲವರೆಂಬ ಹೆಮ್ಮೆಯಿಂದ ಮೆರೆಯದಿರಿ! ಎಲೆ ದುರುಳ ಹಕ್ಕಿಗಳೇ! ನಾವು ಮನೆ ಕಟ್ಟಿಕೊಳ್ಳುವುದರಲ್ಲಿ ಶಕ್ತರಲ್ಲ

ದಿದ್ದರೂ ಮನೆಮುರಿಯುವುದರಲ್ಲಿ ಮಹಾ ನಿಪುಣರು.'' ಬಳಿಕ ಮಳೆಯು ನಿಂತ ಕೂಡಲೇ ಆ ಶಾಖಾಮೃಗಗಳೆಲ್ಲವೂ ಮರವನ್ನು ಏರಿ ಅವುಗಳ ಗೂಡುಗಳನ್ನೆಲ್ಲ ನೆಲಕ್ಕೆ ಕೆಡುಹಿದುವು. ಆ ಕಾರಣದಿಂದ ಮೂರ್ಖರಿಗೆ ಹಿತವನ್ನು ಹೇಳಬಾರದು.

"ಆ ಮೇಲೆ ಮಯೂರಗಳು ಏನು ಮಾಡಿದುವು?'' ಎಂಬುದಾಗಿ ಹಂಸರಾಜನು ಪ್ರಶ್ನೆಮಾಡಿದನು. ಆಗ ದೀರ್ಘಮುಖನು "ಈ ರಾಜಹಂಸವನ್ನು ರಾಜ್ಯದಲ್ಲಿ ಸ್ಥಾಪಿಸಿದವರು ಯಾರು?'' ಎಂಬುದಾಗಿ ಪ್ರಶ್ನೆಮಾಡಿದನು. ಅದಕ್ಕೆ ಪ್ರತಿಯಾಗಿ "ಈ ನವಿಲನ್ನು ರಾಜನನ್ನಾಗಿ ನಿಯಮಿಸಿದವರಾರು?'' ಎಂತ ನಾನೂ ಕೇಳಿದೆನು. ಆ ಮಾತನ್ನು ಕೇಳಿದೊಡನೆಯೇ ಅವೆಲ್ಲವೂ ಒಟ್ಟುಗೂಡಿ ನನ್ನನ್ನು ತಿವಿಯುವುದಕ್ಕೆ ಬಂದುವು. ಆಗ ನಾನೂ ನನ್ನ ಶೌರ್ಯವನ್ನು ತೋರಿದೆನಲ್ಲದೆ ಹೇಡಿಯಂತೆ ಹಿಮ್ಮೆಟ್ಟಲಿಲ್ಲ. ಸಾಮಾನ್ಯವಾಗಿ ಮನುಷ್ಯನಿಗೆ ತಾಳ್ಮೆಯು ದೊಡ್ಡ ಭೂಷಣವೇ ಸರಿ. ಇತರರಿಂದ ತಿರಸ್ಕಾರವು ಸಂಭವಿಸುವಾಗ ಮಾತ್ರ ಪರಾಕ್ರಮವೇ ಅಲಂಕಾರವಲ್ಲವೇ? ಎಂಬುದಾಗಿ ಹೇಳಿದನು. ಈ ಮಾತಿಗೆ ಹಂಸರಾಜನು ನಕ್ಕು "ಇದಿರು ಪಕ್ಷದ ಮತ್ತು ಆತ್ಮಪಕ್ಷದ ಬಲಾಬಲಗಳನ್ನು ತಿಳಿದುಕೊಳ್ಳದೆ ದುಡುಕಬಾರದು. ಒಂದು ವೇಳೆ ಹಾಗೆ ಮುಂದರಿಸಿದರೆ ತಿರಸ್ಕಾರವು ತಪ್ಪುವುದಿಲ್ಲ. ಬಹಳ ಕಾಲದ ವರೆಗೆ ಹುಲಿಯ ತೊಗಲನ್ನು ಹೊದ್ದು, ಹೊಲದ ಪೈರನ್ನು ಮೇಯುತ್ತಿದ್ದ ಕತ್ತೆಯು ಬಾಯ ಹೆಮ್ಮೆಯಿಂದ ತನ್ನ ವಿಪತ್ತನ್ನು ತಾನಾಗಿಯೇ ತಂದುಕೊಂಡಿತು'' ಎಂದನು. ಅದು ಹೇಗೆ? ಎಂಬುದಾಗಿ ದೀರ್ಘಮುಖನೇ ಮುಂತಾದವರು ಕೇಳಲಾಗಿ ಹಂಸರಾಜನು ಹೇಳತೊಡಗಿದನು:—

### ೨ನೆಯ ಕಥೆ

ಹಸ್ತಿನಾಪುರಿಯಲ್ಲಿ ವಿಲಾಸನೆಂಬ ಅಗಸನಿದ್ದನು. ಅವನ ಕತ್ತೆಯು ಮೂಟೆಗಳನ್ನು ಹೊತ್ತು ಹೊತ್ತು ಸಾಯುವ ದೆಸೆಗೆ ಬಂದಿತು. ಆಗ ಆ ಮಡಿವಾಳನು ಆ ಗರ್ದಭವನ್ನು ಹುಲಿಯ ಚರ್ಮದಿಂದ ಹೊದಿಸಿ, ಪೈರು ಪಚ್ಚೆಗಳಿಂದ ತುಂಬಿದ ಹೊಲದಲ್ಲಿ ಮೇಯುವುದಕ್ಕೆ ಬಿಟ್ಟನು. ಅದನ್ನು ದೂರದಿಂದ ನೋಡಿದ ರೈತರೆಲ್ಲರೂ ಹುಲಿ ಎಂತಲೇ ಭಾವಿಸಿ ದೂರವಾಗಿ

ಓಡ ತೊಡಗಿದರು. ಕತ್ತೆಯು ಪೈರನ್ನು ಮೇದು, ದಿನದಿನಕ್ಕೆ ಚೆನ್ನಾಗಿ ಬಲಿತು ಒಡಲು ತುಂಬಿತು. ಇಂತೆಯೇ ಕೆಲವು ಕಾಲ ನಡೆಯಿತು. ಒಂದು ದಿನ ಕ್ಷೇತ್ರಪಾಲನು ಕಂದು ಕಂಬಳಿಯ ನಿಲುವಂಗಿಯನ್ನು ತೊಟ್ಟು, ಅಂಬು ಬಿಲ್ಲುಗಳನ್ನು ಸಿದ್ಧಪಡಿಸಿ, ಒಂದು ಕಡೆ ರಹಸ್ಯವಾಗಿ ಕುಳಿತಿದ್ದನು. ಈ ಕತ್ತೆಯು ಅವನನ್ನು ದೂರದಲ್ಲಿ ನೋಡಿತು. ಕೂಡಲೇ ಇದೂ ಒಂದು ಕತ್ತೆಯೆಂಬ ಭಾವನೆಯಿಂದ ಗಟ್ಟಿಯಾಗಿ ಕಿರುಚುತ್ತ ಅವನ ಬಳಿಗೆ ಓಡಿಹೋಯಿತು. ಆಗ ರೈತನು ಅದರ ಗುಟ್ಟನ್ನು ತಿಳಿದು ಅನಾಯಾಸವಾಗಿ ಅದನ್ನು ಕೊಂದನು. ಆ ಕಾರಣ 'ಸಮಯವರಿತು ಬಾಯಿ ಮಾಡಬೇಕೇ ಹೊರತು ಹೆಮ್ಮೆಯಿಂದ ದುಡುಕಬಾರದು' ಎಂಬುದಾಗಿ ಹಿರಣ್ಯಗರ್ಭನು ಕಥೆಯನ್ನು ಹೇಳಿ ಮುಗಿಸಿದನು.

ಆಗ ದೀರ್ಘಮುಖನು ಇಂತೆಂದನು:—

"ಎಲೆ ಪಾಪಿ! ಹಾಳು ಬಕವೇ! ನಮ್ಮ ಎಲ್ಲೆಯಲ್ಲಿಯೇ ತಿರುಗುತಿದ್ದರೂ ಸ್ವಲ್ಪವೂ ಭಯವಿಲ್ಲದೆ ನಮ್ಮ ದೊರೆಯನ್ನೇ ಹೀಯಾಳಿಸುವೆಯಾ? ಇದನ್ನು ನಾವು ಎಷ್ಟು ಮಾತ್ರವೂ ಸಹಿಸಲಾರೆವು" ಎನ್ನುತ್ತ, ಆ ನವಿಲುಗಳೆಲ್ಲವೂ ಹರಿತವಾದ ತಮ್ಮ ಕೊಕ್ಕುಗಳಿಂದ ನನ್ನನ್ನು ತಿವಿಯುತ್ತ ಕೋಪದಿಂದ, 'ನೋಡೆಲೋ ಮೂರ್ಖ! ನಿಮ್ಮ ಅರಸನಾದ ಆ ಹಂಸರಾಜನು ಕೇವಲ ಮೃದು ಸ್ವಭಾವದವನು. ಅವನಿಗೆ ರಾಜ್ಯವಾಳುವ ಯೋಗ್ಯತೆಯಾದರೂ ಇದೆಯೇ? ಅವನೆಲ್ಲಿ, ದೊರೆತನವೆಲ್ಲಿ? ಇನ್ನು ನೀನಾದರೂ ನೀರಿನೊಳಗಣ ಕಪ್ಪೆಯಂತೆಯೇ ಸರಿ. ಅದರಿಂದಲೇ ಅವನನ್ನು ಓಲೈಸುವಂತೆ ನಮಗೆ ಹೇಳಬಂದಿರುವೆ. ಇತ್ತ ಕೇಳು. ಹಣ್ಣುಗಳಿಂದ ತುಂಬಿ, ನೆಳಲನ್ನು ಕೊಡುವ ಮರವನ್ನೇ ಆಶ್ರಯಿಸಬೇಕು. ವಿಧಿವಶದಿಂದ ಒಮ್ಮೆ ಹಣ್ಣು ಬಿಡದಿದ್ದರೂ ನೆರಳನ್ನು ಯಾರೂ ತಪ್ಪಿಸಲಾರರಷ್ಟೆ! ಎಂತಹ ಅವಸ್ಥೆಯಲ್ಲಿಯೂ ನೀಚರನ್ನು ಸೇವಿಸಬಾರದು. ದೊಡ್ಡವರ ಆಶ್ರಯವನ್ನೇ ಸಂಪಾದಿಸಬೇಕು. ಈಡಿಗಗಿತ್ತಿಯು ಕೈಯಲ್ಲಿ ಹಾಲು ತುಂಬಿದ ಕೊಡವನ್ನು ಹಿಡಿದಿದ್ದರೂ ಹೆಂಡದ ಕೊಡವೆಂತಲೇ ಹೇಳುವರಲ್ಲವೇ? ದುರುಳರೊಂದಿಗೆ ಒಂದೇ ಒಂದು ಗಳಿಗೆಯಾದರೂ ನಿಲ್ಲಬಾರದು. ತಿರುಗಾಡಲೂ ಬಾರದು. ದುರ್ಜನರ ಸಂಘವೇ ಮರಣ. ಸಜ್ಜನರ ಸಹವಾಸವು

ಔಷಧಕ್ಕೆ ಸಮವಾದುದು. ಆಧಾರಾಧೇಯ* ಭಾವದಿಂದ ಕನ್ನಡಿಯಲ್ಲಿ ದೊಡ್ಡ ಆನೆಯೂ ಸಣ್ಣದಾಗಿಯೇ ಕಾಣುವುದು. ಅಂತೆಯೇ ಎಂತಹ ಗುಣಸಂಪನ್ನನಾದರೂ ಗುಣಹೀನನ ಆಶ್ರಯದಿಂದ ಅಲ್ಪನಂತೆಯೇ ತೋರುವನು. ಅರಸನು ಅತ್ಯಂತ ಪ್ರಬಲನಾಗಿದ್ದರೆ ಅವನ ಹೆಸರನ್ನು ಎತ್ತಿದ ಮಾತ್ರದಿಂದಲೇ ಕಾರ್ಯಗಳು ಸುಲಭವಾಗಿ ಕೈಗೂಡುವುವು. ಚಂದ್ರನ ಪ್ರಖ್ಯಾತಿಯಿಂದ ಮೊಲಗಳು ಸುಖವಾಗಿರುತ್ತವೆ'' ಎಂಬುದಾಗಿ ನವಿಲುಗಳು ಹೇಳಿದುವು. ಅದರ ಪರಿ ಎಂತು? ಎಂಬುದಾಗಿ ನಾನು ಪ್ರಶ್ನೆಮಾಡಿದೆನು. ಆಗ ಆ ಹಕ್ಕಿಗಳು ಈ ಕಥೆಯನ್ನು ಹೇಳಿದುವು.

## ೩ನೆಯ ಕಥೆ

ಹಿಂದೆ ಒಂದು ಸಲ ಮಳೆಯಿಲ್ಲದೆ ಎಲ್ಲೆಲ್ಲಿಯೂ ಕ್ಷಾಮವು ಆವರಿಸಿಕೊಂಡಿತು. ಮಳೆಗಾಲದಲ್ಲಿ ಕೂಡ ಮಳೆ ಬೀಳಲಿಲ್ಲ. ಆ ಬರಗಾಲದಲ್ಲಿ ಬಿಸಿಲಿನ ತಾಪವನ್ನೂ, ದಗೆಯನ್ನೂ ತಡೆಯಲಾರದೆ ಆನೆಗಳ ಹಿಂಡು ಸಲಗನ ಬಳಿ ಈ ರೀತಿ ಬಿನ್ನಯಿಸಿದುವು:-"ಪ್ರಭುವೇ! ನಾವು ಬದುಕುವ ಹಾಗೆ ತೋರಲಿಲ್ಲ, ಮುಂದೆ ನಮ್ಮ ಗತಿಯೇನು? ನಾವು ಜೀವಿಸುವ ಬಗೆ ಯಾವುದು? ಸಣ್ಣ ಜೀವಜಂತುಗಳು ಮುಳುಗಿ ಸ್ನಾನಮಾಡುವಷ್ಟು ನೀರು ಭೂಮಿಯಲ್ಲಿಲ್ಲವಲ್ಲಾ! ಮಿಂದು ಎಷ್ಟೋ ಕಾಲವಾಯಿತು. ಇದರಿಂದ ನಮ್ಮ ಕಣ್ಣು ಮಸುಕಾಗಿದೆ. ಎಲ್ಲಿಗೆ ಹೋಗುವ? ಏನು ಮಾಡುವ?'' ಇಂತು ಆನೆಗಳ ಮೊರೆಯನ್ನು ಲಾಲಿಸಿ ಸಲಗವು ಹಿಂಡನ್ನು ಸಂಗಡ ಕರೆದುಕೊಂಡು ಜಲವಸತಿಯುಳ್ಳ ಒಂದು ಸರೋವರವನ್ನು ತೋರಿಸಿತು. ಅದರ ಒಡ್ಡಿನಲ್ಲಿ ವಾಸವಾಗಿದ್ದ ಮೊಲಗಳು ಆನೆಗಳ ಕಾಲ ತುಳಿತದಿಂದ ನುಚ್ಚುನುರಿಯಾಗಿ ಸಾಯುವಂತಾದುವು. ಆಗ ಅವುಗಳಲ್ಲಿ ಶಿಲೀಮುಖವೆಂಬ ಒಂದು ಮೊಲವು ಮಿಕ್ಕ ಮೊಲಗಳೊಂದಿಗೆ ಇಂತು ಯೋಚಿಸಿತು:—"ಈ ಹಿಂಡು ದಿನದಿನವೂ ನೀರಡಿಕೆಯಿಂದ ಇಲ್ಲಿಗೆ ಬರುತ್ತಿದೆ. ಇದರಿಂದ ನಮ್ಮ ವಂಶವೇ ಹಾಳಾಗುವ ಕಾಲವು ಬಂದಿರುವುದಲ್ಲಾ!'' ಇದನ್ನು

---

*ಯಾವುದಾದರೊಂದು ವಸ್ತುವನ್ನು ಧರಿಸಿರುವುದು ಆಧಾರ. ಧರಿಸಲ್ಪಟ್ಟಿರುವುದು ಆಧೇಯ. ಉದಾ:—ಕೊಡವು ಆಧಾರ. ನೀರು ಆಧೇಯ. ಭೂಮಿ ಆಧಾರ. ಭೂಮಿಯ ಮೇಲಿರುವ ವಸ್ತುಗಳು ಆಧೇಯ.

ಕೇಳಿ ವಿಜಯುವೆಂಬ ಇನ್ನೊಂದು ಶಶವು “ಚಿಂತಿಸಬೇಡ. ನಾನು ಇದಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಮಾಡುವೆನು” ಎಂಬುದಾಗಿ ಹೇಳಿ, ಕೂಡಲೇ ಅಲ್ಲಿಂದ ಹೊರಟಿತು. ನಡೆದುಬರುತ್ತ ದಾರಿಯಲ್ಲಿ ಹೀಗೆ ಯೋಚಿಸಿತು:- “ನಾನಾದರೆ ಬಲು ಚಿಕ್ಕ ಪ್ರಾಣಿ. ಆನೆಗಿಂತಲೂ ದೊಡ್ಡ ಜಂತುವು ಭೂಮಂಡಲದಲ್ಲಿಯೇ ಇಲ್ಲ. ಇಂತಿರಲು ಆನೆಯ ಹಿಂದಿನ ಮುಂದೆ ನಿಂತು ನಾನು ಏನು ಮಾಡಬಲ್ಲೆನು? ಏಕೆಂದರೆ, ಗಜವು ಸೋಕುತ್ತಿರು ವಾಗಲೇ ಕೊಲ್ಲುವುದು. ಸರ್ಪವು ಮೂಸಿನೋಡುತ್ತಿರುವಂತೆಯೇ ಸಾಯಿಸುವುದು. ಅರಸನು ನಗುತ್ತಲೇ ಕೊರಳು ಕೊಯ್ಯುವನು. ದುರು ಳನು ವಿನಯದಿಂದಲೇ ಕೊಲೆಮಾಡುವನು. ಆ ಕಾರಣ ಈಗ ನಾನು ಈ ಬೆಟ್ಟದ ಕೋಡುಗಲ್ಲಿನ ಮೇಲೆ ನಿಂತು ಸಲಗನನ್ನು ಕುರಿತು ಈ ರೀತಿ ಹೇಳುವೆನು.”

ಹೀಗೆ ಯೋಚಿಸಿ, ಅಂತೆಯೇ ಪರ್ವತಶಿಖರವನ್ನು ಹತ್ತಿ ಗಜರಾಜನನ್ನು ಕುರಿತು ಗಟ್ಟಿಯಾಗಿ ಕೂಗಿ ಹೇಳಿತು. ಆಗ ಯೂಥಪತಿಯು “ನೀನು ಯಾರು? ಎಲ್ಲಿಂದ ಬಂದಿರುವೆ?” ಎಂಬುದಾಗಿ ಕೇಳಿತು. ಆಗ ಮೊಲವು “ನಾನು ದೂತನು. ಭಗವಂತನಾದ ಚಂದ್ರದೇವನು ಕಳುಹಲಾಗಿ ಬಂದಿರು ವೆನು” ಎಂಬುದಾಗಿ ಉತ್ತರಕೊಟ್ಟಿತು. ಅದಕ್ಕೆ ಸಲಗನು “ನೀನು ಬಂದಿ ರುವ ಕೆಲಸವೇನು? ಅದನ್ನು ಹೇಳು” ಎಂದನು. ಆಗ ವಿಜಯನು ಇಂತೆಂ ದನು:-“ತನ್ನ ಮೈಯ ಮೇಲೆ ಕತ್ತಿಯನ್ನೆತ್ತಿದರೂ ದೂತನು ಎಂದಿಗೂ ಸಟೆ ಯಾಡತಕ್ಕವನಲ್ಲ. ಭೃತ್ಯನನ್ನು ಯಾವ ಸಂದರ್ಭದಲ್ಲಿಯೂ ಕೊಲ್ಲ ಬಾರದು. ಈ ಕಾರಣದಿಂದ ನಾನು ದಿಟವನ್ನೇ ಹೇಳತಕ್ಕವನು. ನನ್ನ ಒಡೆಯನಾದ ಚಂದ್ರದೇವನ ಅಪ್ಪಣೆಯನ್ನೇ ಈಗ ಹೇಳುವೆನು, ಕೇಳು. ಚಂದ್ರಸರೋವರದ ಸುತ್ತಲೂ ವಾಸವಾಗಿದ್ದ ಮೊಲಗಳಿಗೆ ತೊಂದರೆಯ ನ್ನುಂಟುಮಾಡಿ ಅವುಗಳನ್ನೆಲ್ಲ ನೀನು ಓಡಿಸಲು ಕಾರಣವೇನು? ಇದು ಯೋಗ್ಯವೇ? ಈ ಮೊಲಗಳೆಲ್ಲ ನನ್ನ ಸಂರಕ್ಷಣೆಗೆ ಒಳಪಟ್ಟುವು. ಈ ಕಾರಣ ದಿಂದಲ್ಲವೇ ನನಗೆ “ಶಶಿ” ಎಂಬ ಹೆಸರು ರೂಢಿಯಲ್ಲಿರುವುದು?” ಇಂತು ರಾಯಬಾರಿಯು ನುಡಿದ ಮಾತನ್ನು ಕೇಳಿ ಸಲಗನು ಹೆದರಿಕೆಯಿಂದ ನಡು ಗುತ್ತ “ಇದು ತಿಳಿಯದೆ ಮಾಡಿದ ತಪ್ಪು. ಇನ್ನು ಮೇಲೆ ಇಲ್ಲಿಗೆ ಬರು

ವುದಿಲ್ಲ" ಎಂಬುದಾಗಿ ಹೇಳಿತು. ಆಗ ಮೊಲವು "ಹಾಗಾದರೆ ಕೋಪದಿಂದ ನಡುಗುತ್ತಲಿರುವ, ಅಗೋ ಇದೇ ಕೊಳದಲ್ಲಿಯೇ ಕಾಣಬರುತ್ತಿರುವ ನಮ್ಮ ಒಡೆಯನಿಗೆ ಅಡ್ಡಬಿದ್ದು ಶರಣಾಗತನಾದರೆ ಆತನು ಸಮಾಧಾನಗೊಳ್ಳು ವನು. ಬಳಿಕ ಆತನ ಅನುಗ್ರಹವನ್ನು ಪಡೆದು ತೆರಳು" ಎಂದಿತು. ಆದಕ್ಕೆ ಗಜರಾಜನು ಒಪ್ಪಿದನು.

ಬಳಿಕ ರಾತ್ರಿ ಸಮಯದಲ್ಲಿ ಮೊಲವು ಗಜಪತಿಯನ್ನು ಕೊಳದ ಬಳಿಗೆ ಕರೆತಂದು ನೀರಿನಲ್ಲಿ ಮಾರ್ಪೊಳೆದು ಅಲುಗುತ್ತಿದ್ದ ಚಂದ್ರ ಬಿಂಬವನ್ನು ತೋರಿಸಿ, ಸಲಗನಿಂದ ನಮಸ್ಕಾರ ಮಾಡಿಸಿ—"ಸ್ವಾಮಿ! ಈ ಗಜರಾಜನು ತಿಳಿಯದೆ ಮಾಡಿದ ಅಪರಾಧವನ್ನು ಮನ್ನಿಸಬೇಕು" ಎಂಬುದಾಗಿ ಹೇಳಿ, ಸಲಗನನ್ನು ಬೀಳ್ಕೊಟ್ಟಿತು. ಅಂದಿನಿಂದ ಮೊಲ ಗಳು ಸುಖವಾಗಿದ್ದುವು. ಆ ಕಾರಣ 'ನಮ್ಮ ಅರಸನೇ ಮಹಾ ಪ್ರತಾಪ ಶಾಲಿಯು' ಎಂಬುದಾಗಿ ಆ ಹಕ್ಕಿಗಳು ಹೇಳಿದುದನ್ನು ಕೇಳಿ, ನಾನು "ನಮ್ಮ ದೊರೆಯು ಬಹು ಸಮರ್ಥನು. ಮೂಲೋಕವನ್ನೂ ಆಳುವ ಯೋಗ್ಯತೆಯು ಆತನಲ್ಲಿರುವುದು. ಆತನಿಗೆ ಸಮನಾದ ಪ್ರತಾಪಶಾಲಿಯು ಮತ್ತೊಬ್ಬನು ಇಲ್ಲವೇ ಇಲ್ಲ" ಎಂಬುದಾಗಿ ಇದಿರಿಸಿ ಮಾತನಾಡಿ ದೆನು. ಬಳಿಕ ಆ ಹಕ್ಕಿಗಳು ನನ್ನ ಮಾತನ್ನು ಸಹಿಸಲಾರದೆ, "ಹಾಗಾದರೆ ನೀನು ನಮ್ಮ ದೇಶಕ್ಕೆ ಏಕೆ ಬಂದೆ? ಇಲ್ಲಿ ಸಂಚರಿಸಲು ಕಾರಣವೇನು?" ಎಂಬುದಾಗಿ ನನ್ನನ್ನು ಬಿಗಿದು, ತಮ್ಮ ಅರಸನಾದ ಚಿತ್ರ ವರ್ಣನ ಬಳಿಗೆ ಎಳೆದುಯ್ದುವು. ಅರಸನ ಬಳಿ ಅಡ್ಡಬಿದ್ದು, ನನ್ನನ್ನು ತೋರಿ "ಸ್ವಾಮಿ! ಲಾಲಿಸಬೇಕು. ಈ ಹಾಳು ಕೊಕ್ಕರೆಯು ನಮ್ಮ ಗಡಿಯಲ್ಲಿಯೇ ತಿರುಗುತ್ತ ಮಹಾಪ್ರಭುಗಳನ್ನು ಹೀಯಾಳಿಸುತ್ತಿದೆ" ಎಂಬುದಾಗಿ ದೂರಿದುವು. "ಇವನಾರು? ಇಲ್ಲಿಗೆ ಬರಲು ಕಾರಣವೇನು?" ಎಂಬುದಾಗಿ ಅರಸನು ಪ್ರಶ್ನೆಮಾಡಲಾಗಿ, "ಹಿರಣ್ಯಗರ್ಭನ ಸೇವಕನು; ಕರ್ಪೂರದ್ವೀಪದಿಂದ ಬಂದಿರುವನು" ಎಂಬುದಾಗಿ ಅವು ಬಿನ್ನಯಿಸಿದುವು. ಅಷ್ಟರಲ್ಲಿ ಮಂತ್ರಿಯಾದ ಗೃಧ್ರನು "ಅಲ್ಲಿ ಮುಖ್ಯ ಮಂತ್ರಿಯು ಯಾರು?" ಎಂದನು. ಅದಕ್ಕೆ ನಾನು "ಸಕಲ ಶಾಸ್ತ್ರ ಪ್ರವೀಣನೆನಿಸಿದ ಸರ್ವಜ್ಞನೆಂಬ ಚಕ್ರವಾಕ" ಎಂದೆನು. "ಇದೀಗ ಯೋಗ್ಯ! ಅವನು ನಿಮ್ಮ ಅರಸನಿಗೆ ಸ್ವದೇಶದವನಲ್ಲವೇ?" ಎಂಬುದಾಗಿ ಕೇಳಿತು.

ಸ್ವದೇಶೀಯನೂ ಸತ್ಕುಲಪ್ರಸೂತನೂ ಶುದ್ಧಚರಿತನೂ ದೇಶವಾತ್ಸಲ್ಯಭರಿತನೂ ಪ್ರಜಾಭಿಮಾನಪೂರ್ಣನೂ ಎಂಬುದಾಗಿ ಪ್ರಖ್ಯಾತಿಪಡೆದು, ನೀತಿಶಾಸ್ತ್ರದ ಗುಟ್ಟನ್ನು ಅರಿತು, ಜೂಜು ಮೊದಲಾದ ಕೆಟ್ಟ ನಡೆವಳಿಗೆ ದೂರನೆನಿಸಿ, ವ್ಯವಹಾರದಲ್ಲಿ ನಿಪುಣತೆಯನ್ನೂ ಪ್ರಸಿದ್ಧಿಯನ್ನೂ ಪಡೆದು, ವಂಶಪರಂಪರೆಯಾಗಿ ರಾಜಭಕ್ತಿಸಂಪನ್ನನಾಗಿದ್ದು ವಿದ್ಯಾವಂತನೆನಿಸಿ, ಕೋಶವನ್ನು ವೃದ್ಧಿಗೊಳಿಸುವುದರಲ್ಲಿ ಆಸಕ್ತಿಯುಳ್ಳವನನ್ನೇ ಮಂತ್ರಿಪದವಿಯಲ್ಲಿ ನಿಯಮಿಸತಕ್ಕುದು ರಾಜನ ಮುಖ್ಯ ಕರ್ತವ್ಯ" ಎಂದಿತು.

ಇಷ್ಟರಲ್ಲಿ ಅಲ್ಲಿಯೇ ಇದ್ದ ಶುಕವು ಇಂತೆಂದಿತು:—"ದೇವಾ! ಕರ್ಪೂರದ್ವೀಪವೆಂಬುದು ಒಂದು ಸಣ್ಣ ದ್ವೀಪ. ಇಂತಹ ಅನೇಕ ಸಣ್ಣ ಸಣ್ಣ ದ್ವೀಪಗಳು ಜಂಬೂದ್ವೀಪಕ್ಕೆ ಸೇರಿವೆ. ಮಹಾಪ್ರಭುಗಳವರ ಆಳ್ವಿಕೆಗೆ ಒಳಪಟ್ಟೇ ಇದೆ." ಈ ಮಾತನ್ನು ಕೇಳಿ ಚಿತ್ರವರ್ಣನು, "ಅಹುದು. ಅದು ದಿಟ. ಏಕೆಂದರೆ ಅರಸನೂ, ಸೊಕ್ಕಿದವನೂ, ಎಳೆ ಮಕ್ಕಳೂ, ಹುಚ್ಚನೂ, ಹಣದ ಹೆಮ್ಮೆಯಿಂದ ಮೆರೆಯುತಕ್ಕವನೂ ದೊರೆಯಲಾರದ ವಸ್ತುವನ್ನು ಬಯಸುವರು. ಇಂತಿರಲು ದೊರೆಯ ಬಹುದಾದ ವಸ್ತುವಿನ ವಿಷಯದಲ್ಲಿ ಇವರ ಸಾಹಸವನ್ನು ಕೇಳಬೇಕೇ?" ಎಂದನು. ಆಗ ನಾನು ಈ ರೀತಿ ಉತ್ತರ ಕೊಟ್ಟೆನು:—"ಬಾಯಿ ಮಾತಿಗೆ ಬಡತನವಿಲ್ಲ. ಬಾಯಿಮಾತಿನಿಂದಲೇ ದೊರೆತನವು ಸಿಗುವುದಾದರೆ, ನಮ್ಮ ಅರಸನಾದ ಹಿರಣ್ಯಗರ್ಭನಿಗೆ ಜಂಬೂದ್ವೀಪದ ಮೇಲೆ ಸಂಪೂರ್ಣವಾದ ಅಧಿಕಾರವುಂಟು." ಬಳಿಕ ಗಿಳಿಯು "ಹಾಗಾದರೆ ಇದನ್ನು ನಿರ್ಣಯಿಸುವ ಬಗೆಯಾವುದು?" ಎಂದಿತು. ಅದಕ್ಕೆ ನಾನು "ಈ ವಿಷಯವು ಯುದ್ಧದಲ್ಲಿಯೇ ತೀರ್ಮಾನವಾಗಬೇಕು." ಎಂದೆನು. ಈ ಮಾತಿಗೆ ಚಿತ್ರವರ್ಣನು ನಕ್ಕು, "ಹಾಗಾದರೆ ನಿಮ್ಮ ಅರಸನಲ್ಲಿಗೆ ಹೋಗಿ ಸಿದ್ಧಗೊಳಿಸು" ಎಂಬುದಾಗಿ ಹೇಳಿದನು. ಆಗ ನಾನು "ನಿಮ್ಮ ದೂತನನ್ನು ಕಳುಹಿಸಬಹುದು" ಎಂದೆನು. ಆಗ ರಾಜನು ರಾಯಬಾರಿಯಾಗಿ ಹೊರಡತಕ್ಕವನಾರು? ದೂತಕೃತ್ಯವೆಂದರೆ ಬಾಯಿ ಮಾತಲ್ಲ. ರಾಜಭಕ್ತಿಸಂಪನ್ನನೂ, ಗುಣಶಾಲಿಯೂ, ಶುದ್ಧಚರಿತನೂ, ಸಮರ್ಥನೂ, ಪ್ರತಿಭಾಶಾಲಿಯೂ, ವ್ಯಸನಹೀನನೂ, ಹಗೆಗಳ ಗುಟ್ಟನ್ನು

ಅರಿತವನೂ, ಸಮಯಕ್ಕೆ ತಕ್ಕಂತೆ ಯುಕ್ತಿಪರನೂ ಎನಿಸಿದ ಬ್ರಾಹ್ಮಣನನ್ನೇ ರಾಯಬಾರಿಯಾಗಿ ನಿಯಮಿಸಬೇಕು" ಎಂದನು. ಆಗ ಮಂತ್ರಿಯು "ದೂತರಿಗೇನೂ ಕಡಿಮೆ ಇಲ್ಲ. ಆದರೆ ಬ್ರಾಹ್ಮಣನೇ ರಾಯಬಾರಿಯಾಗಿ ಹೊರಡಬೇಕೆಂಬುದು ಶಾಸ್ತ್ರವಿಹಿತವಾದುದು. ಏಕೆಂದರೆ;

"ಅವನು ಯಾವಾಗಲೂ ಸ್ವಾಮಿಯ ಹಿತವನ್ನೇ ಬಯಸುತ್ತಾನೆ. ಹೇಗಾದರೂ ಕಾರ್ಯವನ್ನು ಸಾಧಿಸಬೇಕೆಂಬುದೇ ಅವನ ಉದ್ದೇಶ. ರಾಜಕಾರ್ಯವು ಎಲ್ಲಿಯಾದರೂ ಹಾಳಾಗಿಹೋಗಲಿ, ತಾನು ಐಶ್ವರ್ಯವಂತನಾದರೆ ಸರಿ ಎಂಬ ದುರಾಸೆಯು ಅವನಲ್ಲಿಲ್ಲ. ಕಾಲಕೂಟವು ಶಿವನ ಕೊರಳನ್ನು ಸೇರಿದ್ದರೂ ತಾನು ಕಪ್ಪಾಗಿಯೇ ಇರುವುದಲ್ಲದೆ, ತನ್ನ ಮಾಲಿನ್ಯವನ್ನು ಹೋಗಲಾಡಿಸಿಕೊಳ್ಳಬೇಕೆಂಬ ಆಸೆಯು ಅದಕ್ಕೆ ಹುಟ್ಟಲೇ ಇಲ್ಲವಷ್ಟೆ!" ಎಂದನು.

"ಹಾಗಾದರೆ ಶುಕವೇ ಹೊರಡಬೇಕು. ಗಿಳಿಯೇ! ಈತನೊಂದಿಗೆ ನೀನೇ ಹೋಗಿ ನಮ್ಮ ಅಭಿಪ್ರಾಯವನ್ನು ಹಿರಣ್ಯಗರ್ಭನಿಗೆ ತಿಳಿಸಿ ಬಾ" ಎಂಬುದಾಗಿ ಚಿತ್ರವರ್ಣನು ಆಣತಿ ಇತ್ತನು. ಆಗ ಶುಕವು—"ಮಹಾಸ್ವಾಮಿಯವರ ಅಪ್ಪಣೆಯನ್ನು ನೆರವೇರಿಸುವುದರಲ್ಲಿ ಯಾವ ಅಭ್ಯಂತರವೂ ಇಲ್ಲ. ಆದರೆ ಈ ದುರುಳ ಬಕದೊಂದಿಗೆ ನಾನು ಹೋಗಲಾರೆನು. ದುರ್ಜನನ ಸಂಗಡ ಪ್ರಯಾಣಮಾಡುವುದು ಶಾಸ್ತ್ರವಿರುದ್ಧವಾದುದು. ಅಂತೆಯೇ ಹಿರಿಯರು ಹೇಳಿರುತ್ತಾರೆ. ಖೂಳನು ಕೆಟ್ಟ ಕೆಲಸವನ್ನು ಮಾಡುವನು. ಅದರ ಫಲವನ್ನು ಸಜ್ಜನರು ಅನುಭವಿಸಬೇಕಾಗುವುದು. ದಶಕಂಠನು ಸೀತೆಯನ್ನು ಕದ್ದುಯ್ದನು. ಸಮುದ್ರನು ಬಂಧನಕ್ಕೆ ಗುರಿಯಾದನು. ಮತ್ತು ದುರ್ಜನರೊಂದಿಗೆ ಒಂದೇ ನಿಮಿಷವಾದರೂ ಪ್ರಯಾಣಮಾಡಬಾರದು. ಏಕೆಂದರೆ, "ಕಾಗೆಯ ಸಂಗದಿಂದ ಹಂಸವು ಸತ್ತಿತು. ಸಂಗಡ ಪ್ರಯಾಣಮಾಡಿ, ವರ್ತಕ ಪಕ್ಷಿಯು ಹಾಳಾಯಿತು" ಎಂಬುದಾಗಿ ಬಿನ್ನಯಿಸಿತು. ಈ ಮಾತನ್ನು ಕೇಳಿ, ಚಿತ್ರವರ್ಣನು "ಅದು ಹೇಗೆ?" ಎಂಬುದಾಗಿ ಪ್ರಶ್ನೆಮಾಡಲು, ಗಿಳಿಯು ಆ ಸಮಾಚಾರವನ್ನು ಹೇಳತೊಡಗಿತು.

## ಆನೆಯ ಕಥೆ

ಉಜ್ಜಯಿನಿಗೆ ಹೋಗುವ ದಾರಿಯಲ್ಲಿ ಒಂದು ದೊಡ್ಡ ಅರಳಿಯ ಮರವಿದೆ. ಅದರ ಮೇಲೆ ಕಾಗೆಯೂ ಹಂಸವೂ ವಾಸವಾಗಿದ್ದುವು.

ಒಮ್ಮೆ ಬೇಸಿಗೆಯಲ್ಲಿ ಬಳಲಿದ ಒಬ್ಬ ದಾರಿಗನು ಅಂಬು ಬಿಲ್ಲು ಗಳನ್ನು ಪಕ್ಕದಲ್ಲಿಟ್ಟುಕೊಂಡು, ಅದರ ನೆರಳಿನಲ್ಲಿ ಮಲಗಿ ನಿದ್ರಿಸು ತ್ತಿದ್ದನು. ಸ್ವಲ್ಪ ಹೊತ್ತಿನ ಮೇಲೆ ಬಿಸಿಲು ಅವನ ಮೋರೆಯ ಮೇಲೆ ಬಿದ್ದಿತು. ಇದನ್ನು ಕಂಡು ಮರುಕಗೊಂಡ ಹಂಸೆಯು ತನ್ನ ಗರಿಗಳನ್ನು ಕೆದರಿ ನೆರಳು ಮಾಡಿತು. ಅವನು ಸುಖವಾಗಿ ನಿದ್ರೆಮಾಡಿ, ಬಾಯ್ದೆರೆದು ಆಕಳಿಸಿದನು. ಅಷ್ಟರಲ್ಲಿ ಹೆರರ ಸುಖವನ್ನು ನೋಡಿ ಸಹಿಸಲಾರದ ಕಾಗೆಯು ತನ್ನ ಜಾತಿಸಹಜವಾದ ದುರುಳತನದಿಂದ ಅವನ ಮೋರೆಯು ಮೇಲೆ ಹಿಚಿಕೆ ಹಾಕಿ ಹಾರಿಹೋಯಿತು. ಇದರಿಂದ ಅವನು ಎಚ್ಚತ್ತು ಮೇಲೆ ನೋಡಿದನು. ಹಂಸೆಯು ಕಾಣಿಸಿತು. ಸಿಟ್ಟಿನಿಂದ ಕೂಡಲೇ ಅದನ್ನು ಪಕ್ಕದಲ್ಲಿದ್ದ ಬಿಲ್ಲಿನಿಂದ ಹೊಡೆದು ಕೊಂದನು. ಆದುದರಿಂದ ನಾವು ಯಾವಾಗಲೂ ದುರುಳರ ಸಂಗವನ್ನು ಮಾಡಬಾರದು. ಸಜ್ಜನ ರೊಂದಿಗೇ ಸೇರಬೇಕು. ಹಗಲೂ ಇರುಳೂ ಪುಣ್ಯಕಾರ್ಯಗಳನ್ನೇ ಮಾಡುತ್ತಿರಬೇಕು. ಈ ದೇಹವು ಶಾಶ್ವತವಲ್ಲವೆಂಬುದನ್ನು ಯಾವಾಗಲೂ ನೆನಪಿನಲ್ಲಿಡಬೇಕು.

ಇನ್ನು ವರ್ತಕಪಕ್ಷಿಯ ಕಥೆಯನ್ನು ಹೇಳುವೆನು. ಲಾಲಿಸಬೇಕು.

## ೩೯ನೆಯ ಕಥೆ

ಒಮ್ಮೆ ಹಕ್ಕಿಗಳೆಲ್ಲವೂ ಭಗವಂತನಾದ ಗರುಡನ ಜಾತ್ರೆಗಾಗಿ ಸಮುದ್ರ ತೀರಕ್ಕೆ ತೆರಳಿದುವು. ಆಗ ಒಂದು ವರ್ತಕಪಕ್ಷಿಯು ಕಾಗೆಯೊ ಡನೆ ಜಾತ್ರೆಗೆ ಹೊರಟಿತು. ದಾರಿಯಲ್ಲಿ ಒಬ್ಬ ಗೊಲ್ಲನು ಮೊಸರಿನ ಮಡಿಕೆ ಯನ್ನು ಹೊತ್ತುಕೊಂಡು ಹೋಗುತ್ತಿದ್ದನು. ಕಾಗೆಯು ಅವನನ್ನು ಬಾರಿ ಬಾರಿಗೂ ತೊಂದರೆಗೊಳಿಸುತ್ತಲೇ ಇದ್ದಿತು. ಬಳಿಕ ಆ ಗೊಲ್ಲನು ಇದರ ಹಾವಳಿಯನ್ನು ತಾಳಲಾರದೆ ಮೊಸರಿನ ಮಡಕೆಯನ್ನು ನೆಲಕ್ಕೆ ಇಳುಹಿ ನೋಡುವಾಗ್ಗೆ ಕಾಗೆಯೂ ವರ್ತಕ ಪಕ್ಷಿವೂ ಕಂಡುಬಂದುವು. ಅಂಜಿಕೆ ಯಿಂದ ಕಾಗೆಯು ದೂರವಾಗಿ ಹಾರಿಹೋಯಿತು. ತನ್ನಲ್ಲಿ ಯಾವ ಅಪರಾ ಧವೂ ಇಲ್ಲದ ಕಾರಣ, ಮೆಲ್ಲಗೆ ಹಾರುವ ಸ್ವಭಾವವುಳ್ಳ ಆ ವರ್ತಕಪಕ್ಷಿಯು ಅವನಿಗೆ ಸಿಲುಕಿ ತನ್ನ ಪ್ರಾಣಗಳನ್ನು ಬಲಿಗೊಟ್ಟಿತು. "ಆದುದರಿಂದ ದುರುಳರೊಂದಿಗೆ ಸಹವಾಸವೂ ಪ್ರಯಾಣವೂ ಶ್ರೇಯಸ್ಕರವಾದುದಲ್ಲ"

ಎಂಬುದಾಗಿ ಗಿಳಿಯು ಹೇಳಿತು. ಬಳಿಕ ನಾನು "ಅಣ್ಣಾ, ಗಿಳಿರಾಯಾ! ಹಾಗೇಕೆ ಹೇಳುವೆ? ನನಗೆ ಪ್ರಭುಗಳು ಹೇಗೆಯೋ ನೀನೂ ಹಾಗೆಯೇ" ಎಂದೆನು. ಆಗ ಗಿಳಿಯು ಇಂತೆಂದಿತು:—"ಇರಬಹುದು; ಅದರೂ ನಂಬುವುದಕ್ಕಿಲ್ಲ. ಏಕೆಂದರೆ, ಖೂಳರ ಮಾತು ಮುಗುಳ್ನಗೆಯಿಂದ ಕೂಡಿ ಪ್ರಿಯವಾಗಿದ್ದರೂ ಅಕಾಲದಲ್ಲಿ ಕಂಡುಬಂದ ಹೂವಿನಂತೆ ಭಯಂಕರವಾದುದು. ನೀನು ದುರುಳನೆಂಬುದು ನಿನ್ನ ಮಾತುಗಳಿಂದಲೇ ಹೊರಪಟ್ಟಿತು. ಈಗ ನಡೆಯುವ ಈ ಇಬ್ಬರು ಅರಸರ ಕಾಳಗಕ್ಕೂ ನೀನೇ ಕಾರಣವಷ್ಟೆ! ನೋಡು."

ಬಳಿಕ ಚಿತ್ರವರ್ಣರಾಜನು ನನ್ನನ್ನು ಪದ್ಧತಿಯ ಪ್ರಕಾರ ಮನ್ನಿಸಿ ಬೀಳ್ಕೊಟ್ಟನು. ಗಿಳಿಯೂ ಹಿಂದೆಯೇ ಬರುತ್ತಿದೆ. ಇದೆಲ್ಲವನ್ನೂ ಲಾಲಿಸಿದ ಬಳಿಕ,'ಮುಂದಣ ಕರ್ತವ್ಯದಲ್ಲಿ ಮಹಾಸ್ವಾಮಿಯವರು ಪರಾಮರ್ಶಿಸಬೇಕು' ಎಂಬುದಾಗಿ ದೀರ್ಘಮುಖನು ಹಂಸರಾಜನೊಂದಿಗೆ ಹೇಳಿ ಸುಮ್ಮನಾದನು.

ಆಗ ಚಕ್ರವಾಕನು ನಗುತ್ತ ಇಂತೆಂದನು:—"ಸ್ವಾಮಿ! ಈ ದೀರ್ಘಮುಖನು ದೇಶಾಂತರಕ್ಕೆ ಹೋಗಿ ತನ್ನ ಶಕ್ತಿಯಿದ್ದಷ್ಟು ರಾಜಕಾರ್ಯವನ್ನು ಸಾಧಿಸಿರುವನು. ಆದರೆ ಇದು ಬುದ್ಧಿಶಾಲಿಯ ಲಕ್ಷಣವಲ್ಲ. ಏಕೆಂದರೆ, ನೂರಾದರೂ ಕೊಡಬಹುದು. ಎಂದಿಗೂ ವಾದ ಮಾಡಬಾರದು. ಇದೀಗ ಬುದ್ಧಿಶಾಲಿಯ ಲಕ್ಷಣ. ಕಾರಣವಿಲ್ಲದೆಯೇ ಜಗಳವಾಡುವುದು ಮೂರ್ಖನ ಸ್ವಭಾವವು." ಈ ಮಾತನ್ನು ಕೇಳಿ ಅರಸನು "ಈಗ ನಿಂದೆಯಿಂದ ಫಲವಿಲ್ಲ. ಮುಂದಣ ಕಾರ್ಯವನ್ನು ಯೋಚಿಸಬೇಕು" ಎಂದನು. ಆಗ ಮಂತ್ರಿಯು "ಸ್ವಾಮಿ! ನಾನು ಏಕಾಂತವಾಗಿ ಕೆಲವು ವಿಷಯಗಳನ್ನು ಅರಿಕೆಮಾಡಬೇಕೆಂದಿರುವೆನು. ಏಕೆಂದರೆ, ಮುಖದ ಬಣ್ಣ, ಧ್ವನಿ, ಸಂಜ್ಞೆ, ಕಣ್ಣು ಮೋರೆಗಳಲ್ಲಿ ವ್ಯತ್ಯಾಸ, ಈ ಮುಂತಾದುವುಗಳಿಂದಲೇ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ಬುದ್ಧಿಶಾಲಿಗಳು ಊಹಿಸುತ್ತಾರೆ. ಆ ಕಾರಣ, ಮಂತ್ರಾಲೋಚನೆಯನ್ನು ಏಕಾಂತವಾಗಿರುವ ಪ್ರದೇಶದಲ್ಲಿ ಮಾಡಬೇಕು" ಎಂಬುದಾಗಿ ಬಿನ್ನಯಿಸಿದನು.

ಈ ಮಾತನ್ನು ಕೇಳಿ ಮಿಕ್ಕಪರಿವಾರವೆಲ್ಲ ಹೊರಟು ಹೋಯಿತು. ಅರಸನೂ ಮಂತ್ರಿಯೂ ಅಲ್ಲಿಯೇ ಏಕಾಂತವಾಗಿ ಮಾತನಾಡ ತೊಡಗಿದರು.

ಆಗ ಮಂತ್ರಿಯು ಇಂತೆಂದನು:-"ದೇವಾ! ನಮ್ಮ ಅಧಿಕಾರಿಗಳಲ್ಲಿ ಯಾರೋ ದುರುಳರ ಪ್ರೋತ್ಸಾಹವಿಲ್ಲದೆ ಈ ಕೊಕ್ಕರೆಯು ಇಷ್ಟೊಂದು ಕಾರ್ಯಭಾರವನ್ನು ನಡೆಯಿಸಿರಲಾರದು. ಏಕೆಂದರೆ, ವೈದ್ಯನಿಗೆ ರೋಗಿಯು ಅನುಕೂಲನು. ದುರ್ವ್ಯಸನಿಗಳು ಅಧಿಕಾರಿಗಳಿಗೆ ಅನುಕೂಲರು. ವಿದ್ಯಾವಂತರು ಮೂರ್ಖರನ್ನು ವಶಪಡಿಸಿ, ಆಟದ ಬೊಂಬೆಗಳಂತೆ ಕುಣಿಸುತ್ತ ಕಾಲಹರಣಮಾಡುವರು. ಸಜ್ಜನರು ಸತ್ಪುರಷರ ಆಶ್ರಯದಿಂದಲೇ ಬದುಕುವರು." ಈ ಮಾತನ್ನು ಕೇಳಿ ಹಿರಣ್ಯಗರ್ಭನು "ಇರಲಿ, ಕಾರಣವನ್ನು ಆ ಮೇಲೆ ಕಂಡುಹಿಡಿದರಾಯಿತು. ಈಗ ಮಾಡಬೇಕಾದುದನ್ನು ಹೇಳು" ಎಂದನು. ಆಗ ಮಂತ್ರಿಯು-"ದೇವಾ! ಗೂಢಚಾರರನ್ನು ಕಳುಹಿ ಅವರ ಮೂಲಕ ಹಗೆಗಳ ಸನ್ನಾಹಗಳನ್ನೂ ಬಲಾಬಲಗಳನ್ನೂ ತಿಳಿಯಬೇಕು. ತನ್ನ ಮತ್ತು ಹಗೆಯ ಕಾರ್ಯಾಕಾರ್ಯಗಳನ್ನು, ಲೋಕದ ಸುದ್ದಿಯನ್ನೂ ತಿಳಿಯಬೇಕಾದರೆ ಅರಸನಿಗೆ ಗೂಢಚಾರನೇ ಕಣ್ಣು. ಬೇಹುಗಾರನಿಲ್ಲದ ಅರಸು ಕುರುಡನೇ ಸರಿ. ಅವನು ತನಗೆ ನಂಬುಗೆಯುಳ್ಳವನನ್ನು ಸಂಗಡ ಕರೆದುಕೊಂಡು ಹೋಗಬೇಕು. ಹೀಗೆ ತೆರಳಿದ ಚಾರನು ತಾನು ಅಲ್ಲಿಯೇ ನೆಲಸಿ, ಚೆನ್ನಾಗಿ ಪರಿಕಿಸಿ, ನಿಜವನ್ನು ತಿಳಿದು ಅಲ್ಲಿನ ರಹಸ್ಯಗಳನ್ನು ಅತ್ಯಂತ ಗೂಢವಾಗಿ ಎರಡನೆಯವನ ಮೂಲಕ ಆಗಾಗ್ಗೆ ಹೇಳಿ ಕಳುಹಿಸುತ್ತಿರಬೇಕು. ಇದೀಗ ರಾಜನೀತಿಯು. ಹಿರಿಯರು ಅಂತೆಯೇ ಹೇಳಿರುವರು. ಪುಣ್ಯಕ್ಷೇತ್ರಗಳಲ್ಲಿಯೋ, ತೀರ್ಥಗಳಲ್ಲಿಯೋ, ಆಶ್ರಮಗಳಲ್ಲಿಯೋ, ದೇವಾಲಯಗಳಲ್ಲಿಯೋ, ಶಾಸ್ತ್ರಾಧ್ಯಯನ ನಿಮಿತ್ತವಾಗಿ ತಾಪಸವೃತ್ತಿಯನ್ನು ಕೈಕೊಂಡಿರುವ ತಮ್ಮ ಚಾರರೊಂದಿಗೆ ಮಾತನಾಡಬೇಕು. ಗೂಢಚಾರನೆಂದರೆ ಸಾಮಾನ್ಯನಲ್ಲ. ನೆಲದ ಮೇಲೆಯೂ ನೀರಿನಲ್ಲಿಯೂ ಸಮಾನವಾಗಿ ಸಂಚರಿಸತಕ್ಕವನು. ಆ ಕಾರಣ ಕೊಕ್ಕರೆಯನ್ನು ಆ ಕೆಲಸದಲ್ಲಿ ನಿಯಮಿಸಬೇಕು. ಇದಕ್ಕೆ ಬೆಂಬಲವಾಗಿ ಮತ್ತೊಂದು ಕೊಕ್ಕರೆಯನ್ನು ಕಳುಹಬೇಕು. ಅವರಿಬ್ಬರ ಕುಟುಂಬದವರೆಲ್ಲ ಅರಮನೆಯಲ್ಲಿಯೇ ಇರಬೇಕು. ಮತ್ತು ಇದೆಲ್ಲವೂ ಅತ್ಯಂತ ರಹಸ್ಯವಾಗಿ ನಡೆಯಬೇಕು. ಏಕೆಂದರೆ, ಮಂತ್ರಾಲೋಚನೆಯು ಆರು ಕಿವಿಗಳಿಗೆ ಬಿದ್ದರೆ ರಟ್ಟಾಗುವುದು ದಿಟ. ನಾಲ್ಕು ಕಿವಿಗಳಿಗೆ

ಮಾತ್ರವೇ ತಿಳಿದಿದ್ದರೆ ಅದು ಗುಟ್ಟಾಗಿಯೇ ನಿಲ್ಲುವುದು. ಈ ಕಾರಣ ದಿಂದ ಮಂತ್ರಾಲೋಚನೆಯ ಸಮಯದಲ್ಲಿ ರಾಜನೇ ಎರಡನೆಯವನಾಗಿರ ಬೇಕು. ಇನ್ನು, ಆ ರೀತಿ ಮಾಡಿದ ಆಲೋಚನೆಯು ಹೊರಪಟ್ಟಿತೆಂದರೆ, ಅದರಿಂದುಂಟಾಗುವ ಕೇಡನ್ನು ತಿದ್ದುಪಡಿಸಲು ಯಾರಿಗೂ ಸಾಧ್ಯವಿಲ್ಲ ವೆಂಬುದಾಗಿ ನೀತಿಜ್ಞರ ಅಭಿಪ್ರಾಯ" ಎಂಬುದಾಗಿ ಬಿನ್ನಯಿಸಿದನು.

ಇದೆಲ್ಲವನ್ನು ಕೇಳಿ ಅರಸನು ಸ್ವಲ್ಪ ಹೊತ್ತು ಯೋಚಿಸುತ್ತಿದ್ದು "ಈ ಕಾರ್ಯಕ್ಕೆ ತಕ್ಕ ಬೇಹುಗಾರನು ದೀರ್ಘಮುಖನೇ ಸರಿ. ಅವನು ಈಗ ನಮಗೆ ದೊರೆತಿರುವುದೂ ಒಂದು ಪುಣ್ಯವೇ ಸರಿ!" ಎಂದನು. ಆಗ ಮಂತ್ರಿಯು "ಹಾಗಾದರೆ ಜಯಲಕ್ಷ್ಮಿಯೂ ದೊರೆತಂತೆಯೇ ಭಾವಿಸ ಬೇಕು" ಎಂಬುದಾಗಿ ಉತ್ತರಕೊಟ್ಟನು.

ಈ ವೇಳೆಗೆ ದ್ವಾರಪಾಲಕನು ಒಳಹೊಕ್ಕು ಅಡ್ಡಬಿದ್ದು "ಜೀಯಾ! ಜಂಬೂದ್ವೀಪದಿಂದ ಒಂದು ಗಿಳಿಯು ಬಂದು ಬಾಗಿಲ ಬಳಿ ಕಾದಿರುತ್ತದೆ" ಎಂಬುದಾಗಿ ವಿಜ್ಞಾಪಿಸಿದನು. ಹಿರಣ್ಯಗರ್ಭನು ಚಕ್ರವಾಕನ ಮೋರೆ ಯನ್ನು ನೋಡಿದನು. "ಈಗ್ಗೆ ಬಿಡಾರದಲ್ಲಿ ವಿಶ್ರಮಿಸಿಕೊಳ್ಳುವಂತೆ ಹೇಳು. ಆ ಮೇಲೆ ಕರೆತಂದು ಸನ್ನಿಧಾನದಲ್ಲಿ ಕಾಣಿಸುವೆಯಂತೆ" ಎಂಬುದಾಗಿ ಮಂತ್ರಿಯು ಆಜ್ಞಾಪಿಸಿದನು. "ಪ್ರಭುಗಳ ಅಪ್ಪಣೆ" ಎನ್ನುತ್ತ ದ್ವಾರಪಾಲನು ಹೊರಬಂದು ಗಿಳಿಯನ್ನು ಬಿಡಾರಕ್ಕೆ ಕರೆದು ಯ್ದನು. ಬಳಿಕ ಅರಸನು "ಹೇಗೂ ಯುದ್ಧವೇನೋ ಒದವಿತು" ಎಂದನು. ಆಗ ಮಂತ್ರಿಯು "ಸ್ವಾಮಿ! ಮೊದಲೇ ಯುದ್ಧಕ್ಕೆ ತೆರಳು ವುದು ತರವಲ್ಲ. ಇದು ಶಾಸ್ತ್ರಸಮ್ಮತವೂ ಅಲ್ಲ. ಮತ್ತು ಹಗೆಯನ್ನು ಯುದ್ಧದಿಂದಲೇ ಗೆಲ್ಲಬೇಕೆಂಬುದು ಸರಿಯಲ್ಲ. ಹೋರಾಡುವ ಇತ್ತಂಡ ದವರಿಗೂ ಜಯವಾಗುವುದಿಲ್ಲವಷ್ಟೆ; ಯಾರಾದರೊಬ್ಬರು ಸೋಲಲೇ ಬೇಕು. ಇನ್ನು, ಸಾಮ, ದಾನ, ಭೇದ, ಇವುಗಳಲ್ಲಿ ಒಂದರಿಂದ ಆಗಲಿ ಅಥವಾ ಮೂರರಿಂದ ಆಗಲಿ, ಶತ್ರುವನ್ನು ಗೆಲ್ಲುವುದಕ್ಕೆ ಸಾಹಸಮಾಡ ಬೇಕು. ಯುದ್ಧಕ್ಕೆ ಮಾತ್ರ ಎಂದಿಗೂ ಪ್ರಯತ್ನಿಸಬಾರದು. ಏಕೆಂದರೆ, ಹೋರಾಟವು ಒದವಿದಾಗ ಎಲ್ಲರೂ ಶೂರರೇ. ಇದಿರಾಳಿನ ಸಾಮರ್ಥ್ಯ ವನ್ನು ತಿಳಿಯುವ ವರೆಗೆ ಪ್ರತಿಯೊಬ್ಬನೂ ತನ್ನ ಶೌರ್ಯವೇ ಹೆಚ್ಚಿನ

ದೆಂಬುದಾಗಿ ಗರ್ವಪಡುವನಷ್ಟೆ! ಬಂಡೆಯನ್ನು ಕೋಲಿನ ಸನ್ನೆಯಿಂದ ಎಬ್ಬಿಸುವಷ್ಟು ಸುಲಭವಾಗಿ ಕೈಯಿಂದ ವಿಾಟುವುದಕ್ಕೆ ಆದೀತೇ? ಸ್ವಲ್ಪ ವಾದ ಉಪಾಯದಿಂದಲೇ ಮಹತ್ತರವಾದ ಕಾರ್ಯವು ಕೈಗೂಡುವು ದೆಂಬುದು ಮಂತ್ರಕ್ಕೆ ಮುಖ್ಯವಾದ ಫಲ. ಹೇಗೂ ಯುದ್ಧಮಾಡಿದಲ್ಲದೆ ಬಗೆ ಇಲ್ಲವಾದರೆ, ಆಗ ಆ ಸಮಯಕ್ಕೆ ತಕ್ಕಂತೆ ನಡೆಯಬೇಕು. ಏಕೆಂದರೆ, ಸಮಯವರಿತು ಪ್ರಯತ್ನಮಾಡಿದಲ್ಲಿ ಕೃಷಿಯು ಒಳ್ಳೆಯ ರೀತಿಯಿಂದ ಫಲಿಸುವಂತೆ ಅರಸನೆ, ನೀತಿಯೂ ಕಾಲಾಂತರದಲ್ಲಿ ಫಲಿಸುವುದ ಲ್ಲದೆ, ಉತ್ತರಕ್ಷಣದಲ್ಲಿಯೇ ಫಲವನ್ನು ತೋರಲಾರದು. ಇನ್ನು ಆಪತ್ತು ದೂರದಲ್ಲಿರುವಾಗ ಹೆದರಬೇಕು. ಸಮಿಾಪಿಸಿದಾಗ ಶೌರ್ಯವನ್ನು ತೋರಬೇಕು. ಇದೀಗ ಮಹಾಪುರುಷನ ಲಕ್ಷಣ. ಮಹಾತ್ಮನು ತನಗೆ ವಿಪತ್ತು ಬಂದಾಗ ಧೈರ್ಯದಿಂದ ನಿಲ್ಲುವನು. ಮನಸ್ಸಿನಲ್ಲಿ ಕಳವಳಗೊಂಡರೆ ಅದೇ ದೊಡ್ಡ ವಿಘ್ನ. ಆ ವಿಘ್ನವು ಸಕಲ ಸಿದ್ಧಿಗಳನ್ನೂ ಭಂಗಗೊಳಿಸುವುದು. ನೀರು ತಣ್ಣಗಿದ್ದರೂ ಬೆಟ್ಟಗಳನ್ನು ಕೂಡ ಕೊರೆದು ಉರುಳಿಸುವುದಿಲ್ಲವೇ? ಮುಖ್ಯವಾಗಿ ಈಗ ಹೇಳಬೇಕಾದುದೇನೆಂದರೆ, ನಮಗೆ ಈಗ ಇದಿರಾಳಾಗಿ ನಿಂತಿರುವ ಚಿತ್ರವರ್ಣನು ಮಹಾ ಬಲ ಶಾಲಿಯು. ಬಲ್ಲಿದನ ಸಂಗಡ ಹೋರಾಡುವುದಕ್ಕೆ ಶಾಸ್ತ್ರಸಮ್ಮತಿಯಾಗಲಿ ಉದಾಹರಣೆಯಾಗಲಿ ಇಲ್ಲ. ಆ ಕಾರಣ ಮನುಷ್ಯನಿಗೂ ಆನೆಗೂ ಹೋರಾಟವು ಸಂಭವಿಸಿದರೆ ಹೇಗೆಯೋ ಈಗ ನಮಗೂ ಹಾಗೆಯೇ. ಇನ್ನು ಸಮಯವು ಪ್ರತಿಕೂಲವಾಗಿರುವಾಗ ಹಗೆಯೊಂದಿಗೆ ಹೋರಾಡಲು ಇದಿರು ನಿಲ್ಲುವುದು ಹೆಡ್ಡತನವೇ ಸರಿ. ಬಲ್ಲಿದನೊಡನೆ ಹೋರಾಟ ವೆಂಬುದು ಹುಳುವಿಗೆ ರೆಕ್ಕೆಗಳು ಮೊಳೆತಂತೆಯೇ ಇರುವುದು. ಆಮೆ ಯಂತೆ ದೇಹವನ್ನು ಕುಗ್ಗಿಸಿ, ಪೆಟ್ಟನ್ನು ಸೈರಿಸಬೇಕು. ಸಮಯವು ಒದ ವಿದ ಕೂಡಲೇ ಕಾಳ ಸರ್ಪನಂತೆ ಎದ್ದು ನಿಲ್ಲಬೇಕು."

"ಹೊಳೆಯು ಗರಿಕೆಯನ್ನೂ ಹೆಮ್ಮರನನ್ನೂ ಸಮಾನವಾಗಿಯೇ ಬೇರು ಕೊರೆದು ಬುಡಮುಟ್ಟ ಕೀಳುವುದು; ಅಂತೆಯೇ ಉಪಾಯಗಾರನು ತನ ಗಿಂತಲೂ ಬಲಶಾಲಿಯನ್ನೂ ಬಲಹೀನನನ್ನೂ ಒಂದೇ ರೀತಿಯಾಗಿ ಇದಿ ರಿಸುವನು. ಈಗ ನಾವು ಚಾರನನ್ನು ಕಳುಹಬೇಕು. ಅವನು ಹಿಂದಿ

ರುಗುವಷ್ಟರಲ್ಲಿ ನಾವು ದುರ್ಗವನ್ನು ಭದ್ರಪಡಿಸಬೇಕು. ದುರ್ಗವು ಯುದ್ಧಕ್ಕೆ ಮುಖ್ಯ ಸಾಧನವಲ್ಲವೇ? ಕೋಟೆಯೊಳಗಡೆಯಿಂದ ಯುದ್ಧ ಮಾಡುವ ಒಬ್ಬ ಬಿಲ್ಲಾಳು ಹೊರಗೆ ನಿಂತು ಯುದ್ಧಮಾಡುವ ನೂರು ಮಂದಿಯನ್ನು ಇದಿರಿಸಬಲ್ಲನು. ಅಂತಹವರು ನೂರು ಮಂದಿ ದುರ್ಗದ ಒಳಗಡೆ ಇದ್ದರೆ, ಲಕ್ಷ ಮಂದಿ ಹೊರಗಣವರನ್ನು ಪ್ರತಿಭಟಿಸಬಹುದು. ಅದ ರಿಂದ ಕೋಟೆಯು ಮುಖ್ಯವಾದ ಸಾಧನ. ಕೋಟೆಯೂ, ಅಡಗಿಕೊಳ್ಳು ವುದಕ್ಕೆ ತಕ್ಕ ನೆಲಮಾಳಿಗೆಯೂ, ಇಲ್ಲದಿರತಕ್ಕ ಅರಸನು ಸುಲಭವಾಗಿ ಹಗೆ ಗಳ ಕೈಗೆ ಬೀಳುವನು. ದುರ್ಗವೂ, ರಹಸ್ಯಸ್ಥಳವೂ ಇಲ್ಲದ ಅರಸನು ಕುಲಭ್ರಷ್ಟನಂತೆ ಲೋಕನಿಂದೆಗೆ ಗುರಿಯಾಗುವನು. ಬೆಟ್ಟ, ಹೊಳೆ, ಕಾಡು ಮುಂತಾದುವುಗಳಿಗೆ ಆತುಕೊಂಡಿರುವ ಆಳವಾದ ಕಂದಕವನ್ನೂ, ಎತ್ತರವಾದ ಕೋಟೆಯನ್ನೂ ನಿರ್ಮಿಸಿ, ಅದರೊಳಗೆ ನೀರು ಮುಂತಾದ ಸಕಲ ಸಾಮಗ್ರಿಗಳನ್ನೂ ಆಯುಧಗಳನ್ನೂ ಹೇರಳವಾಗಿ ತುಂಬಿಟ್ಟಿರ ಬೇಕು. ದುರ್ಗವು ವಿಶಾಲವಾಗಿರಬೇಕು. ಸುಲಭವಾಗಿ ಹಗೆಗಳಿಗೆ ಸಾಧ್ಯವಾಗುವಂತಿರಬಾರದು. ಒಳಗಡೆ ರಸದ್ರವ್ಯಗಳಿಂದ ತುಂಬಿರಬೇಕು. ಧಾನ್ಯವನ್ನು ಸಿದ್ಧವಾಗಿಟ್ಟಿರಬೇಕು. ಅಡಿಗಬ್ಬಿನ ರಾಶಿಗಳು ಸಮೃದ್ಧ ವಾಗಿರಬೇಕು. ಒಳಹುಗುವುದಕ್ಕೆ ರಹಸ್ಯವಾದ ದಾರಿ ಇರಬೇಕು. ಸಮಯ ಬಂದರೆ, ತಲೆತಪ್ಪಿಸಿಕೊಂಡು ಹೊರಬೀಳುವುದಕ್ಕೂ ಒಂದು ಕಳ್ಳ ಹಾದಿ ಇರಬೇಕು. ಈ ಏಳೂ ದುರ್ಗಕ್ಕೆ ಮುಖ್ಯವಾದ ಸಂಪತ್ತುಗಳು.

ಅರಸು, ಮಂತ್ರಿ, ಆಪ್ತ, ಬೊಕ್ಕಸ, ರಾಷ್ಟ್ರ, ದುರ್ಗ, ಸೇನೆ, ಇವು ಒಂದಕ್ಕೊಂದು ಒತ್ತಾಸೆಯಾಗಿದ್ದು ರಾಜ್ಯಕ್ಕೆ ಮುಖ್ಯವಾದ ಅಂಗಗಳೆನಿಸು ವುವು. ದುರ್ಗಾಧಿಪತಿ, ಸೇನಾಧ್ಯಕ್ಷ, ಕೋಶಾಧಿಕಾರಿ, ರಾಜ, ರಾಯ ಬಾರಿ, ಪುರೋಹಿತ, ಜೋಯಿಸ, ವೈದ್ಯ, ಈ ಎಂಟು ಮಂದಿ ಅರಸು ತನಕ್ಕೆ ಮುಖ್ಯ ಮಂತ್ರಿಗಳು'' ಎಂಬುದಾಗಿ ಬಿನ್ನಯಿಸಿದನು.

ಅಷ್ಟರಲ್ಲಿ ಹಿರಣ್ಯಗರ್ಭನು "ಕೋಟೆಯನ್ನು ಭದ್ರಪಡಿಸುವುದಕ್ಕೆ ಯಾರನ್ನು ನಿಯಮಿಸಬೇಕು?'' ಎಂಬುದಾಗಿ ಪ್ರಶ್ನೆಮಾಡಲು, ಮಂತ್ರಿ ಯಾದ ಚಕ್ರವಾಕನಿಂತೆಂದನು:—"ಯಾವ ಕೆಲಸದಲ್ಲಿ ಯಾವನು ನಿಪು ಣನೋ, ತುಂಬ ಹೆಸರುವಾಸಿಯನ್ನೂ ಪಡೆದಿರುವನೋ ಅವನನ್ನೇ ಆ

ಕೆಲಸದಲ್ಲಿ ನಿಯಮಿಸಬೇಕು. ಪ್ರತ್ಯಕ್ಷಾನುಭವವಿಲ್ಲದೆ ಕೇವಲ ಶಾಸ್ತ್ರ ಜ್ಞಾನವನ್ನು ಸಂಪಾದಿಸಿದ ಮಾತ್ರದಿಂದಲೇ ಫಲವಿಲ್ಲ. ಅನುಭವವಿಲ್ಲದವನು ಸಮಯದಲ್ಲಿ ಕುರುಡನೇ ಸರಿ. ಆ ಕಾರಣ ಸಾರಸನನ್ನು ಕರೆಯಿಸಬೇಕು." ಬಳಿಕ ಅಂತೆಯೇ ಸಾರಸನನ್ನು ಬರಮಾಡಿ "ಎಲೆ ಸಾರಸನೇ! ನೀನು ಬೇಗನೆ ಕೋಟೆಯನ್ನು ಜೋಪಾನ ಪಡಿಸು" ಎಂಬುದಾಗಿ ಅರಸನು ಆಜ್ಞಾಪಿಸಲಾಗಿ, ಸಾರಸನು ರಾಜಾಜ್ಞೆಯನ್ನು ಶಿರಸಾವಹಿಸಿ, "ದೇವಾ! ಈ ಸರೋವರವೇ ನಮಗೆ ಪ್ರಬಲವಾದ ಕೋಟೆ. ಬಹು ಕಾಲದಿಂದ ಚೆನ್ನಾಗಿ ಯೋಚಿಸಿ, ಪರಿಕಿಸಿ, ಏರ್ಪಡಿಸಿಕೊಂಡಿರುವೆವು. ಈ ದುರ್ಗಕ್ಕಿಂತಲೂ ನಮಗೆ ಬೇರೊಂದು ಕೋಟೆಯು ಬೇಕೇ? ಇದು ಸಿದ್ಧವಾಗಿಯೇ ಇದೆ. ಇದರಲ್ಲಿ ಭದ್ರಪಡಿಸಬೇಕಾದ ಕುಂದು ಯಾವುದೂ ಇಲ್ಲ. ಇನ್ನು ದ್ವೀಪದಿಂದ ಧಾನ್ಯಗಳನ್ನು ಸಂಗ್ರಹಿಸುವುದು ಮಾತ್ರವೇ ಉಳಿದಿದೆ. ಏಕೆಂದರೆ, ಎಲ್ಲ ಬಗೆಯ ಶೇಖರಗಳಿಗಿಂತಲೂ ಧಾನ್ಯಸಂಗ್ರಹವು ಮುಖ್ಯವಾದುದು. ರತ್ನಗಳನ್ನು ಬಾಯೊಳಗೆ ಇಟ್ಟುಕೊಂಡರೆ, ಹಸಿವನ್ನು ಹೋಗಲಾಡಿಸಬಹುದೇ? ಪ್ರಾಣಗಳನ್ನು ಉಳಿಸಬೇಕಾದರೆ ಧಾನ್ಯಗಳೇ ಮುಖ್ಯ ಸಾಧನ. ಇನ್ನು ರಸದ್ರವ್ಯಗಳಲ್ಲಿ ಉಪ್ಪು ಶ್ರೇಷ್ಠವೆಂಬುದಾಗಿ ಪ್ರಸಿದ್ಧವಾದುದು. ಅದನ್ನು ಸಮೃದ್ಧಿಯಾಗಿ ಸಂಗ್ರಹಿಸಿಡಬೇಕು. ಲವಣವಿಲ್ಲದಿದ್ದರೆ ವ್ಯಂಜನಪದಾರ್ಥಗಳು ಗೋಮಯದಂತಿರುವುವು" ಎಂಬುದಾಗಿ ಬಿನ್ನಯಿಸಿದನು.

'ಬೇಗನೆ ಹೋಗಿ ಎಲ್ಲವನ್ನೂ ಸಂಗ್ರಹಿಸಿ ಇಡು' ಎಂಬುದಾಗಿ ರಾಜನು ಆಣತಿ ಇತ್ತ ಕೂಡಲೇ ಸಾರಸನು ತೆರಳಿದನು. ಅಷ್ಟರಲ್ಲಿ ದ್ವಾರಪಾಲನು ಒಳಬಂದು "ದೇವಾ! ಸಿಂಹಳದ್ವೀಪದಿಂದ ಮೇಘವರ್ಣವೆಂಬ ಕಾಗೆಯು ಪರಿವಾರದೊಡನೆ ಬಂದು, ಮಹಾಸ್ವಾಮಿಯವರ ಸಂದರ್ಶನಾರ್ಥವಾಗಿ ಹಜಾರದಲ್ಲಿ ಕಾದುಕೊಂಡಿದೆ. ಸ್ವಾಮಿಯ ಅಪ್ಪಣೆ" ಎಂದನು. ಆಗ ಅರಸನು "ಕಾಗೆಯು ಬುದ್ಧಿಯುಳ್ಳ ಪ್ರಾಣಿ. ಬಹಳ ದೇಶಗಳನ್ನು ನೋಡಿರುವುದು. ಅದನ್ನು ನಾವು ಸೇರಿಸಿಕೊಂಡರೆ ಈ ಸಮಯದಲ್ಲಿ ಬಹಳ ಮಟ್ಟಿಗೆ ಅನುಕೂಲವಾಗುವುದು" ಎಂದನು. ಅದಕ್ಕೆ ಚಕ್ರವಾಕನು "ಕಾಗೆಯು ನೆಲದ ಮೇಲೆ ಸಂಚರಿಸತಕ್ಕ ಪ್ರಾಣಿ. ನಾವು

ಜಲಚರಗಳು. ಅದನ್ನು ನಂಬಿ ಸೇರಿಸಿಕೊಳ್ಳುವುದಾದರೂ ಹೇಗೆ? ಹಿರಿಯರು ಅಂತೆಯೇ ಹೇಳಿರುವರು. ತನ್ನ ಪಕ್ಷದವರನ್ನು ಬಿಟ್ಟು ಶತ್ರುವರ್ಗದವರನ್ನು ಸೇರಿದವನನ್ನು ನೀಲಿಬಣ್ಣದ ನರಿಯಂತೆ ಹಗೆಗಳು ಬೇಗನೆ ಕೊಲ್ಲುವರು" ಎಂದನು. ಆ ಕಥೆಯನ್ನು ಹೇಳುವಂತೆ ರಾಜನು ಪ್ರಶ್ನೆ ಮಾಡಲಾಗಿ ಚಕ್ರವಾಕನು ಹೇಳತೊಡಗಿದನು.

### ೭ನೆಯ ಕಥೆ

ಹಿಂದೆ ಒಮ್ಮೆ ಒಂದು ನರಿಯು ಪಟ್ಟಣದ ಸುತ್ತಲೂ ರಾತ್ರಿಕಾಲದಲ್ಲಿ ಬೇಟೆಗಾಗಿ ಸುಳಿದಾಡುವಾಗ, ನೀಲಿಯನ್ನು ಬೇಯಿಸುವ ಗುಡಾಣದಲ್ಲಿ ಬಿದ್ದಿತು. ಕೂಡಲೇ ಏಳುವುದಕ್ಕೆ ಬಹಳ ಸಾಹಸಪಟ್ಟಿತಾದರೂ, ಹೊರಗೆ ಬರುವುದಕ್ಕೆ ಸಾಧ್ಯವಿಲ್ಲದೆ ಸತ್ತಂತೆ ತೋರ್ಪಡಿಸಿ, ಅಲ್ಲಿಯೇ ಬಿದ್ದಿದ್ದಿತು. ಬೆಳಗಾಗುತ್ತಲೇ ರಂಗಾರಿಯವನು ಬಂದು, ಕಾಲುಗಳನ್ನು ನೀಡಿ, ನರಿಯು ತಲೆಕೆಳಗಾಗಿ, ಕಣ್ಣು ಮುಚ್ಚಿ, ಹಲ್ಲು ಕಿರಿದು, ಗುಡಾಣದಲ್ಲಿ ಬಿದ್ದಿರುವುದನ್ನು ಕಂಡು, ಸತ್ತಿರುವುದೆಂಬ ಭಾವನೆಯಿಂದ ಊರ ಹೊರಗೆ ಹೊತ್ತುಕೊಂಡು ಹೋಗಿ ಬಿಸುಟನು. ಕೂಡಲೇ ಇದು ಕಾಡಿಗೆ ಹೋಗಿ, ತನ್ನ ಒಡಲಿನ ಬಣ್ಣವನ್ನು ನೋಡಿ "ಈಗ ನಾನು ಉತ್ತಮವಾದ ನೀಲ ವರ್ಣದವನಾಗಿದ್ದೇನೆ. ಈ ಮೂಲಕ ನಾನು ನನ್ನ ಜಾತಿಯ ಪ್ರಾಣಿಗಳಿಗಿಂತ ಶ್ರೇಷ್ಠನೆಂಬುದಾಗಿ ನಟಿಸಿ ನನ್ನ ಉತ್ಕೃಷ್ಟತೆಯನ್ನು ಏತಕ್ಕೆ ಸ್ಥಾಪಿಸಬಾರದು?" ಎಂಬುದಾಗಿ ಯೋಚಿಸಿ, ಮಿಕ್ಕ ನರಿಗಳನ್ನೆಲ್ಲ ಕರೆದು "ಈ ವನಾಭಿಮಾನಿ ದೇವತೆಯು ಓಷಧಿಗಳ ರಸದಿಂದ ನಿನ್ನೆಯ ರಾತ್ರಿ ನನಗೆ ಅಭಿಷೇಕ ಮಾಡಿ ಈ ಅರಣ್ಯರಾಜ್ಯದಲ್ಲಿ ಪಟ್ಟಗಟ್ಟಿರುವಳು. ಇತ್ತ ನೋಡಿರಿ! ನನ್ನ ದೇಹದ ವರ್ಣವೇ ಹೇಳುತ್ತಿದೆ. ಆ ಕಾರಣ ಇಂದು ಮೊದಲ್ಗೊಂಡು, ಈ ಅರಣ್ಯದಲ್ಲಿರುವವರೆಲ್ಲರೂ ನನ್ನ ಆಜ್ಞೆಗೆ ಒಳಪಟ್ಟು ನಡೆಯಬೇಕು" ಎಂದಿತು. ನರಿಗಳೆಲ್ಲವೂ ಅದರ ಬಣ್ಣಕ್ಕೆ ಮರುಳಾಗಿ, ಅದಕ್ಕೆ ಅಡ್ಡಬಿದ್ದು "ಪ್ರಭುಗಳ ಅಪ್ಪಣೆ" ಎಂದುವು. ಈ ರೀತಿಯಾಗಿ ಆ ನರಿಯು ತನ್ನ ಬಂಧುವರ್ಗದವರಿಂದ ಸೇವೆಯನ್ನು ಕೈಕೊಳ್ಳುತ್ತ, ಕ್ರಮಕ್ರಮವಾಗಿ ಆ ಕಾಡಿನಲ್ಲಿದ್ದ ಮೃಗಗಳನ್ನೆಲ್ಲ ತನ್ನ ಅಂಕೆಗೆ ಒಳಪಡಿಸಿಕೊಂಡಿತು. ಇಂತು ಹುಲಿ, ಸಿಂಹ ಮುಂತಾದ ದೊಡ್ಡ ಪರಿವಾರವು

ದೊರೆತ ಕೂಡಲೇ ತನ್ನ ಜಾತಿಯ ನರಿಗಳನ್ನು ಕಂಡು ಬೇಸರಪಟ್ಟು, ಅವುಗಳ ಸಹವಾಸವು ತನಗೆ ಅಪಮಾನಕರವೆಂಬುದಾಗಿ ಭಾವಿಸಿ, ನರಿಗಳನ್ನೆಲ್ಲ ದೂರ ಮಾಡಿತು. ಅದರಿಂದ ಅವು ಮನಮರುಗುತ್ತಿದ್ದುವು. ಇಂತಿರಲು ಒಂದು ವೃದ್ಧ ಜಂಬೂಕವು "ವ್ಯಥೆಪಡಬೇಡಿರಿ. ತನ್ನ ಗುಟ್ಟನ್ನು ಬಲ್ಲವರಾದ ನಮ್ಮನ್ನು ಈ ಹುಲುನರಿಯು ನೀತಿ ತಪ್ಪಿ ಅಪಮಾನಗೊಳಿಸಿರುವುದಲ್ಲವೇ? ಆ ಕಾರಣ ಇದು ಬೇಗನೆ ಹಾಳಾಗದಿರದು. ಇದಕ್ಕೆ ತಕ್ಕ ತಂತ್ರವನ್ನು ನಾನು ಹೂಡುವೆನು. ಹುಲಿ ಮೊದಲಾದ ಕ್ರೂರ ಜಂತುಗಳು ಕೂಡ ಇದರ ಬಣ್ಣಕ್ಕೆ ಮೋಸಹೋಗಿ, ಇದು ನರಿ ಎಂಬುದನ್ನರಿಯದೆ, ಇದನ್ನು ತಮ್ಮ ಅರಸನೆಂಬ ಭಾವನೆಯಿಂದ ಓಲಯಿಸುತ್ತಿರುವುವು. ಇದರ ಗುಟ್ಟು ಹೊರಬೀಳುವ ಹಾಗೆ ಮಾಡಿದರಾಯಿತು. ಸಂಜೆಯ ಸಮಯದಲ್ಲಿ ನೀವೆಲ್ಲರೂ ಇದರ ಸುತ್ತಲೂ ನಿಂತು ಗಟ್ಟಿಯಾಗಿ ಕೂಗಿರಿ" ಎಂಬುದಾಗಿ ಹೇಳಿಕೊಟ್ಟಿತು. ಮರುದಿನ ಸಾಯಂಕಾಲದಲ್ಲಿ ನರಿಗಳೆಲ್ಲವೂ ಅಂತೆಯೇ ಮಾಡಲಾಗಿ, ನೀಲಿ ಬಣ್ಣದ ನರಿ ಮೈಮರೆತು ಅವುಗಳೊಂದಿಗೆ ತಾನೂ ಕೂಗತೊಡಗಿತು. ಅದು ಸಹಜವೇ ಅಲ್ಲವೇ!"

"ಸ್ವಭಾವವನ್ನು ಬದಲಾಯಿಸುವುದು ಯಾರಿಗೂ ತರವಲ್ಲ. ನಾಯಿಯನ್ನು ಸಿಂಹಾಸನದಲ್ಲಿ ಕುಳ್ಳಿರಿಸಿದರೆ ಅದು ಕಾಲಿನ ಮೆಟ್ಟನ್ನು ತಿನ್ನುವ ಸ್ವಭಾವವನ್ನು ಬಿಡುವುದೇ? ಇದರ ಕೂಗನ್ನು ಕೇಳಿದೊಡನೆಯೇ ಹುಲಿಯು ಇದರ ಮರ್ಮವನ್ನು ತಿಳಿದು ಕೊಂದಿಕ್ಕಿತು. ಹಗೆಯ ಲೋಪಗಳನ್ನೂ, ಒಳಗುಟ್ಟನ್ನೂ, ಬಲವನ್ನೂ ಅರಿತವನು ಒಳಹೊಕ್ಕರೆ ಶತ್ರುಪಕ್ಷವನ್ನು ಬೆಂಕಿಯಂತೆ ಸುಡುವನು. ಆದುದರಿಂದ ತನ್ನ ಪಕ್ಷದವರನ್ನು ಬಿಟ್ಟು ಶತ್ರುಪಕ್ಷದವರನ್ನು ಸೇರಿಸಬಾರದು" ಎಂದು ಹೇಳಿತು.

ಮುದಿ ನರಿಯ ಮಾತನ್ನು ಕೇಳಿ, ಅರಸನು "ಅದು ಹಾಗಿರಲಿ! ದೂರದಿಂದ ಬಂದಿರುವನು. ಇವನನ್ನು ಬರಮಾಡಿ ಮಾತನಾಡಿಸಿ ನೋಡುವ! ಆ ಮೇಲೆ ಸೇರಿಸಿಕೊಳ್ಳುವ ವಿಷಯವನ್ನು ಯೋಚಿಸುವ!" ಎಂದನು. ಆಗ ಚಕ್ರವಾಕನು "ಸ್ವಾಮಿ! ಚಾರನನ್ನು ಕಳುಹಿಸಿರುವೆವು. ದುರ್ಗವು ಸಿದ್ಧವಾಗಿದೆ. ಇನ್ನು ಶುಕನನ್ನು ಕರೆಕಳುಹಬಹುದು. ಏಕೆಂದರೆ, ಸಮರ್ಥನಾದ ರಾಯಭಾರಿಯನ್ನು ಕಳುಹಿ, ಚಾಣಕ್ಯನು ನಂದರನ್ನು ನಿರ್ಮೂಲಮಾಡಿ

ದನು. ಆ ಕಾರಣ ಅರಸನು ಶತ್ರುಪಕ್ಷದ ರಾಯಬಾರಿಯನ್ನು ದೂರವಾಗಿ ಕುಳ್ಳಿರಿಸಿ, ಪರಿವಾರಯುಕ್ತನಾಗಿ ಮಾತನಾಡಬೇಕು'' ಎಂಬುದಾಗಿ ಹೇಳಿದನು. ಬಳಿಕ ರಾಜನು ಅಂತರಂಗ ಸಭೆಯನ್ನು ಮುಗಿಸಿ, ಗಿಳಿಯನ್ನೂ ಕಾಗೆಯನ್ನೂ ಕರೆತರಿಸಿದನು. ಗಿಳಿಯು ಒಳಹೊಕ್ಕು, ಸ್ವಲ್ಪ ತಲೆ ಎತ್ತಿ, ತೋರಿದ ಆಸನದಲ್ಲಿ ಕುಳಿತು, ಈ ರೀತಿ ಮಾತನಾಡ ತೊಡಗಿತು:—

"ಎಲೆ! ಹಿರಣ್ಯಗರ್ಭನೆ! ಮಹಾರಾಜನಾದ ಚಿತ್ರವರ್ಣನು ನಿನಗೆ ಈ ರೀತಿ ಅಪ್ಪಣೆ ಕೊಟ್ಟಿರುತ್ತಾನೆ:—'ನಿನಗೆ ಪ್ರಾಣದ ಮೇಲೆಯೂ ಸಿರಿಯ ಮೇಲೆಯೂ ಆಸೆ ಇರುವುದಾದರೆ ಬೇಗನೆ ಬಂದು ನಮ್ಮ ಪಾದಗಳಿಗೆ ಶರಣು ಬೀಳು. ಇಲ್ಲವಾದರೆ ಬೇರೊಂದೆಡೆಯಲ್ಲಿ ವಾಸಸ್ಥಾನವನ್ನು ಹುಡುಕಿಕೊಳ್ಳಬೇಕು.' ''

ಇದನ್ನು ಕೇಳಿ ರಾಜಹಂಸನು "ಛೀ! ಛೀ! ಇವನನ್ನು ಕುತ್ತಿಗೆಗೆ ಕೈ ಹಾಕಿ ಹೊರಗೆ ದೂಡುವವನು ಯಾವನೂ ಇಲ್ಲವೇ?'' ಎಂದನು. ಅಷ್ಟರಲ್ಲಿ ಮೇಘವರ್ಣನು ಎದ್ದು ನಿಂತು "ಅಪ್ಪಣೆಯಾದರೆ ಕುಲಗೇಡಿಯಾದ ಈ ಗಿಳಿಯನ್ನು ನಾನು ಇಲ್ಲಿಯೇ ಕೊನೆಗಾಣಿಸುವೆನು'' ಎಂದನು. ಆಗ ಚಕ್ರವಾಕನು ಅರಸನನ್ನೂ ಕಾಗೆಯನ್ನೂ ಸಂತವಿಸಿ ಇಂತೆಂದನು:—"ಇತ್ತ ಕೇಳಿರಿ. ಹಿರಿಯರಿಲ್ಲದ ಸ್ಥಳವು ಸಭೆಯೆನಿಸಲಾರದು. ಧರ್ಮವನ್ನು ಬೋಧಿಸದವರು ಹಿರಿಯರೆನಿಸಲಾರರು. ಸತ್ಯಹೀನವಾದುದು ಧರ್ಮವೆನಿಸದು. ಮೋಸದಿಂದ ಕೂಡಿದುದು ಎಂದಿಗೂ ಸತ್ಯವಾಗಲಾರದು. ಇದೀಗ ಧರ್ಮದ ಸ್ವರೂಪ. ದೂತನು ಮ್ಲೇಚ್ಛನೇ ಆಗಿದ್ದರೂ ಅರಸನು ಅವನನ್ನು ಕೊಲ್ಲಬಾರದು. ಇಂತಿರುವಲ್ಲಿ ಬ್ರಾಹ್ಮಣನಾದ ಈ ಶುಕನನ್ನು ಕೊಲ್ಲಬಹುದೇ? ತಲೆಯ ಮೇಲೆ ಕತ್ತಿಯನ್ನೆತ್ತಿದರೂ, ರಾಯಬಾರಿಯು ದಿಟವನ್ನೇ ನುಡಿಯಬೇಕಲ್ಲದೆ ಸುಳ್ಳು ಹೇಳಲಾಗದು. ರಾಯಬಾರಿಯ ಮಾತಿನಿಂದಲೇ ತನಗೆ ಗೌರವವೆಂತಾಗಲಿ, ಅಪಮಾನವೆಂತಾಗಲಿ, ಭಾವಿಸಬಾರದು. ದೂತನಿಗೆ ಎಂದಿಗೂ ಪ್ರಾಣಭಯವಿಲ್ಲ. ಅದರಿಂದಲೇ ಅವನು ಎಲ್ಲವನ್ನೂ ಹೇಳುವನು. ಅವನು ಆಡುವ ಮಾತುಗಳು ಅವನ ಬುದ್ಧಿಬಲದಿಂದ ಹೊರಡತಕ್ಕುವಲ್ಲ. ಅವನ ಒಡೆಯನಿಗೆ ಪ್ರತಿನಿಧಿಯಾಗಿ ಅವನು ಮಾತನಾಡುತ್ತಿರುವನು. ಇದಕ್ಕಾಗಿ ಅವನ ಮೇಲೆ ಸಿಟ್ಟುಗೊಳ್ಳಬಹುದೇ?''

ಈ ಮಾತುಗಳನ್ನು ಕೇಳಿ ಮೇಘವರ್ಣನು ಶಾಂತಿಯನ್ನೈದಿದನು. ಹಿರಣ್ಯಗರ್ಭನಿಗೂ ಸಮಾಧಾನವಾಯಿತು. ಗಿಳಿಯೂ ಎದ್ದು ಹೊರಟಿತು. ಆಗ ಚಕ್ರವಾಕನು ಅದನ್ನು ಹಿಂಬಾಲಿಸಿ ಹಿಂದಕ್ಕೆ ಕರೆತಂದು, ತಿಳಿಯೆ ಹೇಳಿ, ಆಭರಣಾದಿಗಳಿಂದ ಸತ್ಕರಿಸಿ ಕಳುಹಲಾಗಿ, ಗಿಳಿಯು ಬೇಗನೆ ತನ್ನ ದೇಶಕ್ಕೆ ಹೋಗಿ ವಿಂಧ್ಯ ಪರ್ವತವನ್ನು ಸೇರಿ, ಅರಸನಾದ ಚಿತ್ರವರ್ಣನಿಗೆ ನಮಸ್ಕರಿಸಿತು. ಆಗ ಮಯೂರರಾಜನು "ಶುಕನೇ! ಏನು ಸಮಾಚಾರ? ಆ ದೇಶವು ಹೇಗಿದೆ?" ಎಂಬುದಾಗಿ ಪ್ರಶ್ನೆಮಾಡಿದನು. ಆಗ ಗಿಳಿಯು "ಸ್ವಾಮಿಾ! ಸಂಗ್ರಹವಾಗಿ ಬಿನ್ನಯಿಸುವೆನು. ಈಗಲೇ ಯುದ್ಧಕ್ಕೆ ಹೊರಡಬೇಕು. ಕರ್ಪೂರದ್ವೀಪವೆಂಬುದು ಸ್ವರ್ಗದ ಒಂದು ಭಾಗ. ಅಲ್ಲಿಯ ಅರಸು ಎರಡನೆಯ ಇಂದ್ರನೇ ಸರಿ. ಆತನನ್ನು ಬಣ್ಣಿಸಲು ಶಕ್ಯವಲ್ಲ. ಇದೇ ಸಂಗ್ರಹ ವಾರ್ತೆ" ಎಂಬುದಾಗಿ ವಿಜ್ಞಾಪಿಸಿತು. ಬಳಿಕ ಚಿತ್ರವರ್ಣನು ಹಿರಿಯರನ್ನು ಕರೆಕಳುಹಿ ಮಂತ್ರಾಲೋಚನೆಗಾಗಿ ಕುಳಿತನು. ಆಗ ಅರಸನು "ಈಗ ನಡೆಯಬೇಕಾಗಿರುವ ಯುದ್ಧದ ವಿಷಯದಲ್ಲಿ ನಾವು ಅಣಿಮಾಡಿಕೊಳ್ಳಬೇಕಾದುದನ್ನು ತಿಳಿಸಿರಿ. ಯುದ್ಧವನ್ನು ಮಾಡಿದಲ್ಲದೆ ಬಗೆ ಇಲ್ಲ. ತೃಪ್ತಿಯಿಲ್ಲದ ಬ್ರಾಹ್ಮಣನೂ ಸಂತುಷ್ಟನಾದ ಅರಸನೂ ಹಾಳಾಗುವರು ಎಂಬುದಾಗಿ ಹಿರಿಯರು ಹೇಳಿರುವರಲ್ಲವೇ?" ಎಂದನು.

ಈ ಮಾತನ್ನು ಕೇಳಿ ದೂರದರ್ಶಿಯೆಂಬ ಗೃಧ್ರನು "ಸ್ವಾಮಿಾ! ಯುದ್ಧದ ಮೇಲಣ ಆಸೆಯಿಂದ ಹೋರಾಡಬೇಕೆಂಬುದು ಶಾಸ್ತ್ರಸಮ್ಮತವಲ್ಲ. ಮಿತ್ರರೂ, ಆಪ್ತರೂ, ಮಂತ್ರಿಗಳೂ, ಬಂಧುಗಳೂ ತನ್ನಲ್ಲಿ ದೃಢವಾದ ಭಕ್ತಿ ವಿಶ್ವಾಸಗಳಿಂದ ನಡೆದುಕೊಳ್ಳುತ್ತಿದ್ದು, ಹಗೆಗಳು ವಿಪರೀತವಾಗಿ ನಡೆದರೆ, ಅಂತಹ ಸಂದರ್ಭದಲ್ಲಿ ಮಾತ್ರವೇ ಯುದ್ಧಮಾಡಬೇಕು. ಇನ್ನು ಯುದ್ಧಕ್ಕೆ ಮೂರು ಫಲಗಳು. ಒಂದನೆಯದು ದೇಶ, ಎರಡನೆಯದು ಮಿತ್ರರು, ಮೂರನೆಯದು ಸಂಪತ್ತು. ಈ ಮೂರೂ ದೊರೆಯುವುದು ನಿಶ್ಚಯವಾಗಿದ್ದರೆ ಆಗ್ಗೆ ಹೋರಾಡಬೇಕು. ಇಲ್ಲವಾದರೆ ಫಲವೇನು?" ಎಂಬುದಾಗಿ ಹೇಳಿದನು.

ಇದನ್ನು ಕೇಳಿ ಚಿತ್ರವರ್ಣನು "ಮಂತ್ರಿಯು ನನ್ನ ಬಲವನ್ನಾದರೂ ಒಮ್ಮೆ ನೋಡಲಿ. ಇಷ್ಟೊಂದು ಸೈನ್ಯಕ್ಕೆ ಇಂದಿನ ವರೆಗೆ ಸಂಬಳ

ಕೊಟ್ಟು ಕಾಪಾಡಿದುದಕ್ಕೆ ಫಲವಾದರೂ ಏನು? ಈ ಸೈನ್ಯದ ಉಪಯೋಗ ವನ್ನಾದರೂ ಒಮ್ಮೆ ತಿಳಿಯಲಿ! ಬೇಗನೆ ಜೋಯಿಸರನ್ನು ಕರೆಯಿಸಿ ಒಳ್ಳೆಯ ಮುಹೂರ್ತವನ್ನು ನಿಶ್ಚಯಿಸುವಂತೆ ಹೇಳು" ಎಂದನು. ಆಗ ಮಂತ್ರಿಯು "ಸ್ವಾಮಿ! ಏನೇ ಆದರೂ ಥಟ್ಟನೆ ಪ್ರಯಾಣಮಾಡುವುದು ಸರಿಯಲ್ಲ. ಏಕೆಂದರೆ, ಹಗೆಯ ಬಲವನ್ನು ಚೆನ್ನಾಗಿ ವಿಚಾರಿಸಿ, ತಿಳಿಯದೆ ಮುಂದುವರಿಸುವ ಮೂಢನು ಖಂಡಿತವಾಗಿಯೂ ಹರಿತವಾದ ಖಡ್ಗವನ್ನು ಅಪ್ಪಿಕೊಂಡಂತೆಯೇ ಸರಿ" ಎಂದನು. ಆಗ ರಾಜನು "ಮಂತ್ರಿಯೇ! ನೀನು ನನ್ನ ಉತ್ಸಾಹವನ್ನು ಎಷ್ಟು ಮಾತ್ರಕ್ಕೂ ಭಂಗಗೊಳಿಸಬೇಡ. ನೀನು ನನ್ನ ಜಯವನ್ನು ಬಯಸುವೆಯಾದರೆ ಪರರಾಷ್ಟ್ರವನ್ನು ಸ್ವಾಧೀನ ಪಡಿಸಿಕೊಳ್ಳುವುದಕ್ಕೆ ಬೇಕಾದ ಉಪಾಯಗಳನ್ನು ಮಾತ್ರ ತಿಳಿಸಿದರೆ ಸಾಕು" ಎಂದನು. ಆ ಮಾತನ್ನು ಕೇಳಿ ಮಂತ್ರಿಯು ಇಂತೆಂದನು:—

"ಪ್ರಭುವರ್ಯ! ಲಾಲಿಸಬೇಕು. ನಾನು ಹೇಳಿದಂತೆ ಮಾಡಿದರೆ ಮಾತ್ರವೇ ಫಲವು ದೊರೆಯುವುದು. ಅನುಷ್ಠಾನವಿಲ್ಲದ ಶಾಸ್ತ್ರದಂತೆ ಆಚರ ಣೆಗೆ ತಾರದ ಆಲೋಚನೆಯಿಂದಲಾದರೂ ಫಲವಿಲ್ಲ. ಔಷಧವನ್ನು ತಿಳಿದಿದ್ದ ಮಾತ್ರದಿಂದಲೇ ರೋಗವು ಶಾಂತವಾಗಲಾರದು. ಪ್ರಭುವಿನ ಅಪ್ಪಣೆ ಯನ್ನು ಮೀರಿ ನಡೆಯುವುದು ಸೇವಕನ ಧರ್ಮವಲ್ಲ. ಈ ಕಾರಣದಿಂದ ನನಗೆ ತಿಳಿದಮಟ್ಟಿಗೆ ಅರಿಕೆಮಾಡುವೆನು. ಲಾಲಿಸಬೇಕು."

"ಜಲದುರ್ಗ, ಗಿರಿದುರ್ಗ, ವನದುರ್ಗಗಳೆಂಬ ಈ ಮೂರರಲ್ಲಿ ಅಪಾ ಯವು ಸಂಭವಿಸಬಹುದಾದ ಪ್ರದೇಶಗಳಲ್ಲಿ ಸೇನಾಪತಿಯು ಸೈನ್ಯದೊಂದಿಗೆ ಸುತ್ತಲೂ ಕಾದಿರಬೇಕು. ಪ್ರಧಾನ ದಳಪತಿಯು ವೀರಪುರುಷರ ಸಂಗಡ ಮುಂಭಾಗದಲ್ಲಿ ಹೊರಡಬೇಕು. ಅರಸು, ರಾಣಿ, ಬೊಕ್ಕಸ, ಪರಿಚಾರ ಕರು ಇವರೆಲ್ಲರೂ ಸೇನೆಯ ನಡುವೆ ಇರಬೇಕು. ಎರಡು ಪಕ್ಕಗಳಲ್ಲಿ ಕುದುರೆಗಳಿರಬೇಕು. ಅವುಗಳ ಸುತ್ತ ರಥಗಳು ಇರಬೇಕು. ಅವು ಗಳ ಸುತ್ತ ಆನೆಗಳು, ಅವುಗಳ ಮುಂದೆ ಕಾಲ್ಬಲ, ಈ ರೀತಿ ವಿಜಯಯಾತ್ರೆ ಹೊರಡಬೇಕು. ಹಿಂದುಗಡೆ ಸೇನಾಪತಿಯು ಬಳಲಿದವ ರನ್ನು ಉಪಚರಿಸುತ್ತ, ಮೆಲ್ಲಗೆ ಹಿಂಭಾಗದಲ್ಲಿ ನಡೆತರಬೇಕು. ಈ ಪರಿ ಯಿಂದ ಅರಸನು ಸೇನಾಸಮೇತನಾಗಿ ಆಪ್ತರಿಂದಲೂ ಮಂತ್ರಿಗಳಿಂದಲೂ ಕೂಡಿ ಯುದ್ಧಕ್ಕೆ ಹೊರಡಬೇಕು."

"ಹಳ್ಳತಿಟ್ಟುಗಳಿಂದಲೂ, ಬೆಟ್ಟಗುಡ್ಡಗಳಿಂದಲೂ ನಿಬಿಡವಾದ ಪ್ರದೇಶವನ್ನು ಆನೆಗಳ ಮೂಲಕ ಆಕ್ರಮಿಸಿ ಸ್ವಾಧೀನಪಡಿಸಬೇಕು. ಚದರವಾದ ಮೈದಾನವನ್ನು ತುರಗಬಲದಿಂದ ಮುತ್ತಬೇಕು. ಜಲಭೂಯಿಷ್ಠವಾದ ಪ್ರದೇಶವನ್ನು ಹಡಗುಗಳ ಸಹಾಯದಿಂದ ಆಕ್ರಮಣಮಾಡಬೇಕು. ಮಳೆಗಾಲದಲ್ಲಿ ಗಜಸೇನೆಯು ಪ್ರಯೋಜನಕಾರಿಯೆಂತಲೂ, ಮಿಕ್ಕ ಸಮಯದಲ್ಲಿ ಕುದುರೆಯ ಸೈನ್ಯವು ಉತ್ತಮವೆಂತಲೂ, ಕಾಲ್ಬಲವು ಸರ್ವಕಾಲದಲ್ಲಿಯೂ ಶ್ರೇಷ್ಠವೆಂತಲೂ ನೀತಿಜ್ಞರು ಹೇಳಿರುತ್ತಾರೆ. ಬೆಟ್ಟಗುಡ್ಡಗಳಲ್ಲಿಯೂ, ಕಣಿವೆ ಮುಂತಾದ ಇಕ್ಕಟ್ಟಿನಲ್ಲಿಯೂ, ಹುಗಲಾಗದ ಇತರ ದಾರಿಗಳಲ್ಲಿಯೂ, ಅರಸನನ್ನು ಜಾಗರೂಕತೆಯಿಂದ ನೋಡಿಕೊಳ್ಳಬೇಕು. ಆಪ್ತವರ್ಗಕ್ಕೆ ಸೇರಿದ ಯೋಧಪುರುಷರೇ ಅಂಗರಕ್ಷಕರಾಗಿದ್ದರೂ ಅರಸನು ಯಾವಾಗಲೂ ಅರೆಗಣ್ಣಿಂದ ನಿದ್ರಿಸಬೇಕಲ್ಲದೆ ಗಾಢನಿದ್ರೆಗೆ ಅವಕಾಶಕೊಟ್ಟು ಮೈಮರೆತಿರಬಾರದು."

"ದುರ್ಗಗಳನ್ನು ಹಾಳುಗೆಡವಿ, ದಂಗೆಗಳನ್ನು ಅಣಗಿಸಿ, ಬಗೆಬಗೆಯ ಕಿರುಕುಳಗಳಿಗೆ ಒಳಪಡಿಸಿ, ಹಗೆಯನ್ನು ಧ್ವಂಸಮಾಡಬೇಕು. ಪರದೇಶವನ್ನು ಹುಗುವಾಗ ಕಾಡು ಜನರನ್ನು ಸಿಬ್ಬಂದಿಯಾಗಿಟ್ಟು, ಅವರನ್ನೇ ಮುಂದೆ ನಡೆಯಿಸಬೇಕು. ರಾಜನು ಇರುವಲ್ಲಿಯೇ ಬೊಕ್ಕಸವು ಇರಬೇಕು. ಕೋಶವಿಲ್ಲದಿದ್ದರೆ ಅರಸುತನವೆಲ್ಲಿಯದು? ಸಮಯವರಿತು ಲಕ್ಷ್ಯವಿಲ್ಲದೆ ಸೇವಕರಿಗೆ ಹಣವನ್ನು ಕೊಡಬೇಕು. ಉದಾರಿಯಾದ ಅರಸನ ಸಲುವಾಗಿ ಯಾರೂ ಹೋರಾಡದಿರಲಾರರು. ಏಕೆಂದರೆ, ಮನುಷ್ಯನು ಹಣಕ್ಕೆ ಅಡಿಯಾಳು. ಮನುಷ್ಯನಿಗೆ ಮನುಷ್ಯನು ಎಂದಿಗೂ ಭೃತ್ಯನಲ್ಲ. ಮಾನವನ ಗೌರವವೂ ಲಾಘವವೂ ಅವನ ಆಸ್ತಿಯನ್ನನುಸರಿಸಿರುವುದು."

ಇನ್ನು ಹೋರಾಡಬೇಕಾದ ಪ್ರಸಂಗದಲ್ಲಿ ಸ್ವಲ್ಪವೂ ಹಿಂದೆಗೆಯಬಾರದು. ಮನಸ್ಸಿನಲ್ಲಿ ಯಾವ ಚಿಂತೆಗೂ ಅವಕಾಶಕೊಡಬಾರದು. ಒಬ್ಬರನ್ನೊಬ್ಬರು ಸಂತವಿಸಿ ಕಾಪಾಡಬೇಕು. ತಿರುಳಿಲ್ಲದ ಸೈನಿಕರನ್ನು ವ್ಯೂಹದ ನಡುವೆ ಇಟ್ಟಿರಬೇಕು. ಸೇನೆಯ ಮುಂಭಾಗದಲ್ಲಿ ಕಾಲ್ಬಲವನ್ನು ನಿಲ್ಲಿಸಬೇಕು. ಬಾರಿಬಾರಿಗೂ ಹಗೆಯನ್ನು ಅಡ್ಡಗಟ್ಟಿ, ಪೀಡಿಸಿ, ದೇಶಕ್ಕೆ ತೊಂದರೆಯನ್ನುಂಟುಮಾಡಬೇಕು. ಮೈದಾನವಾಗಿರುವ ಪ್ರದೇಶ

ದಲ್ಲಿ ಕುದುರೆಗಳನ್ನೂ ತೇರುಗಳನ್ನೂ ಬಹಳವಾಗಿ ಉಪಯೋಗಿಸಬೇಕು. ನೀರಿರುವ ಎಡೆಯಲ್ಲಿ ನಾವೆಗಳಿಂದಲೂ ಆನೆಗಳಿಂದಲೂ ಯುದ್ಧಮಾಡ ಬೇಕು. ಕುರುಚುಗಿಡಗಳಿಂದಲೂ, ಪೊದರುಗಳಿಂದಲೂ, ಹುಗಲಾಗ ದಂತಿರುವ ಪ್ರದೇಶದಲ್ಲಿ ಬಿಲ್ಲುಗಾರರಿಂದ ಹೋರಾಡಿಸಬೇಕು. ಬಯಲಿ ನಲ್ಲಿ ಕತ್ತಿಯ ಮೂಲಕ ಹಗೆಯನ್ನು ಇದಿರಿಸಬೇಕು. ಹಗೆಯನ್ನು ಸುಲಭವಾಗಿ ವಶಪಡಿಸಿಕೊಳ್ಳಬೇಕಾದರೆ ಮೊದಲು ಆತನ ಹುಲ್ಲು ಬಣಿವೆಗಳನ್ನು ಹಾಳುಮಾಡಬೇಕು. ನೀರು, ಅಡಿಗಬ್ಬು ಇವೆರಡೂ ದೊರೆಯದ ಹಾಗೆ ಮಾಡಿ, ಕಿರುಗುಟ್ಟಿಸಬೇಕು. ಕೆರೆಕುಂಟೆಗಳನ್ನೂ ಕೋಟೆಕೊತ್ತಲಗಳನ್ನೂ ಕಂದಕಗಳನ್ನೂ ಒಡೆದು ಹಾಳುಮಾಡಬೇಕು.

ಸೈನ್ಯದಲ್ಲಿ ಆನೆಯೇ ಮುಖ್ಯವಾದುದು. ಅದಕ್ಕೆ ಸಮನಾದ ಬೇರೊಂದು ಪ್ರಾಣಿಯು ಅರಸನಿಗೆ ದೊರೆಯಲಾರದು. ಒಂದು ಆನೆಯೂ ಅದರ ಅವಯವಗಳೂ ಎಂಟು ಆಯುಧಗಳಿಗೆ ಸಮಾನವೆಂಬುದಾಗಿ ಶಾಸ್ತ್ರಗಳು ಹೇಳುವುವು. ಸೇನೆಗೆ ಕುದುರೆಯು ದೊಡ್ಡ ಒತ್ತಾಸೆ. ಅಶ್ವ ಬಲವನ್ನು 'ಸಂಚರಿಸುವ ಕೋಟೆ' ಎಂಬುದಾಗಿ ನೀತಿಜ್ಞರು ಹೇಳುತ್ತಾರೆ. ತುರಗಸಂಪತ್ತಿಯುಳ್ಳ ಅರಸನು ಬಯಲಿನಲ್ಲಿಯೇ ಯುದ್ಧಮಾಡಬೇಕು. ಇದರಿಂದ ದಿಟವಾಗಿಯೂ ಅವನಿಗೆ ಗೆಲುವು ತಪ್ಪುವುದಿಲ್ಲ. ಕುದುರೆಯ ನ್ನೇರಿ ಹೋರಾಡುವವನನ್ನು ದೇವತೆಗಳೂ ಗೆಲ್ಲಲಾರರು. ಹಗೆಯು ಎಷ್ಟು ದೂರದಲ್ಲಿದ್ದರೂ ರಾವುತನ ಇದಿರಿನಲ್ಲಿದ್ದಂತೆಯೇ ಭಾವನೆ. ಯುದ್ಧಕ್ಕೆ ಮೊದಲಿಡುವುದು, ಸೇನೆಯನ್ನು ಕಾಯುವುದು, ದೆಸೆಗಾಣದೆಡೆ ಯಲ್ಲಿ ದಾರಿಯನ್ನು ಹುಡುಕುವುದು, ಮಾರ್ಗವನ್ನು ಸರಿಪಡಿಸುವುದು— ಇವೆಲ್ಲವೂ ಕಾಲ್ಬಲದ ಕೆಲಸಗಳು. ಕುದುರೆಯು ಸ್ವಭಾವದಿಂದಲೇ ಪೌರುಷ ವುಳ್ಳ ಪ್ರಾಣಿ; ಆಯುಧಗಳನ್ನೂ ಅವುಗಳ ಶಕ್ತಿಯನ್ನೂ ಚೆನ್ನಾಗಿ ಬಲ್ಲುದು; ಯಜಮಾನನಲ್ಲಿ ಅವಕ್ಕೆ ಮಿಗಿಲಾದ ಭಕ್ತಿ, ಶ್ರಮೆಯನ್ನು ಸಹಿಸಬಲ್ಲುದು; ಪ್ರಖ್ಯಾತರಾದ ಕ್ಷತ್ರಿಯರ ಮನ್ನಣೆಗೆ ಪಾತ್ರವಾದುದು. ಈ ಕಾರಣ ಗಳಿಂದ ತುರಗಸೇನೆಯು ಮಿಕ್ಕ ಸೈನ್ಯಕ್ಕಿಂತಲೂ ಶ್ರೇಷ್ಠವೆನಿಸುವುದು."

ಸೇನೆಯು ಅರಸನ ಮನ್ನಣೆಗೆ ಒಳಪಟ್ಟು ಹೋರಾಡುವಂತೆ ಎಷ್ಟೇ ಹಣವನ್ನು ಕೊಟ್ಟರೂ ಹೋರಾಡಲಾರದು. ಆದುದರಿಂದ ವಿಚಕ್ಷಣಪರ

ನಾದ ಅರಸನು ಸೈನಿಕರನ್ನು ಯಾವಾಗಲೂ ಮನ್ನಿಸಬೇಕು. ಗೌರವವು ಅವರನ್ನು ಉಬ್ಬಿಸುವುದು. ಲಕ್ಷಗಟ್ಟಲೆ ಸೈನ್ಯವಿದ್ದರೇನು ಫಲ? ಭಯ ಭಕ್ತಿಗಳಿಂದೊಪ್ಪಿ, ತಿರುಳುಳ್ಳ ಭಟರು ಕೆಲವು ಮಂದಿಯೇ ಆದರೂ ಸಾಕು. ಏಕೆಂದರೆ ಬಲಹೀನನು ರಣರಂಗದಲ್ಲಿ ಬೀಳತೊಡಗಿದರೆ ಬಲಾಧಿಕರೂ ಎದೆಗುಂದಿ ಹಿಮ್ಮೆಟ್ಟುವರು. ಸೈನಿಕರಲ್ಲಿ ಅಕ್ಕರೆ ಇಲ್ಲದಿರುವಿಕೆ, ತಿರಸ್ಕಾರ, ಇದಿರುಹಾಕಿಕೊಳ್ಳುವಿಕೆ, ತಕ್ಕ ಸಮಯದಲ್ಲಿ ಸಂಬಳಸಾರಿಗೆಗಳನ್ನು ಕೊಡದಿರುವಿಕೆ, ಕಾಲಹರಣ, ಅವರ ಕಷ್ಟಗಳನ್ನು ವಿಚಾರಿಸಿ ಪ್ರತೀಕಾರ ಮಾಡದಿರುವಿಕೆ, ಈ ಮುಂತಾದ ಕಾರಣಗಳಿಂದ ಸೇನೆಯು ಅರಸನ ವಿಷಯದಲ್ಲಿ ಪ್ರೀತಿಗೆ ಬದಲಾಗಿ ಅಸಡ್ಡೆಯನ್ನು ತೋರುವುದು. ಜಯವನ್ನು ಬಯಸುವವನು ಹಗೆಯ ಸೇನೆಯನ್ನು ಕಿರುಕುಳಕ್ಕೆ ಒಳಪಡಿಸಿ ಹೆದರಿಸಬೇಕು. ಹೀಗೆ ಬಹು ಕಾಲದ ವರೆಗೆ ನರಳಿದ ಸೈನ್ಯವು ಸುಲಭವಾಗಿ ಒಳಪಡುವುದು. ಶತ್ರುವನ್ನು ಭೇದಿಸುವುದಕ್ಕೆ ದಾಯಾದರಿಗಿಂತಲೂ ಮಿಂಚಿದ ಉಪಾಯವಿಲ್ಲ. ಆ ಕಾರಣ ಹೇಗಾದರೂ ಮಾಡಿ ಹಗೆಯ ಜ್ಞಾತಿಗಳನ್ನು ಅವನ ಮೇಲೆ ಬೀಳುವಂತೆ ಪ್ರೋತ್ಸಾಹಗೊಳಿಸಬೇಕು.''

‶ದಂಡಯಾತ್ರೆಗೆ ಹೊರಟ ಅರಸನು, ಹಗೆಯ ಮಂತ್ರಿಯನ್ನೋ, ಯುವರಾಜನನ್ನೋ, ಒಳಸಂಚಿಗೆ ಸೇರಿಸಿಕೊಂಡು, ತನ್ನ ಹಗೆಗೆ ಯಾರು ಯಾರು ವಿರೋಧಿಗಳೆಂಬುದನ್ನು ತಿಳಿದು, ವಿರೋಧಿಗಳಲ್ಲಿ ದ್ವೇಷದ ಬೀಜವನ್ನು ನೆಡಬೇಕು. ದ್ವೇಷಕ್ಕೆ ಗುರಿಯಾದ ಮಿತ್ರರನ್ನು ಇತರರ ಮೂಲಕ ಭಂಗಗೊಳಿಸಿ ಕೊಲ್ಲಿಸಬೇಕು. ಇಲ್ಲವಾದರೆ ಅವನ ಅಪರಾಧವನ್ನೇ ಕಾಯುತ್ತಿದ್ದು, ತನ್ನ ಆಶ್ರಿತರ ಮೂಲಕ ಅವನನ್ನು ಬಂಧನಕ್ಕೆ ಒಳಪಡಿಸಬೇಕು. ಇತರ ದೇಶಗಳನ್ನು ಹೊಕ್ಕು, ಅಲ್ಲಿಯ ಜನರನ್ನು ಕರೆತಂದು ತನ್ನ ದೇಶದಲ್ಲಿ ಮನೆಮಾಡಿಕೊಳ್ಳುವುದಕ್ಕೆ ಬೇಕಾದ ಸಲಕರಣೆಗಳನ್ನು ಒದವಿಸಬೇಕು. ದಾನಮಾನಗಳಿಂದ ಅರಸನು ತನ್ನ ರಾಷ್ಟ್ರದಲ್ಲಿ ಸರ್ವಸ್ವವನ್ನೂ ಪಡೆಯುಬಹುದು.''

‶ಇದೆಲ್ಲವನ್ನೂ ಕೇಳಿ ಚಿತ್ರವರ್ಣನು ‶ಸಾಕು, ಸಾಕು, ಎಷ್ಟು ಹೇಳಿದರೂ ಇಷ್ಟೇ! ಹೇಗೂ ತನಗೆ ಮೇಲ್ಮೆ, ಹಗೆಗೆ ನಾಶ, ಇವೆರಡೇ ನೀತಿಯ ಮುಖ್ಯ ಸಾರಾಂಶ. ಇದನ್ನೇ ಮನಸ್ಸಿನಲ್ಲಿ ಇಟ್ಟು ಮನುಷ್ಯರು ಬೃಹಸ್ಪತಿ

ಯಂತೆ ವಾಕ್ಚಾತುರ್ಯವನ್ನು ಹೊರಪಡಿಸಿ ಮಾತನಾಡುವರು" ಎಂದನು. ಆ ಮಾತಿಗೆ ಮಂತ್ರಿಯು ನಕ್ಕು ಇಂತೆಂದನು:-"ಇದೆಲ್ಲವೂ ಆ ಆ ವಿಶೇಷ ಗಳನ್ನು ಕುರಿತ ಮಾತು. ಆದರೆ ಇದಿರಿಲ್ಲದ ಸಾಮರ್ಥ್ಯದ ಮಾತೇ ಬೇರೆ. ಶಾಸ್ತ್ರದಲ್ಲಿ ಹೇಳಿರುವಂತೆ ನಿಯಮಗಳಿಗೆ ಒಳಪಟ್ಟು ಧರ್ಮಯುದ್ಧದಲ್ಲಿ ಶೌರ್ಯವನ್ನು ತೋರುವ ವಿಧವೇ ಬೇರೆ. ಬೆಳಕೂ ಕತ್ತಲೆಯೂ ಒಂದೆಡೆ ಯಲ್ಲಿ ಇರುವುದಾದರೂ ಹೇಗೆ?"

ಇಷ್ಟರಲ್ಲಿ ಅರಸನು ಸಭೆಯನ್ನು ಮುಗಿಸಿ, ಜೋಯಿಸನು ಗೊತ್ತುಪಡಿ ಸಿದ ಲಗ್ನದಲ್ಲಿ ಪ್ರಯಾಣಮಾಡಿದನು. ಆಗ ಹಿರಣ್ಯಗರ್ಭನು ಹಿಂದೆ ಕಳುಹಿಸಿದ್ದ ಗೂಢಚಾರನಾದ ಬಕವು ಹಂಸರಾಜನಲ್ಲಿಗೆ ಹಿಂದಿರುಗಿ ಬಂದು ಅಡ್ಡಬಿದ್ದು "ಸ್ವಾಮಿ! ಅಗೋ ಚಿತ್ರವರ್ಣನು ಬರುತ್ತಿರುವನು. ಮಲಯ ಪರ್ವತದ ತಪ್ಪಲಿನಲ್ಲಿ ಬಿಡಾರಮಾಡಿರುವನು. ನಿಮಿಷ ನಿಮಿಷಕ್ಕೂ ನಮ್ಮ ಸೈನ್ಯವನ್ನು ಶೋಧನೆಮಾಡುತ್ತಲೇ ಇರಬೇಕು. ಅಗೋ, ಅಲ್ಲಿ ಕಾಣುವ ವನು ಚಿತ್ರವರ್ಣನ ಮುಖ್ಯ ಮಂತ್ರಿಯಾದ ದೂರದರ್ಶಿಯು; ಮಹಾ ತಂತ್ರಗಾರನು. ಅವನು ಗುಟ್ಟಾಗಿ ಮಾತನಾಡುವಾಗ ನಾನು ಹೊಂಚು ಕೇಳಿದೆನು. ಮೊದಲೇ ನಮ್ಮ ಕೋಟೆಯಲ್ಲಿ ಯಾವನನ್ನೋ ಗೂಢವಾಗಿ ಸೇರಿಸಿರುವನಂತೆ! ನಾವು ಜಾಗರೂಕರಾಗಿರಬೇಕು" ಎಂಬುದಾಗಿ ಬಿನ್ನಯಿಸಿ ದನು.

ಅಷ್ಟರಲ್ಲಿ ಮಂತ್ರಿಯಾದ ಚಕ್ರವಾಕನು "ಪ್ರಭುವೇ! ಹಾಗಾದರೆ ಅವನೇ ಸರಿ. ಆ ವಾಯಸವೇ ಆಗಿರಬೇಕು" ಎಂದನು. ಅದಕ್ಕೆ ರಾಜನು "ಎಷ್ಟು ಮಾತ್ರಕ್ಕೂ ಅಲ್ಲ. ಅವನಾಗಿದ್ದರೆ ಆಗ ಶತ್ರುಪಕ್ಷದ ರಾಯಬಾರಿ ಯಾದ ಶುಕನನ್ನು ಹೊಡೆಯುವುದಕ್ಕೆ ಏಳುತ್ತಲೇ ಇರಲಿಲ್ಲ. ಇಷ್ಟುಮಾತ್ರ ವಲ್ಲದೆ, ಗಿಳಿಯು ಬಂದುದರಿಂದಲೇ ಅವನಿಗೆ ಹೋರಾಟದಲ್ಲಿ ಅಷ್ಟೊಂದು ಅಕ್ಕರೆ. ಅವನು ಬಹು ಕಾಲದಿಂದ ಇಲ್ಲಿರುತ್ತಾನೆ" ಎಂಬುದಾಗಿ ಮಂತ್ರಿಯ ಮಾತನ್ನು ಮುರಿದನು. "ಆದರೂ ಹೊಸದಾಗಿ ಬಂದವನನ್ನು ನಂಬುವುದು ಹೇಗೆ?" ಎಂಬುದಾಗಿ ಮಂತ್ರಿಯು ಕೇಳಲಾಗಿ, ರಾಜನು ಇಂತೆಂದನು:—"ಹೀಗೆ ಹೊಸದಾಗಿ ಬಂದವರು ಒಂದೊಂದು ವೇಳೆ ಮೇಲು ಮಾಡುವುದೂ ಉಂಟು. ಹೊರಗಣವನಾದರೂ ಉಪಕಾರಮಾಡುವವ

ನಾವರೆ ಬಂಧುವಲ್ಲವೇ? ಕೇಡು ಬಯಸತಕ್ಕವನು ನಂಟನಾಗಿದ್ದರೂ ದೂರ ದಲ್ಲಿರಿಸಲು ತಕ್ಕವನಷ್ಟೆ! ಒಡಲಿನಲ್ಲಿ ಹುಟ್ಟಿದ ಮಾತ್ರದಿಂದಲೇ ರೋಗವು ಕೇಡನ್ನು ಒದಗಿಸಲಾರದೆನ್ನಬಹುದೇ? ಅಡವಿಯಲ್ಲಿ ಬೆಳೆದ ಓಷಧಿಯು ಆ ರೋಗವನ್ನು ನಾಶಗೊಳಿಸಿ ಮೇಲು ಮಾಡುವುದು. ಇತ್ತ ಕೇಳು. ಶುಭ್ರಕ ನೆಂಬ ಅರಸನ ಬಳಿ ವೀರವರನೆಂಬ ಸೇವಕನಿದ್ದನು. ಅವನು ಊಳಿಗಕ್ಕೆ ಬಂದ ಕೆಲವು ದಿನಗಳಲ್ಲಿಯೇ ತನ್ನ ಮಗನನ್ನು ಅರಸನ ಸಲುವಾಗಿ ಬಲಿ ಕೊಟ್ಟನಷ್ಟೆ!'' ಈ ಮಾತನ್ನು ಕೇಳಿ, ಅದರ ವಿವರವನ್ನು ತಿಳಿಸಬೇಕೆಂಬು ದಾಗಿ ಚಕ್ರವಾಕನು ಕೇಳಲಾಗಿ, ಹಂಸರಾಜನು ಹೇಳತೊಡಗಿದನು.

### ಒನೆಯ ಕಥೆ

ಹಿಂದೆ ಒಂದು ಕಾಲದಲ್ಲಿ ಶುಭ್ರಕರಾಜನ ಕ್ರೀಡಾಸರೋವರದಲ್ಲಿ ನಾನು ಜಲಕೇಳಿಯಲ್ಲಿದ್ದಾಗ, ಒಬ್ಬ ರಾಜಕುಮಾರನು ಅರಮನೆಯ ಮುಂದೆ ನಿಂತು ಪಹರೆಯವನೊಂದಿಗೆ "ನಾನೊಬ್ಬ ರಾಜಪುತ್ರನು. ಜೀವನೋ ಪಾಯವನ್ನು ಹುಡುಕುತ್ತ ಬಂದಿರುವೆನು. ನನಗೆ ರಾಜದರ್ಶನವನ್ನು ಮಾಡಿಸು'' ಎಂಬುದಾಗಿ ಕೇಳಿದನು. ಅಷ್ಟರಲ್ಲಿ ದ್ವಾರಪಾಲಕನು ಅರಸನ ಬಳಿಗೆ ಕರೆದುಯ್ಯಲು, ಆ ಅರಸುಮಗನು ರಾಜನನ್ನು ಕುರಿತು "ದೇವಾ! ನನ್ನ ಸೇವೆಯಿಂದ ತಮಗೆ ಉಪಯೋಗವಾಗುವುದಾದರೆ, ನನಗೆ ಸಂಬಳ ವನ್ನು ನಿಷ್ಕರ್ಷೆ ಮಾಡಬೇಕು'' ಎಂದನು. ಆಗ ಶುಭ್ರಕನು "ನೀನು ಎಷ್ಟು ಸಂಬಳವನ್ನು ಕೇಳುವೆ?'' ಎನಲು, ಅದಕ್ಕೆ ವೀರವರನು 'ದಿನ ಒಂದಕ್ಕೆ ನಾನ್ನೂರು ವರಹಗಳು' ಎಂದನು. ಆಗ ಶುಭ್ರಕನು 'ನಿನ್ನ ಸಾಧನಗಳೇನು?' ಎಂಬುದಾಗಿ ಪ್ರಶ್ನೆಮಾಡಿದನು. ಅದಕ್ಕೆ ವೀರವರನು "ಎರಡು ತೋಳು, ಒಂದು ಖಡ್ಗ" ಎನಲಾಗಿ, ಅರಸನು 'ಅದು ಸಾಧ್ಯವಲ್ಲ'—ಎಂದನು. ಕೂಡಲೇ ವೀರವರನು ಅರಸನಿಗೆ ನಮಸ್ಕಾರ ಮಾಡಿ ಅಲ್ಲಿಂದ ತೆರಳಿದನು. ಆಗ ಮಂತ್ರಿಗಳು ಅರಸನನ್ನು ಕುರಿತು 'ಸ್ವಾಮಿ! ಇವನು ಇಷ್ಟೊಂದು ವೇತನವನ್ನು ಸುಮ್ಮನೆ ಕೇಳಲಾರನು. ಇದರಲ್ಲಿ ಏನೋ ಗುಟ್ಟು ಇರಬೇಕು. ನಾಲ್ಕು ದಿನಗಳ ಮಟ್ಟಿಗಾದರೂ ಪರೀಕ್ಷಿಸಿ ನೋಡಬಹುದಲ್ಲವೇ?'' ಎಂಬು ದಾಗಿ ಬಿನ್ನಯಿಸಿದರು. ಬಳಿಕ ರಾಜನು ಅವರ ಮಾತಿನಂತೆ ಅವನನ್ನು ಕರೆ ತರಿಸಿ ವೀರವರನಿಗೆ ವೀಳೆಯವನ್ನಿತ್ತು ವೇತನವನ್ನು ಗೊತ್ತುಪಡಿಸಿದನು.

ವೀಳೆಯದಲ್ಲಿ ಕಾರವೂ ಕಹಿಯೂ ಕಲೆತು ಒಂದು ಬಗೆಯಾದ ಸಿಹಿ ಇರುವುದು. ಒಗರೂ, ಉಪ್ಪೂ ಸೇರಿವೆ. ವಾತವನ್ನೂ ಶ್ಲೇಷ್ಮವನ್ನೂ ಕ್ರಿಮಿಗಳನ್ನೂ ನಾಶಗೊಳಿಸುತ್ತದೆ. ಬಾಯ ನಾತವನ್ನು ತೊಲಗಿಸುತ್ತದೆ. ಮುಖಕ್ಕೆ ಅಲಂಕಾರ. ಮಲವನ್ನು ಸಡಿಲಿಸುತ್ತದೆ. ಕಾಮಾಗ್ನಿಯನ್ನು ಉದ್ದೀಪನಮಾಡುವುದು. ಈ ಹದಿಮೂರು ತಾಂಬೂಲದ ಗುಣಗಳು. ಸಖನೆ! ಇಷ್ಟು ಗುಣಗಳುಳ್ಳ ವಸ್ತುವು ಸ್ವರ್ಗದಲ್ಲಿಯೂ ದೊರೆಯಲಾರದು.

ಆ ಸಂಬಳವನ್ನು ಅವನು ಹೇಗೆ ವಿನಿಯೋಗಗೊಳಿಸುವನೆಂಬುದನ್ನು ಅರಸನು ಗುಟ್ಟಾಗಿ ಕಂಡುಹಿಡಿದನು. ವೀರವರನು ತನ್ನ ಸಂಬಳದಲ್ಲಿ ಅರ್ಧ ಭಾಗವನ್ನು ದೇವತಾಕಾರ್ಯಕ್ಕೂ ಬ್ರಾಹ್ಮಣರಿಗೂ ವಿನಿಯೋಗ ಪಡಿಸಿದನು. ಮೂರನೆಯ ಭಾಗವನ್ನು ಬಡಬಗ್ಗರಿಗೆ ಕೊಟ್ಟನು. ನಾಲ್ಕ ನೆಯ ಪಾಲನ್ನು ತನ್ನ ಊಟಕ್ಕೂ ವಿಲಾಸಕ್ಕೂ ಉಪಯೋಗಿಸುತ್ತಿದ್ದನು. ಇಂತು ದಿನಚರ್ಯೆಯು ನೆರವೇರಿದ ಕೂಡಲೇ ಅರಮನೆಯ ಮುಂದೆ ಹಗಲೂ ಇರುಳೂ ಕಾದಿರುವನು. ಅರಸನು ಮನೆಗೆ ಹೋಗುವಂತೆ ಅಪ್ಪಣೆಕೊಟ್ಟ ಬಳಿಕ, ತನ್ನ ಬಿಡಾರಕ್ಕೆ ಹೋಗುವನು. ಹೀಗೆಯೇ ನಡೆಯು ತ್ತಿರಲಾಗಿ ಕೃಷ್ಣಚತುರ್ದಶಿಯ ರಾತ್ರಿ ಯಾರೋ ದುಃಖದಿಂದ ಅಳುತ್ತಿದ್ದ ಶಬ್ದವು ಅರಸನ ಕಿವಿಗೆ ಬಿದ್ದಿತು. ಒಡನೆಯೇ "ಬಾಗಿಲಲ್ಲಿ ಇರುವವರು ಯಾರು?" ಎಂಬುದಾಗಿ ಅರಸನು ಕೇಳಲು, ವೀರವರನು "ಜೀಯಾ! ನಾನು" ಎಂಬುದಾಗಿ ಉತ್ತರಕೊಟ್ಟನು. "ಅದೇನು ರೋದನ ಧ್ವನಿ? ಹಿಂದೆಯೇ ಹೋಗಿ ತಿಳಿದು ಬಾ" ಎಂಬುದಾಗಿ ಅರಸನು ಹೇಳಲಾಗಿ, ವೀರವರನು "ಪ್ರಭುವಿನ ಅಪ್ಪಣೆ" ಎನ್ನುತ್ತ ತೆರಳಿದನು. "ಸೂಜಿಯಿಂದ ಚುಚ್ಚುವಷ್ಟು ದಟ್ಟವಾಗಿರುವ ಈ ಕಗ್ಗತ್ತಲೆಯಲ್ಲಿ ಇವನನ್ನು ಒಂಟಿಯಾಗಿ ಕಳುಹಿದೆನು. ಇದು ಯುಕ್ತವಲ್ಲ. ನಾನೂ ಹಿಂದೆಯೇ ಹೋಗಿ ಪರೀಕ್ಷಿಸು ವೆನು" ಎಂಬುದಾಗಿ ಯೋಚಿಸಿ, ಕೈಯಲ್ಲಿ ಖಡ್ಗವನ್ನು ಹಿಡಿದು ಅರಸನು ಅವನ ಹಿಂದೆಯೇ ಹೊರಟನು. ವೀರವರನು ಊರ ಹೊರಗೆ ಬಂದು ನೋಡಲಾಗಿ ರೂಪಯೌವನಭರಿತೆಯೆನಿಸಿ ಸಕಲಾಭರಣಭೂಷಿತೆಯಾಗಿದ್ದ ಒಬ್ಬ ತರುಣಿಯನ್ನು ಕಂಡು, "ನೀನು ಯಾರು? ಇಂತು ಅಳುವುದಕ್ಕೆ ಕಾರಣ ವೇನು?" ಎಂಬುದಾಗಿ ಪ್ರಶ್ನೆಮಾಡಿದನು. ಆ ಯುವತಿಯು "ನಾನು ಈ

ಶುಭ್ರಕರಾಜನ ರಾಜಲಕ್ಷ್ಮಿ ಬಹುಕಾಲದಿಂದ ಈತನ ಬಾಹುವನ್ನು ಆಶ್ರಯಿಸಿ ಸುಖವಾಗಿದ್ದೆನು. ಈಗ ಈತನನ್ನು ತೊಲಗಿ ಹೋಗಬೇಕಲ್ಲಾ! ಎಂಬುದಾಗಿ ದುಃಖವು ಉಕ್ಕಿಬರುತ್ತಿದೆ'' ಎಂದಳು. "ಎಲೌ ದೇವಿಯೆ! ಅಪಾಯದ ಹಿಂದೆಯೇ ಉಪಾಯವು ಇರುವುದಲ್ಲವೇ? ಈತನನ್ನು ಬಿಟ್ಟು ತೊಲಗದೆ ಇಲ್ಲಿಯೇ ನೆಲೆಸಿರುವುದಕ್ಕೆ ಉಪಾಯವಾವುದು?'' ಎಂಬುದಾಗಿ ವೀರವರನು ಕೇಳಲಾಗಿ, ರಾಜಲಕ್ಷ್ಮಿಯು "ಮೂವತ್ತೆರಡು ಲಕ್ಷಣ ಗಳಿಂದೊಪ್ಪುವ ನಿನ್ನ ಕುಮಾರನಾದ ಶಕ್ತಿವರನನ್ನು ಭಗವತಿಯಾದ ಸರ್ವ ಮಂಗಳಾದೇವಿಗೆ ಕಾಣಿಕೆಮಾಡುವೆಯಾದರೆ, ನಾನು ಎಂದೆಂದಿಗೂ ಇಲ್ಲಿಯೇ ಸ್ಥಿರವಾಗಿರುವೆನು'' ಎನ್ನುತಲೇ ಕಣ್ಮರೆಯಾದಳು. ಒಡನೆ ವೀರವರನು ತನ್ನ ಮನೆಗೆ ಹೋಗಿ, ಮಲಗಿದ್ದ ಮಡದಿಮಕ್ಕಳನ್ನು ಎಚ್ಚರ ಗೊಳಿಸಿದನು. ಅವರು ಎಚ್ಚೆತ್ತು ಕುಳಿತರು. ವೀರವರನು ರಾಜಲಕ್ಷ್ಮಿಯು ಮಾತುಗಳನ್ನೆಲ್ಲ ವಿವರವಾಗಿ ತಿಳಿಸಿದನು. ಆ ಮಾತುಗಳು ಕಿವಿಯಲ್ಲಿ ಬಿದ್ದೊಡನೆ ಶಕ್ತಿವರನು ಆನಂದದಿಂದ "ಪ್ರಭುವಿನ ರಾಜ್ಯವನ್ನು ಕಾಪಾಡುವ ಸಲುವಾಗಿ, ಉಪಯೋಗಪಡುವಂತಹ ಭಾಗ್ಯವು ಈ ದೇಹಕ್ಕೆ ದೊರೆತುದಲ್ಲವೇ? ನಾನೇ ಧನ್ಯನು! ಇನ್ನು ತಡವೇಕೆ? ಇಂತಹ ಕಾರ್ಯದಲ್ಲಿ ದೇಹವನ್ನು ವಿನಿಯೋಗಗೊಳಿಸುವುದು ಶ್ಲಾಘ್ಯವಲ್ಲವೇ? ಏಕೆಂದರೆ ಪ್ರಾಜ್ಞನು ಹೆರರ ಸಲುವಾಗಿ ಹಣವನ್ನೂ ಹರಣವನ್ನೂ ತ್ಯಾಗ ಮಾಡಬೇಕು. ಎಂದಿಗಾದರೂ ವಿನಾಶವು ನಿಶ್ಚಯವಾಗಿರುವಲ್ಲಿ, ಒಳ್ಳೆಯ ಕೆಲಸದಲ್ಲಿ ವಿನಿಯೋಗಗೊಳಿಸುವುದು ಶ್ಲಾಘ್ಯವಲ್ಲವೇ?'' ಎಂದನು.

ಬಳಿಕ ಶಕ್ತಿವರನ ಜನನಿಯು ಹೀಗೆ ಹೇಳಿದಳು:–"ನಮ್ಮ ವಂಶಕ್ಕೆ ತಕ್ಕುದಾದ ಈ ಕಾರ್ಯವನ್ನು ನಾವು ಮಾಡದಿದ್ದರೆ ಮತ್ತಾವ ಕಾರ್ಯ ದಿಂದ ಈ ಹೆಚ್ಚು ಸಂಬಳದ ಋಣವನ್ನು ತೀರಿಸಬಲ್ಲೆವು?'' ಅಂತೆಯೇ ಎಲ್ಲರೂ ಯೋಚಿಸಿ, ಭಗವತಿಯಾದ ಸರ್ವ ಮಂಗಳಾದೇವಿಯ ಮಂದಿ ರಕ್ಕೆ ತೆರಳಿದರು. ಆಗ ವೀರವರನು "ದೇವೀ! ಅನುಗ್ರಹಿಸು. ಶುಭ್ರಕ ಮಹಾರಾಜನು ವೃದ್ಧಿಯನ್ನೈದಿ ಸುಖವಾಗಿರಲಿ! ಈ ಉಪಹಾರವನ್ನು ಸ್ವೀಕರಿಸಿ, ನೀನು ಸಂತಸಗೊಳ್ಳು'' ಎನ್ನುತ್ತ ತನ್ನ ಕುಮಾರನ ತಲೆಯನ್ನು ಕಡಿದು ಮನಸ್ಸಿನಲ್ಲಿಯೇ "ಅರಸನಿಂದ ಪಡೆದ ವೇತನದ ಋಣವನ್ನು

ತೀರಿಸಿದೆನು. ಪುತ್ರಹೀನನಾದ ನಾನು ಇನ್ನು ಬದುಕಿರುವುದೆಂಬುದು ಕೇವಲ ನಟನೆ. ಪರಿಹಾಸಕ್ಕೆ ಗುರಿ'' ಎಂಬುದಾಗಿ ಯೋಚಿಸಿ, ತನ್ನ ಕುತ್ತಿಗೆಯನ್ನು ಕಡಿದುಕೊಂಡನು. ಇಂತು ಪತಿಪುತ್ರರಿಬ್ಬರು ಮಡಿದ ದುಃಖವನ್ನು ಸಹಿಸಲಾರದೆ ವೀರವರನ ಪತ್ನಿಯೂ ತನ್ನ ಕುತ್ತಿಗೆಯನ್ನು ಕುಯ್ದುಕೊಂಡಳು. ಇದೆಲ್ಲವನ್ನು ಕಂಡು ಕೇಳಿ ಅರಸನು "ಛೀ! ಛೀ! ನನ್ನಂತಹ ಮೊಂಡರು ಬದುಕಿದ್ದರೇನು? ಸತ್ತರೇನು? ಇವನಿಗೆ ಸಮಾನನಾದ ವೀರಪುರುಷನನ್ನು ಇಂದಿನ ವರೆಗೆ ನಾನು ನೋಡಿಯೂ ಇಲ್ಲ; ಕೇಳಿಯೂ ಇಲ್ಲ; ಇನ್ನು ಮುಂದೆ ಕಾಣುವಂತೆಯೂ ಇಲ್ಲ. ಇಂತಹ ಲೋಕೈಕ ವೀರನೇ ಇಲ್ಲದ ಬಳಿಕ ನನಗೇಕೆ ಈ ರಾಜ್ಯ?'' ಎಂಬುದಾಗಿ ಯೋಚಿಸಿ, ತನ್ನ ತಲೆಯನ್ನು ಕತ್ತರಿಸಲು ಖಡ್ಗವನ್ನು ಎತ್ತುವಷ್ಟರಲ್ಲಿ ಸರ್ವಮಂಗಳೆಯು ಪ್ರತ್ಯಕ್ಷವಾಗಿ, ಅರಸನ ಕೈಯನ್ನು ಹಿಡಿದು ನಿಲ್ಲಿಸಿ, "ಮಗೂ! ಈ ಸಾಹಸವು ತಕ್ಕುದಲ್ಲ. ನಾನು ನಿನ್ನ ವಿಷಯದಲ್ಲಿ ಪ್ರಸನ್ನೆಯಾಗಿರುವೆನು. ಈ ದುರ್ವ್ಯವಸಾಯವನ್ನು ಸಾಕುಮಾಡು. ನೀನು ಬದುಕಿರುವ ವರೆಗೂ ಈ ರಾಜ್ಯವು ನಿನ್ನ ಕೈಬಿಟ್ಟು ಹೋಗುವುದಿಲ್ಲ'' ಎಂದಳು. ಆಗ ಶುಭ್ರಕನು "ಜಗನ್ಮಾತೆ! ಈ ರಾಜ್ಯವನ್ನು ಕಟ್ಟಿಕೊಂಡು ನಾನೇನು ಮಾಡಬಲ್ಲೆನು? ನಿನಗೆ ದಿಟವಾಗಿಯೂ ನನ್ನ ವಿಷಯದಲ್ಲಿ ಕನಿಕರವೂ ವಾತ್ಸಲ್ಯವೂ ಇರುವುದಾದರೆ, ನನ್ನ ಆಯುಶ್ಶೇಷದಿಂದಲಾದರೂ ಈ ರಾಜಕುಮಾರನನ್ನು ಮಡದಿ ಮಕ್ಕಳೊಂದಿಗೆ ಬದುಕಿಸು. ಇಲ್ಲವಾದರೆ, ನನ್ನ ಗತಿಯನ್ನು ನಾನು ನೋಡಿಕೊಳ್ಳುವೆನು'' ಎಂಬುದಾಗಿ ಬೇಡಿದನು. ಆಗ ಭಗವತಿಯು "ನಿನ್ನ ಸತ್ವಸಂಪತ್ತಿಗೂ, ಆಶ್ರಿತವಾತ್ಸಲ್ಯಕ್ಕೂ ಮೆಚ್ಚಿದೆನು. ಜಯಶೀಲನಾಗಿ ಬಾಳು! ಹೋಗು! ಮಡದಿಮಕ್ಕಳೊಂದಿಗೆ ಈ ರಾಜಪುತ್ರನೂ ಬದುಕುವನು'' ಎನ್ನುತಲೇ ಕಣ್ಮರೆಯಾದಳು. ರಾಜನು ದೇವಿಗೆ ಸಾಷ್ಟಾಂಗ ಪ್ರಣಾಮಮಾಡಿ ಅವರ ಕಣ್ಣಿಗೆ ಬೀಳದಂತೆ ಬೇಗನೆ ನಡೆದುಬಂದು, ಅರಮನೆಯ ಉಪ್ಪರಿಗೆಯ ಮೇಲೆ ಪವಡಿಸಿದನು. ವೀರವರನು ಪತ್ನೀಪುತ್ರರೊಂದಿಗೆ ಬದುಕಿ ಎದ್ದು ತನ್ನ ಮನೆಗೆ ಹೋದನು; ಪತ್ನಿಯನ್ನೂ ಸುತನನ್ನೂ ಮನೆಯಲ್ಲಿ ಬಿಟ್ಟು, ಬೇಗನೆ ಅರಮನೆಯ ಮುಂದೆ ಎಂದಿನಂತೆ ಪಹರೆಯನ್ನು ಕೊಡತೊಡಗಿದನು. ಅರಸನು ಸಮಾಚಾರವೇನೆಂಬುವಾಗಿ ಕೇಳಲಾಗಿ, "ಸ್ವಾಮಿ! ಅಳುತ್ತಿದ್ದ ಆ ವನಿತೆಯು ನನ್ನನ್ನು ನೋಡಿದ

ಕೂಡಲೇ ಕಣ್ಮರೆಯಾದಳು'' ಎಂದನು. ಆ ಮಾತನ್ನು ಕೇಳಿ ಅರಸನು "ಆಹಾ! ಇವನೆಂತಹ ಸತ್ವಶಾಲಿ! ಇವನನ್ನು ಎಷ್ಟು ಬಗೆಯಿಂದ ಕೊಂಡಾಡಿದರೂ ಸ್ವಲ್ಪವೇ ಸರಿ. ದೈನ್ಯವನ್ನು ತುಳಿದು ಪ್ರಿಯವನ್ನು ನುಡಿಯಬೇಕು. ಶೂರನು ಎಂದಿಗೂ ತನ್ನನ್ನು ಹೊಗಳಿಕೊಳ್ಳಬಾರದು. ತ್ಯಾಗಿಯು ಪಾತ್ರವರಿತು ಸುರಿಸಬೇಕು. ಪ್ರಜ್ಞಾಶಾಲಿಯು ಮರುಕವುಳ್ಳವನಾಗಿರಬೇಕು. ಇದೀಗ ಮಹಾಪುರುಷನ ಲಕ್ಷಣ! ಇಂತಹ ಲಕ್ಷಣಗಳೆಲ್ಲವೂ ಈತನಲ್ಲಿಯೇ ಅಡಕವಾಗಿರುವುವು'' ಎಂಬುದಾಗಿ ಯೋಚಿಸಿ, ಬೆಳಗಾದ ಕೂಡಲೇ ವಿಶಿಷ್ಟರನ್ನು ಸಭೆಗೂಡಿಸಿ, ನಡೆದ ಸಮಾಚಾರವನ್ನೆಲ್ಲ ವಿಸ್ತಾರವಾಗಿ ಹೇಳಿ, ವಿಶೇಷ ದಯೆಯಿಂದ ವೀರವರನಿಗೆ ಕರ್ಣಾಟಕ ರಾಜ್ಯವನ್ನು ಕೊಟ್ಟನು. ಆ ಕಾರಣ ಹೊಸದಾಗಿ ಬಂದವನು ಜಾತಿಮಾತ್ರದಿಂದಲೇ ದುಷ್ಟನೆಂಬುದಾಗಿ ಹೇಳಲಾಗದು. ಅವರಲ್ಲಿಯೂ ಮೇಲ್ತರದವರೂ, ನಡುತರದವರೂ, ಕೀಳ್ತರದವರೂ ಇರುತ್ತಾರೆ.

ಬಳಿಕ ಮಂತ್ರಿಯು ಇಂತೆಂದನು:—"ಅರಸನ ಪ್ರೀತಿಯನ್ನು ಸಂಪಾದಿಸುವ ಉದ್ದೇಶದಿಂದ ಮಾಡಬಾರದ ಕೆಲಸವನ್ನು ಮಾಡಬಹುದೆಂಬುದಾಗಿ ಅನುಮೋದಿಸತಕ್ಕವನು ದುಷ್ಟಮಂತ್ರಿ. ರಾಜನನ್ನು ಅಕಾರ್ಯದಲ್ಲಿ ಪ್ರವೃತ್ತಿಗೊಳಿಸಿ ಕೇಡನ್ನು ತಂದೊಡ್ಡುವುದಕ್ಕಿಂತ, ಹಿತವನ್ನು ಉಪದೇಶಿಸುವುದರ ಮೂಲಕ ಆತನ ಮನಸ್ಸಿಗೆ ಆಯಾಸವನ್ನುಂಟುಮಾಡುವುದೇ ಲೇಸು. ಯಾವಾಗಲೂ ಅರಸನಿಗೆ ಪ್ರಿಯವನ್ನೇ ಹೇಳಬೇಕೆಂಬುವ ವೈದ್ಯನೂ, ಗುರುವೂ, ಮಂತ್ರಿಯೂ ಹಿತಶತ್ರುಗಳು. ಇವರ ದುರುಪದೇಶದಿಂದ ರಾಜನು ಬೇಗನೆ ತನ್ನ ದೇಹವನ್ನು ಕೊಳ್ಳೆಕೊಡುವನು. ಸ್ವಾಮಿಯು ಲಾಲಿಸಬೇಕು. ದೈವವಶದಿಂದ ಯಾವನೋ ಒಂದು ವಸ್ತುವನ್ನು ಪಡೆದರೆ ತನಗೆ ಅಂತಹ ವಸ್ತುವು ಅಂತೆಯೇ ಲಭಿಸುವುದೆಂಬ ಆಸೆಯು ತರವಲ್ಲ. ಲೋಭಪೀಡಿತನಾದ ನಾಯಿಂದನು ಸನ್ಯಾಸಿಯನ್ನು ಕೊಂದು ಮರಣದಂಡನೆಗೆ ಗುರಿಯಾದನು.'' ಆ ಕಥೆಯನ್ನು ವಿವರಿಸಿ ಹೇಳುವಂತೆ ಅರಸನು ಕೇಳಲಾಗಿ ಮಂತ್ರಿಯು ಹೇಳತೊಡಗಿದನು.

### ಆನೆಯ ಕಥೆ

ಅಯೋಧ್ಯಾನಗರಿಯಲ್ಲಿ ಚೂಡಾಮಣಿಯೆಂಬ ಕ್ಷತ್ರಿಯನಿದ್ದನು. ಆವನು ಹಣದ ಆಶೆಯಿಂದ, ಅನೇಕ ಕಷ್ಟಗಳನ್ನು ಸಹಿಸಿ, ಭಗವಂತನಾದ

ಚಂದ್ರಶೇಖರನನ್ನು ಉಪಾಸನೆಮಾಡಲಾಗಿ, ಪರಮೇಶ್ವರನ ಅನುಗ್ರಹದಿಂದ ಕುಬೇರನು ಆ ರಾಜನಿಗೆ ಕನಸಿನಲ್ಲಿ ಮೈದೋರಿ, "ಬೆಳಗಾಗುತ್ತಲೇ ನೀನು ಕ್ಷೌರಮಾಡಿಸಿಕೊಂಡು ದೊಣ್ಣೆಯನ್ನು ಕೈಯಲ್ಲಿ ಹಿಡಿದು ಮನೆಯಲ್ಲಿ ಅವಿತುಕೊಂಡಿರು. ಆಗ ಒಬ್ಬ ಸನ್ಯಾಸಿಯು ಅಂಗಳಕ್ಕೆ ಬರುವನು. ಅವನು ಅಂಗಳದಲ್ಲಿ ಕಾಲಿಟ್ಟ ಕೂಡಲೇ ಸ್ವಲ್ಪವೂ ಕನಿಕರಪಡದೆ, ದೊಣ್ಣೆಯಿಂದ ಹೊಡೆದು ಅವನನ್ನು ಕೊಂದುಬಿಡು. ನಿಮಿಷದಲ್ಲಿಯೇ ಆ ಯತಿಯು ಚಿನ್ನದ ನಾಣ್ಯಗಳಿಂದ ತುಂಬಿದ ಗಿಂಡಿಯ ರೂಪವನ್ನು ತಳೆವನು. ಆದ ರಿಂದ ನೀನು ಸುಖವಾಗಿ ಜೀವನವನ್ನು ನಡೆಯಿಸು" ಎಂಬುದಾಗಿ ಹೇಳಿ ದನು. ಮರುದಿನ ಎಲ್ಲವೂ ಅಂತೆಯೇ ನಡೆಯಲಾಗಿ, ಕ್ಷೌರಮಾಡುವುದಕ್ಕೆ ಬಂದಿದ್ದ ನಾಯಿಂದನು ಇದೆಲ್ಲವನ್ನು ನೋಡಿ "ಓಹೋ! ಸಿಧಿಯು ದೊರೆಯಬೇಕಾದರೆ ಇದೇ ಉಪಾಯ! ನಾನು ಹೀಗೆಯೇ ಏಕೆ ಮಾಡ ಬಾರದು?" ಎಂಬುದಾಗಿ ಯೋಚಿಸಿ, ಅಂದಿನ ಮೊದಲು, ಯಾವಾಗಲೂ ಕೈಯಲ್ಲಿ ಒಂದು ದೊಣ್ಣೆಯನ್ನು ಹಿಡಿದು, ಯಾವನಾದರೂ ಸನ್ಯಾಸಿಯು ಬಂದಾನೇ? ಎಂಬುದಾಗಿ ಇದಿರುನೋಡುತ್ತಿದ್ದನು. ಇಂತಿರುವಲ್ಲಿ ಒಂದು ದಿನ ಒಬ್ಬ ಬೈರಾಗಿಯು ಬಂದನು. ನಾಪಿತನು ಅವನನ್ನು ಕೂಡಲೇ ದೊಣ್ಣೆಯಿಂದ ಬಡಿದು ಕೊಂದನು. ಈ ಅಪರಾಧವು ರಾಜಪುರುಷರಿಗೆ ತಿಳಿದು ಅವರು ಇವನನ್ನು ಮರಣದಂಡನೆಗೆ ಗುರಿಮಾಡಿದರು" ಎಂದನು.

ಈ ಮಾತನ್ನು ಕೇಳಿ ಹಂಸರಾಜನು ಹೀಗೆಂದನು:—"ಹಿಂದೆ ನಡೆದ ಯಾವುದೋ ಸಮಾಚಾರವನ್ನು ಹೇಳಿದುದರಿಂದ, ಹೊಸದಾಗಿ ಬಂದವನು ಅಕೃತ್ರಿಮ ಮಿತ್ರನೋ ವಿಶ್ವಾಸಘಾತುಕನೋ ತಿಳಿಯಬರುವುದಿಲ್ಲ. ಅದಿ ರಲಿ. ಈಗ ಮುಂದಿನ ಕರ್ತವ್ಯವನ್ನು ಯೋಚಿಸಬೇಕಷ್ಟೆ! ಚಿತ್ರವರ್ಣನು ಮಲಯಪರ್ವತವನ್ನು ಸೇರಿರುವನಾದರೆ ಈಗ ನಾನೇನು ಮಾಡಬೇಕು?"

ಈ ಮಾತನ್ನು ಕೇಳಿ ಮಂತ್ರಿಯು—"ಇಲ್ಲಿಗೆ ಬಂದಿದ್ದ ಗೂಢ ಚಾರನ ಮೂಲಕ ಕೇಳಿ ತಿಳಿದ ಅಂಶವನ್ನು ಬಿನ್ನಯಿಸುವೆನು. ಚಿತ್ರವರ್ಣನು ತನ್ನ ಮುಖ್ಯ ಮಂತ್ರಿಯಾದ ದೂರದರ್ಶಿಯ ಹಿತವಾಕ್ಯಗಳನ್ನು ಅಸಡ್ಡೆ ಮಾಡಿರುವನಂತೆ! ಆ ಕಾರಣದಿಂದ ಈ ಹೆಡ್ಡನನ್ನು ನಾವು ಸುಲಭವಾಗಿ ಗೆಲ್ಲಬಹುದು. ಏಕೆಂದರೆ—ಲೋಭಿಯೂ, ಕ್ರೂರನೂ, ನಶತಪ್ಪಿದವನೂ,

ಅಸತ್ಯವಾದಿಯೂ, ಕಾರ್ಯದಲ್ಲಿ ಸ್ಥಿರಚಿತ್ತವಿಲ್ಲದವನೂ, ಎದೆಗುಂದಿದವನೂ, ಚಪಲನೂ, ಮೂಢನೂ, ಯೋಧರನ್ನು ಅಲ್ಲಗಳೆಯತಕ್ಕವನೂ ಎನಿಸಿದ ಹಗೆಯನ್ನು ಸುಲಭವಾಗಿ ಗೆಲ್ಲಬಹುದೆಂಬುದಾಗಿ ನೀತಿಕೋವಿದರು ಅಭಿಪ್ರಾಯಪಟ್ಟಿರುವರು. ಆದರಿಂದ ಇವನು ನಮ್ಮ ದುರ್ಗಕ್ಕೆ ಮುತ್ತಿಗೆ ಹಾಕುವುದಕ್ಕೆ ಮುಂಚಿತವಾಗಿಯೇ, ಜಲಮಾರ್ಗದಲ್ಲಿಯೂ ಸ್ಥಳಮಾರ್ಗದಲ್ಲಿಯೂ, ಗಿರಿಮಾರ್ಗದಲ್ಲಿಯೂ ಇವನ ಸೇನೆಯನ್ನು ನಿರ್ಮೂಲಗೊಳಿಸಲು ಸಾರಸನೇ ಮೊದಲಾದ ದಳವಾಯಿಗಳನ್ನು ಬೇಗನೆ ಕಳುಹಬೇಕು. ಇದೇ ಈಗ ಯುಕ್ತವಾದ ಕಾರ್ಯ. ಇವನ ಸೇನೆಯು ಬಹಳ ದೂರದಿಂದ ಬಂದಿರುವ ಕಾರಣ ಬಳಲಿ ಬೆಂಡಾಗಿದೆ. ಇದನ್ನು ಈಗಲೇ ಹೊಳೆಗಳಲ್ಲಿಯೂ, ಬೆಟ್ಟಗಳಲ್ಲಿಯೂ, ಅಡವಿಯಲ್ಲಿಯೂ ಇರುಕಿಸಿ, ಅತ್ತಿತ್ತ ಅಲುಗದಂತೆ ಮಾಡಿ, ಬೆಂಕಿಯ ಹಾಗೆ ಭಯಂಕರವಾದ, ನಮ್ಮ ಸೈನಿಕರ ಕಿರುಕುಳಕ್ಕೆ ಸಿಲುಕಿಸಿದರೆ, ಹಸಿವು ನೀರಡಿಕೆಗಳಿಂದ ಕಂಗೆಟ್ಟು ಬಾಧೆಪಟ್ಟು ತಾನಾಗಿಯೇ ಧ್ವಂಸವಾಗುವುದು. ಹೀಗಾದರೆ, ಹೊಟ್ಟೆಗೆ ಗತಿಯಿಲ್ಲದೆ ಬಾಯಿ ಬಾಯಿ ಬಿಡುತ್ತ, ರೋಗದಿಂದ ನರಳಿ, ಗಂಟಲೊಣಗಿ, ವ್ಯೂಹದಿಂದ ತಪ್ಪಿಸಿಕೊಂಡು, ಅಲ್ಲಲ್ಲಿ ಕೆಲವು ಮಂದಿ ಮಾತ್ರವೇ ಉಳಿದು ಮಿಕ್ಕವರೆಲ್ಲರೂ ದಿಕ್ಕುಪಾಲಾಗಿ, ಕೆಸರು, ನೀರು, ಧೂಳಿಗಳಿಂದ ಮಾಸಿ, ಚೆದರಿರುವ ಸಮಯವನ್ನು ಕಂಡುಹಿಡಿದು ಅರಸನು ಶತ್ರುಸೈನ್ಯವನ್ನು ಮುರಿಯಬೇಕು.

ಹಗೆಗಳು ಯಾವಾಗ ಎಲ್ಲಿ ಬಂದು ಮುತ್ತುವರೋ ಎಂಬ ಹೆದರಿಕೆಯಿಂದ ರಾತ್ರಿಯೆಲ್ಲ ಎಚ್ಚತ್ತು, ಹಗಲು ಮೈಮರೆತು ನಿದ್ರಿಸುವಾಗ ವೈರಿದಳವನ್ನು ಅವಶ್ಯವಾಗಿಯೂ ಕೊನೆಗಾಣಿಸಬೇಕು. ಇದೀಗ ನೀತಿಶಾಸ್ತ್ರಜ್ಞರ ಅಭಿಪ್ರಾಯ. ಈ ಕಾರಣದಿಂದ ನಾವು ಅಲಕ್ಷ್ಯವಾಗಿರುವ ಶತ್ರುವಿನ ಸೈನ್ಯವನ್ನು ನಮ್ಮ ದಳಪತಿಗಳ ಮೂಲಕ ಸಂಚುಹಾಕಿಸಿ, ಸಮಯವನ್ನರಿತು ಹಗಲು ಇರುಳು ಎನ್ನದೆ ಕೊಲ್ಲಿಸಬೇಕು" ಎಂಬುದಾಗಿ ಸಲಹೆ ಕೊಟ್ಟನು.

ಹಿರಣ್ಯಗರ್ಭನು ಚಕ್ರವಾಕನ ಮಾತಿನಂತೆಯೇ ನಡೆಯಿಸಲಾಗಿ, ಚಿತ್ರವರ್ಣನ ಸೈನ್ಯದಲ್ಲಿ ಲೆಕ್ಕವಿಲ್ಲದಷ್ಟು ಮಂದಿ ವೀರಪುರುಷರೂ ಕಾಲಾಳು

ಗಳೂ ಮಡಿದರು. ಆಗ ಚಿತ್ರವರ್ಣನು ಹೆದರಿ, ತನ್ನ ಮುಖ್ಯಮಂತ್ರಿಯಾದ ದೂರದರ್ಶಿಯೊಂದಿಗೆ ಇಂತೆಂದನು:—"ಅಣ್ಣಾ! ಇದೇಕೆ ನೀನು ನನ್ನನ್ನು ಈ ರೀತಿ ಅಸಡ್ಡೆಮಾಡಿರುವೆ? ಎಂದಾದರೂ ನಾನು ನಿನ್ನ ಮಾತನ್ನು ಅಲ್ಲಗಳೆದೆನೇ? ರಾಜ್ಯವು ದೊರೆತಿರುವುದಲ್ಲವೆಂಬ ದುರಭಿಮಾನದಿಂದ ನೀತಿ ತಪ್ಪಿ ನಡೆಯಬಾರದು. ಮುದಿತನವು ದಿವ್ಯವಾದ ಸೌಂದರ್ಯವನ್ನು ಅಪಹರಿಸುವಂತೆಯೇ ಕೆಟ್ಟ ನಡೆವಳಿಯು ಸಿರಿಯನ್ನು ಕಸುಗೊಳ್ಳುವುದು. ಶೂರನು ಸಂಪತ್ತನ್ನು ಪಡೆಯುವನು. ಪಥ್ಯವಾಗಿ ಮಿತವರಿತು ಊಟ ಮಾಡತಕ್ಕವನು ಎಂದಿಗೂ ರೋಗಕ್ಕೆ ಸಿಲುಕಿ ನರಳುವುದಿಲ್ಲ. ನಿರೋಗಿಯು ಸುಖವನ್ನು ಅನುಭವಿಸುವನು. ಸ್ಥಿರಚಿತ್ತನು ವಿದ್ಯೆಯ ಪಾರವನ್ನು ಕಾಣುವನು. ವಿನಯಭೂಷಿತನು ಧನವನ್ನೂ ಧರ್ಮವನ್ನೂ ಪಡೆಯುವನು."

ಆಗ ಮಂತ್ರಿಯಾದ ದೂರದರ್ಶಿಯು "ಸ್ವಾಮಿ! ಲಾಲಿಸಬೇಕು. ಸ್ವತಃ ತಿಳಿವಳಿಕೆ ಇಲ್ಲದ ಅರಸು ಜ್ಞಾನವೃದ್ಧರನ್ನು ಉಪಾಶ್ರಯಮಾಡಿ, ಅವರ ನೀತಿಬಲದಿಂದ, ನೀರಿನ ಒಡ್ಡಿನಲ್ಲಿ ಬೆಳೆದ ಮರದಂತೆ ಹೆಚ್ಚಿದ ಸಿರಿಗೆ ಪಾತ್ರನಾಗುವನು. ಕುಡಿಕತನ, ಹೆಣ್ಣು, ಬೇಟೆ, ಜೂಜು, ದುಂದುಗಾರಿಕೆ, ಬಿರುಮಾತು, ಶಿಕ್ಷೆಯಲ್ಲಿ ಕಾಠಿಣ್ಯ–ಇವು ಅರಸನ ದೋಷಗಳು. ಸಾಹಸದಲ್ಲಿ ಪ್ರೀತಿಯಿಟ್ಟ ಮಾತ್ರದಿಂದಲೇ ಆಗಲಿ, ಉಪಾಯ ಪ್ರಯೋಗಗಳಿಂದ ಮನಸ್ಸನ್ನು ಕೆಡಿಸಿಕೊಳ್ಳುವುದರಿಂದಲೇ ಆಗಲಿ, ಶ್ರೀಮಂತನೆನಿಸಿಕೊಳ್ಳಲು ಶಕ್ಯವಲ್ಲ. ನೀತಿಯೂ ಶೌರ್ಯವೂ ಎಲ್ಲಿ ಒಟ್ಟುಗೂಡಿರುವುವೋ ಸಿರಿಯು ಅಲ್ಲಿಯೇ ನೆಲೆಮಾಡಲು ಬಯಸುವಳು. ನೀನು ನಿನ್ನ ಸೇನೆಯ ಪರಾಕ್ರಮಕ್ಕೆ ಹಿಗ್ಗಿ, ಸಾಹಸದಲ್ಲಿ ಹೆಚ್ಚು ಅಕ್ಕರೆಯನ್ನು ತೋರಿ, ನನ್ನ ಮಾತನ್ನು ಹುಲ್ಲುಕಡ್ಡಿಗಿಂತ ಕಡೆಯಾಗಿ ಅಸಡ್ಡೆಮಾಡಿ, ನನ್ನ ಆಲೋಚನೆಗಳನ್ನೆಲ್ಲ ಅಲ್ಲಗಳೆದುದು ಮಾತ್ರವಲ್ಲದೆ, ಬಿರುಸುಮಾತುಗಳಿಂದ ನನ್ನ ಅಂತರಂಗವನ್ನೂ ನೋಯಿಸಿದೆಯಲ್ಲವೇ? ಅಂತಹ ದುರ್ನೀತಿಗೆ ಆಗ ತಕ್ಕ ಫಲವೇ ದೊರೆತುದು. ದುರ್ಮಂತ್ರಗಳಿಂದ ಮನೋವೃತ್ತಿಯು ಸ್ಥಿರಗೊಳ್ಳದಿದ್ದರೆ ನೀತಿದೋಷಗಳು ಸಂಭವಿಸುವುದು ಸಹಜ. ಪಥ್ಯವನ್ನು ಲೆಕ್ಕಿಸದಿದ್ದರೆ ರೋಗವು ಪ್ರಬಲಿಸದೆ ಇರುವುದೇ? ಸಿರಿಯ ಹೆಮ್ಮೆಯಿಂದ ಮರುಳಾಗದವನು ಇರುವನೇ? ಮೃತ್ಯುವಿಗೆ ಸಿಕ್ಕದಂತೆ ತಪ್ಪಿಸಿಕೊಳ್ಳುವುದು ಯಾರಿಗೆ ಸಾಧ್ಯ?"

“ಸಂತೋಷಕ್ಕೆ ಅಂಜಿಕೆಯೇ ಕೊನೆ. ಹಿಮಗಾಲವು ತಲೆದೋರಿದೊಡನೆಯೇ ಶರದೃತುವು ಮಾಯವಾಗುವುದು. ಸೂರ್ಯನು ಮೂಡಿದನೆಂದರೆ ಕತ್ತಲೆಯು ನಾಶವಾಗುವುದು. ಮಾಡಿದ ಉಪಕಾರವನ್ನು ಮರೆತರೆ ಸ್ನೇಹವು ನಿಲ್ಲುವುದೇ? ನಿರ್ಮಲ ಜ್ಞಾನದಿಂದ ದುಃಖವು ತೊಲಗುವುದು. ನೀತಿಯನ್ನು ಬಲ್ಲವನಿಗೆ ಎಡರುಗಳು ಅಂಜುವುವು. ನೀತಿತಪ್ಪಿ ನಡೆದರೆ ಎಂತಹ ಸಂಪತ್ತಾದರೂ ಹಾಳಾಗದಿರದು. ಇಂತು ನಿನ್ನ ನಡೆವಳಿಯಿಂದ ನಾನೂ ಹೀಗೆ ಯೋಚಿಸಿದೆನು:—‘ಈ ರಾಜನು ವಿವೇಕಶೂನ್ಯನು. ಅಲ್ಲದಿದ್ದರೆ, ನನ್ನ ನೀತಿಶಾಸ್ತ್ರಸಾರವೆಂಬ ಬೆಳ್ದಿಂಗಳನ್ನು, ತನ್ನ ಒರಟು ಮಾತುಗಳೆಂಬ ಕೊಳ್ಳಿಗಳಿಂದ ಕತ್ತಲೆಯಂತೆ ಮಾಡುತಿದ್ದನೇ? ಸ್ವತಃ ಬುದ್ಧಿಶೂನ್ಯನಾದವನಿಗೆ ಶಾಸ್ತ್ರಜ್ಞಾನದಿಂದ ಫಲವೇನು? ಎರಡು ಕಣ್ಣು ಇಂಗಿದವನಿಗೆ ಕನ್ನಡಿಯನ್ನು ತೋರಿದರೆ ಎಷ್ಟು ಫಲವೋ, ಇಂತಹ ಹೆಡ್ಡ ಅರಸನಿಗೆ ನೀತಿಯನ್ನು ಬೋಧಿಸಿದರೂ ಅಷ್ಟೇ ಫಲವೆಂಬುದಾಗಿ ತಿಳಿದು, ನಾನೂ ಸುಮ್ಮನಿದ್ದೆನು” ಎಂಬುದಾಗಿ ಉತ್ತರಕೊಟ್ಟನು.

ತರುವಾಯ ಅರಸನು ಕೈಮುಗಿದು ಇಂತೆಂದನು:—“ಆರ್ಯಾ! ದಿಟ. ಇದು ನನ್ನ ಅಪರಾಧವೇ ಸರಿ. ಈಗಲಾದರೂ ಮಿಕ್ಕ ಸೇನೆಯನ್ನು ಉಳಿಸಿಕೊಂಡು ವಿಂಧ್ಯಪರ್ವತಕ್ಕೆ ಹಿಂದಿರುಗಿ ಹೋಗುವ ಉಪಾಯವನ್ನು ಹೇಳು.” ಆ ಮಾತಿಗೆ ಮಂತ್ರಿಯು “ರಾಜನು ದೀನನಾಗಿ ಇಂತು ಕೇಳಿಕೊಳ್ಳುತ್ತಿರುವಾಗ, ನಾನು ಅಸಡ್ಡೆಮಾಡುವುದು ತರವಲ್ಲ. ಇದಕ್ಕೆ ತಕ್ಕ ಪ್ರತೀಕಾರವನ್ನು ಮಾಡಲೇ ಬೇಕು. ಏಕೆಂದರೆ, ದೇವತೆಗಳು, ಗುರುವು, ಆಕಳು, ಅರಸು, ಬ್ರಾಹ್ಮಣ, ಹುಡುಗರು, ಮುದುಕರು, ಬೇನೆಯಿಂದ ನರಳತಕ್ಕವರು, ಇವರ ವಿಷಯದಲ್ಲಿ ಕೋಪವನ್ನು ಅಡಗಿಸಬೇಕು” ಎಂಬುದಾಗಿ ಮನಸ್ಸಿನಲ್ಲಿ ಯೋಚಿಸಿ, ನಗುಮೊಗದಿಂದ ರಾಜನನ್ನು ಕುರಿತು “ಜೀಯಾ! ಹೆದರ ಕೆಲಸವಿಲ್ಲ. ಸಮಾಧಾನದಿಂದಿರಬಹುದು. ಇತ್ತ ಲಾಲಿಸು. ವಿಂಗಡಿಸಿದವರನ್ನು ಮರಳಿ ಸೇರಿಸುವುದರಲ್ಲಿ ಮಂತ್ರಿಯು ಬುದ್ಧಿ ಚಾತುರ್ಯವನ್ನು ಉಪಯೋಗಿಸಲೇ ಬೇಕು. ಇದು ಇತರರಿಗೆ ಸಾಧ್ಯವಲ್ಲ. ರೋಗವು ದ್ವಂದ್ವಕ್ಕೆ ತಿರುಗಿ ಸನ್ನಿಪಾತವು ತಲೆದೋರಿದಾಗ ಸಮರ್ಥನಾದ ವೈದ್ಯನು ಅದನ್ನು ತನ್ನ ಅನುಭವದಿಂದಲೇ ಶಾಂತಿಗೊಳಿಸ

ಬೇಕು. ಇದೀಗ ನನ್ನ ಬುದ್ಧಿಯ ಚಮತ್ಕಾರವನ್ನು ತೋರಿಸುವುದಕ್ಕೆ ತಕ್ಕ ಸಮಯ. ಮಿಕ್ಕ ವೇಳೆಯಲ್ಲಿ ಎಲ್ಲರೂ ಪಂಡಿತರೇ! ಎಲ್ಲವು ಸರಿಯಾಗಿ ನಡೆಯಿತೆಂದರೆ ಎಲ್ಲರೂ ನಿಪುಣರೇ. ತಿಳಿವಳಿಕೆ ಇಲ್ಲದವರು ಸ್ವಲ್ಪಸ್ವಲ್ಪವಾಗಿ ಕಾರ್ಯವನ್ನು ಮಾಡತೊಡಗುವರು. ಅಷ್ಟರಲ್ಲಿಯೇ ಯಾವುದಾದರೂ ಒಂದು ತೊಂದರೆಯು ಒದವಿತೆಂದರೆ ವ್ಯಾಕುಲರಾಗುವರು. ಬುದ್ಧಿಶಾಲಿಗಳು ದೊಡ್ಡ ಕೆಲಸಗಳಿಗೇ ಕೈಹಾಕುವರು. ಸ್ವಲ್ಪವೂ ಕುಂದದೆ ಧೈರ್ಯದಿಂದ ಕಾರ್ಯವನ್ನು ಸಾಧಿಸುವರು. ಆದುದರಿಂದ, ಈಗ ನಿನ್ನ ಪ್ರತಾಪದಿಂದ ಈ ದುರ್ಗವನ್ನು ಕೆಡಹಿ ಬೇಗನೆ ನಿನ್ನನ್ನು ವಿಂಧ್ಯಗಿರಿಗೆ ಕರೆದೊಯ್ಯುವೆನು'' ಎಂದನು. ಈ ಮಾತನ್ನು ಕೇಳಿ ಅರಸನು "ಉಳಿದಿರುವ ಅತ್ಯಲ್ಪವಾದ ಈ ಸೇನೆಯಿಂದ ಈ ಕೆಲಸವು ಸಾಧ್ಯವೇ?'' ಎನಲು ಮಂತ್ರಿಯು "ಸ್ವಾಮಿ! ಜಯವನ್ನು ಬಯಸತಕ್ಕವನು ಆತುರಪಡಬಾರದು. ಸಾವಕಾಶವಾಗಿ ಕೆಲಸಮಾಡುವುದು ಗೆಲುವಿಗೆ ಮುಖ್ಯ ಲಕ್ಷಣವು. ಆ ಕಾರಣದಿಂದ ದುರ್ಗದ್ವಾರವನ್ನು ಈಗಲೇ ಮುತ್ತಿಗೆ ಹಾಕಿಸು. ಎಲ್ಲವೂ ಸುಲಭವಾಗಿ ಕೈಗೂಡುವುದು'' ಎಂಬುದಾಗಿ ಸಮಾಧಾನ ಹೇಳಿದನು.

ಅಷ್ಟರಲ್ಲಿ ಹಿರಣ್ಯಗರ್ಭನ ಗೂಢಚಾರನಾದ ದೀರ್ಘಮುಖನು ಓಡಿ ಬಂದು ಈ ಸಮಾಚಾರವನ್ನು ತಮ್ಮ ಅರಸನಿಗೆ ಹೀಗೆ ತಿಳಿಸಿದನು:-"ದೇವಾ! ಸೇನೆಯು ಅತ್ಯಲ್ಪವಾಗಿದ್ದರೂ, ಚಿತ್ರವರ್ಣನು ಮಂತ್ರಿಯ ಮಾತನ್ನು ಅಕ್ಕರೆಯಿಂದ ಆಲಿಸಿ, ನಮ್ಮ ದುರ್ಗವನ್ನು ಮುತ್ತುವುದಕ್ಕೆ ಬರುತ್ತಿದ್ದಾನೆ.'' ಇದನ್ನು ಕೇಳಿ ಹಂಸರಾಜನು ಮಂತ್ರಿಯಾದ ಚಕ್ರವಾಕನ ಕಡೆಗೆ ತಿರುಗಿ "ಸರ್ವಜ್ಞನೇ! ಮುಂದಣ ಕರ್ತವ್ಯವೇನು?'' ಎಂಬುದಾಗಿ ಪ್ರಶ್ನೆಮಾಡಿದಲ್ಲಿ ಚಕ್ರವಾಕನು "ನಮ್ಮ ಸೈನ್ಯದಲ್ಲಿಯೂ ಬಲಾಬಲಗಳನ್ನು ವಿಮರ್ಶಿಸಿ, ಅವರವರ ಯೋಗ್ಯತಾನುಸಾರ ವಸ್ತ್ರಭೂಷಣಾದಿಗಳಿಂದ ಯೋಧವೀರರನ್ನು ಸನ್ಮಾನಗೊಳಿಸಬೇಕು. ಕೂಡಿಡುವಾಗ ಕೈಗೆ ಸಿಕ್ಕದಿರುವ ಕವಡೆಯನ್ನೂ ಸಾವಿರ ವರಹಗಳಂತೆ ಭಾವಿಸಬೇಕು. ಸಮಯಬಂದಾಗ ಕೋಟಿಗಟ್ಟಲೆ ದ್ರವ್ಯವನ್ನು ಲಕ್ಷ್ಯವಿಲ್ಲದೆ ವೆಚ್ಚಮಾಡಬೇಕು. ಇದೀಗ ಅರಸುತನದ ಗುಟ್ಟು. ಈ ರಹಸ್ಯವನ್ನು ಬಲ್ಲ ರಾಜಶ್ರೇಷ್ಠನನ್ನು ಎಂದಿಗೂ ಸಿರಿಯು

ಬಿಟ್ಟು ತೊಲಗಲಾರಳು. ಇನ್ನು ಯಜ್ಞ, ಮದುವೆ, ಆಪತ್ತು, ಶತ್ರುನಾಶ, ಕೀರ್ತಿಸಂಪಾದನೆ, ಮಿತ್ರರನ್ನು ಸಂಪಾದಿಸುವಿಕೆ, ಅನುಕೂಲೆಯಾದ ಮಡದಿ, ಬಡತನದಲ್ಲಿರುವ ನಂಟರು, ಇವರಿಗಾಗಿ ಎಷ್ಟು ಹಣವನ್ನು ವೆಚ್ಚ ಮಾಡಿದರೂ ದುಂದುಗಾರಿಕೆ ಎನಿಸಲಾರದು. ಮೂರ್ಖನು ಅಲ್ಪ ವ್ಯಯಕ್ಕೆ ಹಿಂಜರಿದು ಸರ್ವಸ್ವವನ್ನು ಕಳೆದುಕೊಳ್ಳುವನು. ಸುಂಕವನ್ನು ಕೊಡಬೇಕಲ್ಲಾ? ಎಂಬ ಸಂಕಟದಿಂದ ಮಾರಾಟದ ವಸ್ತುಗಳನ್ನು ಅಂಗಡಿಯಿಂದ ಹೊರಗೆ ಬಿಸಾಡಲಾಗುವುದೇ?'' ಎಂಬುದಾಗಿ ಹೇಳಿದನು.

ಈ ಮಾತನ್ನು ಕೇಳಿ ಅರಸನು "ಈಗ ಹಣವನ್ನು ವೆಚ್ಚಮಾಡುವುದಾದರೂ ಹೇಗೆ? ಆಪತ್ಕಾಲಕ್ಕೆ ಉಪಯೋಗವಾಗುವ ಸಲುವಾಗಿ ಹಣವನ್ನು ಕೂಡಿಡಬೇಕೆಂಬುದಲ್ಲವೇ ಹಿರಿಯರ ಅಭಿಪ್ರಾಯ?'' ಎನಲು, ಮಂತ್ರಿಯು—"ಶ್ರೀಮಂತರಿಗೆ ಎಂದಿಗೂ ಆಪತ್ತು ಬರುವುದೇ ಇಲ್ಲ'' ಎಂದನು. "ಒಂದು ವೇಳೆ ಸಂಭವಿಸಿದರೆ ಆಗ ಏನುಮಾಡಬೇಕು?'' ಎಂಬುದಾಗಿ ಅರಸನು ಕೇಳಲು, ಮಂತ್ರಿಯು ಮರಳಿ ಇಂತೆಂದನು:—"ಕೂಡಿಹಾಕಿದ ಹಣವು ವೆಚ್ಚವಾಗುವುದು ಇಷ್ಟೇ ತಾನೇ? ಇದಕ್ಕೇಕೆ ಚಿಂತೆ? ಹಣದ ಲೋಭದಿಂದ ವೆಚ್ಚಮಾಡಲಾರದೆ ಹಿಂಜರಿಯುವುದಕ್ಕೆ ಇದು ಸಮಯವಲ್ಲ. ದೇವಾ! ಈಗ ನನ್ನ ಮಾತನ್ನು ತೆಗೆದುಹಾಕದೆ ಲೋಭವನ್ನು ದೂರಮಾಡಿ, ತ್ಯಾಗದಿಂದಲೂ ಗೌರವದಿಂದಲೂ ನಿನ್ನ ಯುದ್ಧವೀರರನ್ನು ರಣರಂಗಕ್ಕೆ ಮುಂದರಿಸುವಂತೆ ಮಾಡು. ಅನ್ಯೋನ್ಯವಾಗಿ ಪ್ರೀತಿವಿಶ್ವಾಸಗಳಿಗೆ ಪಾತ್ರರೆನಿಸಿ, ಸಂತೋಷದಿಂದ ಪ್ರಾಣಗಳನ್ನು ಒಪ್ಪಿಸುವ ಸಲುವಾಗಿ ರಣದೀಕ್ಷೆಯಲ್ಲಿ ಕಂಕಣಕಟ್ಟಿಕೊಂಡಿರುವ, ದೊಡ್ಡ ಮನೆತನಕ್ಕೆ ಸೇರಿದ ವೀರಪುರುಷರನ್ನು ನಾವು ಈ ಸಂದರ್ಭದಲ್ಲಿ ಮನ್ನಿಸಲೇ ಬೇಕು. ನಮ್ಮ ಮನ್ನಣೆಯು ಹಗೆಯ ದಳವನ್ನು ನಿರ್ಮೂಲಗೊಳಿಸುವುದರಲ್ಲಿ ವೀರಪುರುಷರನ್ನು ಹುರಿದುಂಬಿಸಿ ಮುಂದರಿಸುವಂತೆ ಮಾಡುವುದು. ಒಳ್ಳೆಯ ನಡೆವಳಿಯೂ ದೃಢನಿಶ್ಚಯವೂ ಉಳ್ಳ ಶೂರರಾದ ವೀರಭಟರು ಐನೂರು ಮಂದಿಯೇ ಆಗಿದ್ದರೂ, ಹಗೆಯ ದಂಡನ್ನು ಸುಲಭವಾಗಿ ಗೆಲ್ಲಬಲ್ಲರು. ಮತ್ತು, ವಿವೇಕಹೀನನೂ ಕ್ರೂರನೂ ಕೃತಘ್ನನೂ ಸ್ವಕಾರ್ಯಧುರಂಧರನೂ ಎನಿಸಿದ ಸೇವಕನನ್ನು ಬಿಡುವುದೇ ಲೇಸು. ಇಂತಿರುವಲ್ಲಿ ಗುಣಭರಿತರೂ ಕೃತಜ್ಞರೂ

ಸ್ವಾಮಿಯ ಹಿತವನ್ನು ಸಂಪಾದಿಸತಕ್ಕವರೂ, ಉತ್ಸಾಹಶಾಲಿಗಳೂ ಎನಿಸಿದ ವೀರರ ವಿಷಯದಲ್ಲಿ ವೆಚ್ಚಮಾಡಲು ನಾವು ಹಿಂಜರಿಯಬಹುದೇ?''

"ಸತ್ಯ, ಶೌರ್ಯ, ದಯೆ, ಔದಾರ್ಯ, ಇವು ಅರಸನ ಮುಖ್ಯ ಗುಣಗಳು. ಔದಾರ್ಯವಿಲ್ಲದ ಅರಸನನ್ನು ಲೋಕವೆಲ್ಲ ನಿಂದಿಸುವುದು. ಇಂತಹ ಸಂದರ್ಭಗಳಲ್ಲಿ ಸಮಯಕ್ಕೆ ತಕ್ಕಂತೆ ಉಪಾಯಗಳನ್ನು ಸೂಚಿಸುವ ಮಂತ್ರಿಗಳನ್ನು ಮುಖ್ಯವಾಗಿ ಮನ್ನಿಸಬೇಕು."

"ಅರಸನ ಮೇಲ್ಮೆಯೇ ತನ್ನ ಮೇಲ್ಮೆ ಎಂತಲೂ, ದೊರೆಗೆ ಬಂದ ಕೇಡೇ ತನ್ನ ಕೇಡೆಂತಲೂ ಬಗೆದು, ರಾಜನಿಗೂ ತನಗೂ ಒಂದು ವಿಧವಾದ ಕಟ್ಟುಪಾಡಿರುವುದೆಂಬ ಭಾವನೆಯಿಂದ ನಂಬಿಕೆಯಾಗಿ ಕೆಲಸಮಾಡತಕ್ಕ ಮಂತ್ರಿಯನ್ನು ಭೂಪಾಲಕನು ತನ್ನ ಹಣಕ್ಕೂ ಪ್ರಾಣಗಳಿಗೂ ರಕ್ಷಕನನ್ನಾಗಿ ನಿಯಮಿಸಬೇಕು. ಮೋಸಗಾರನೂ, ಹೆಂಗಸೂ, ಹುಡುಗನೂ ಮಂತ್ರಿಪದವಿಗೆ ತಕ್ಕವರಲ್ಲ. ಇಂತಹವರನ್ನು ಮಂತ್ರಿತ್ವದಲ್ಲಿ ನಿಲ್ಲಿಸಿದ ಅರಸನು ನಡುಗಡಲಿನಲ್ಲಿ ಬಿರುಗಾಳಿಗೆ ಸಿಲುಕಿದ ನಾವೆಯಂತೆ ದುರ್ನೀತಿಗೆ ಒಳಪಟ್ಟು ಕಾರ್ಯಗಳಲ್ಲಿ ಭಂಗಪಡುವನು. ಸಂತೋಷದಲ್ಲಿಯೂ ಕೋಪದಲ್ಲಿಯೂ ಸಮಭಾವನೆಯನ್ನಿರಿಸಿ, ಶಾಸ್ತ್ರವನ್ನು ನಂಬಿ, ಯಾವಾಗಲೂ ತನ್ನ ಸೇವಕರನ್ನು ಒಪ್ಪಿಸಿಕೊಡದಿರುವ ಸುಗುಣಸಂಪತ್ತಿಯುಳ್ಳ ಅರಸನಿಗೆ ಭೂದೇವಿಯು ಹೇರಳವಾಗಿ ಹಣವನ್ನು ಸುರಿಸುವಳು. ತನ್ನನ್ನೇ ನಂಬಿಕೊಂಡು ತನ್ನ ಕೋಪಪ್ರಸಾದಗಳಿಂದಲೇ ಕೀಳು ಮೇಲ್ಮೆಗಳನ್ನು ಪಡೆಯತಕ್ಕ ಜನರನ್ನು ಅರಸನು ತನ್ನ ಮಂತ್ರಿಗಳೆಂಬ ಭಾವನೆಯಿಂದ ಯಾವಾಗಲೂ ತಿರಸ್ಕರಿಸಬಾರದು. ಕೀಳುಜಾತಿಯ ಆನೆಯು ಜಾರಿಬಿದ್ದಾಗ ಅದು ತನ್ನ ಸೊಂಡಲಿನ ಒತ್ತಾಸೆಯಿಂದಲೇ ಮರಳಿ ಎದ್ದು ನಿಲ್ಲಬೇಕು. ಅಂತೆಯೇ ಹೆಮ್ಮೆಯಿಂದ ಮೆರೆವ ಅರಸನು ತನ್ನ ದುರ್ನೀತಿಯಿಂದ ನೆಲಕ್ಕೆ ಬೀಳಬಹುದಾದ ಸಂದರ್ಭದಲ್ಲಿ ಮಿತ್ರನಾದ ಮಂತ್ರಿಯ ಸಹಾಯದಿಂದಲೇ ಮರಳಿ ಸ್ಥಿರಪಡಬೇಕು.''

ಇಷ್ಟರಲ್ಲಿ ಮೇಘವರ್ಣನು ಬಂದು ಸಾಷ್ಟಾಂಗವೆರಗಿ ಇಂತೆಂದನು:- "ಸ್ವಾಮಿಾ! ಇತ್ತ ಚಿತ್ತಯಿಸಬೇಡುವೆನು. ಹಗೆಯು ಸಲಕರಣೆಗಳೊಂದಿಗೆ ಯುದ್ಧಕ್ಕೆ ಸಿದ್ಧನಾಗಿ ಬಂದು ಕೋಟೆಯ ಹೆಬ್ಬಾಗಿಲ ಬಳಿ ನಿಂತಿರುವನು. ಸ್ವಾಮಿಯು ಅನುಜ್ಞೆಯನ್ನು ದಯೆಪಾಲಿಸಿದಲ್ಲಿ ರಣರಂಗವನ್ನು ಹೊಕ್ಕು

ನನ್ನ ಪರಾಕ್ರಮವನ್ನು ತೋರುವೆನು. ಈ ಮೂಲಕ ಪ್ರಭುಗಳ ಋಣ ವನ್ನು ತೀರಿಸಬೇಕೆಂದಿರುವೆನು".

ಈ ಮಾತನ್ನು ಕೇಳಿ ಮಂತ್ರಿಯಾದ ಚಕ್ರವಾಕನು "ನಿನ್ನ ಯೋಚ ನೆಯು ಯುಕ್ತವಾದುದಲ್ಲ. ಕೋಟೆಯಿಂದ ಹೊರಗೆ ಬಂದು ಯುದ್ಧ ಮಾಡುವುದು ನೀತಿಸಮ್ಮತವಾದರೆ ಇನ್ನು ಕೋಟೆಯನ್ನು ಕಟ್ಟುವುದಾದರೂ ಏತಕ್ಕೆ? ಕೋಟೆಯನ್ನು ಆಶ್ರಯಿಸಿರುವುದರ ಫಲವಾದರೂ ಏನು? ಇನ್ನು ಮೊಸಳೆಯು ಭಯಂಕರವಾದ ಪ್ರಾಣಿಯೆಂಬುದು ದಿಟ. ಆದರೆ ನೀರಿನಿಂದ ಹೊರಬಿದ್ದ ಕೂಡಲೇ ಸಾಮಾನ್ಯವಾದ ಒಂದು ನಾಯಿ ಅದನ್ನು ಕೊನೆ ಗಾಣಿಸುವುದು. ಆಗ ಅದರ ಬಲವೇನಾಯಿತೆನ್ನಬೇಕು? ಕಾಡಿನಿಂದ ಹೊರ ಬಿದ್ದ ಸಿಂಹವು ನರಿಯಂತೆಯೇ ದುರ್ಬಲವಾಗುವುದು" ಎಂಬುದಾಗಿ ಹೇಳಿ ದನು. ಅದಕ್ಕೆ ಕಾಗೆಯು "ಅರಸನು ಪ್ರತ್ಯಕ್ಷವಾಗಿ ನಡೆತಂದು ಯುದ್ಧ ಸಾಹಸವನ್ನು ಕಣ್ಣಾರೆ ಪರೀಕ್ಷಿಸಬಹುದು. ಏಕೆಂದರೆ, ರಾಜನು ಸೇನೆ ಯನ್ನು ಮನ್ನಿಸಿ, ತಾನೇ ಕಣ್ಣಾರೆ ನೋಡುತ್ತ ಯುದ್ಧವನ್ನು ಮಾಡಿಸಬೇಕು. ಆಳ್ದನ ಆಸರೆ ಇದ್ದರೆ ಶುನಕವೂ ಸಿಂಹದ ಹಾಗೆಯೇ ಪರಾಕ್ರಮವನ್ನು ತೋರಬಲ್ಲುದು" ಎಂದು ಉತ್ತರ ಕೊಟ್ಟಿತು.

ಬಳಿಕ ಅವರೆಲ್ಲರೂ ಕೋಟೆಯ ಹೆಬ್ಬಾಗಿಲ ಬಳಿ ನಿಂತು ಘೋರವಾಗಿ ಯುದ್ಧಮಾಡ ತೊಡಗಿದರು. ಇಂತು ಯುದ್ಧವು ನಿಮಿಷ ನಿಮಿಷಕ್ಕೂ ಭಯಂಕರವಾಗುತ್ತಿರಲು ಚಿತ್ರವರ್ಣನು ತನ್ನ ಮಂತ್ರಿಯಾದ ದೂರದರ್ಶಿ ಯೆಂಬ ಗೃಧ್ರನನ್ನು ಕುರಿತು "ಆರ್ಯಾ! ನಿನ್ನ ಪ್ರತಿಜ್ಞೆಯನ್ನು ನೆರವೇರಿಸಲು ಇದೇ ತಕ್ಕ ಸಮಯ" ಎಂಬುದಾಗಿ ಸೂಚಿಸಿದನು. ಆಗ ಗೃಧ್ರನು "ಸ್ವಾಮಿಯು ಚಿತ್ತಯಿಸಬೇಕು. ಕಾಲವನ್ನು ನಿರೀಕ್ಷಿಸದೆ, ಅತ್ಯಲ್ಪವೆನಿಸಿ, ಮೂರ್ಖನೂ ವ್ಯಸನಾಕ್ರಾಂತನೂ ಎನಿಸಿದ ಅರಸನನ್ನು ಪಡೆದು, ದಿಕ್ಕಿಲ್ಲದೆ ಎದೆಗುಂದಿದ ಭಟರಿಂದ ತುಂಬಿದ ದುರ್ಗವನ್ನು ಆಶ್ರಯಿಸಿರುವುದಕ್ಕಿಂತ ದುರ್ಗವು ಇಲ್ಲವಾದರೆ ತುಂಬ ಲೇಸು. ಇವೆಲ್ಲವೂ ದುರ್ಗವ್ಯಸನಗಳು. ಹಗೆಯ ಸೈನ್ಯದಲ್ಲಿ ತಂತ್ರದಿಂದ ಭೇದಬುದ್ಧಿಯನ್ನುಂಟುಮಾಡಿ, ಎಷ್ಟು ಕಾಲ ವಾದರೂ ಮುತ್ತಿಗೆಯನ್ನು ತೆಗೆಯದೆ, ಮೈಮರೆತಿರುವಾಗ ಮೇಲೆ ಬಿದ್ದು ಹೋರಾಡಿ, ತೀವ್ರವಾದ ಸಾಹಸವನ್ನು ಹೊರಪಡಿಸಿದರೆ ಕೋಟೆಯನ್ನು

ಸುಲಭವಾಗಿ ಲಗ್ಗೆ ಮಾಡಬಹುದು. ಈ ನಾಲ್ಕೂ ದುರ್ಗಸಾಧನೆಗೆ ಮುಖ್ಯವಾದ ಉಪಾಯಗಳು. ಒಳ್ಳೆಯದು! ಈಗ ನಾವೂ ಶಕ್ತಿವಂಚನೆ ಯಿಲ್ಲದೆ ಸಾಹಸ ಮಾಡುವೆವು'' ಎನ್ನುತ್ತ ಕಿವಿಯಲ್ಲಿ ಏನನ್ನೋ ಪಿಸುಗುಟ್ಟಿದನು.

ಮರುದಿನ ಹೊತ್ತು ಮೂಡುವುದಕ್ಕೆ ಮುಂಚಿತವಾಗಿ ಕೋಟೆಯ ನಾಲ್ದೆಸೆಯ ಬಾಗಿಲುಗಳಲ್ಲಿಯೂ ಕೋಲಾಹಲ ಧ್ವನಿಯಿಂದ ಹೋರಾಟಕ್ಕೆ ಮೊದಲಾಯಿತು. ಇದೇ ಸಮಯದಲ್ಲಿ ಕಾಗೆಯು ಕೋಟೆಯೊಳಗಡೆ ಮನೆ ಮನೆಗೂ ಬೆಂಕಿ ಹೊತ್ತಿಸಿತು. ಕೂಡಲೇ "ಕೋಟೆಯನ್ನು ಹಿಡಿದೆವು. ಕೋಟೆಯನ್ನು ಹಿಡಿದೆವು'' ಎಂಬ ಕೋಲಾಹಲವು ಎಲ್ಲೆಲ್ಲಿಯೂ ಹರಡಿತು. ಮನೆ ಮನೆಗಳಲ್ಲಿಯೂ ಬೆಂಕಿಯು ಧಗಧಗನೆ ಉರಿಯುತ್ತಿರುವುದನ್ನು ಕಂಡು ರಾಜಹಂಸ ಪರಿವಾರವೂ, ಕೋಟೆಯೊಳಗಡೆ ಇದ್ದವರೂ ಥಟ್ಟನೆ ನೀರಿನಲ್ಲಿ ದುಮುಕಿದರು. ಇದೂ ಯುಕ್ತವೇ ಸರಿ. ಏಕೆಂದರೆ, ಒಳ್ಳೆಯ ಆಲೋಚನೆ, ಪರಾಕ್ರಮ, ಹೋರಾಟ, ಓಟ, ಇವುಗಳನ್ನು ಸಮಯ ಬಂದಾಗ ಕೈಕೊಳ್ಳದಿರಬಾರದು. ಇಂತಹ ವಿಷಯಗಳಲ್ಲಿ ಹಿಂದುಮುಂದು ನೋಡುತ್ತ ಕಾಲಹರಣ ಮಾಡುವುದು ತರವಲ್ಲ.''

ಹುಟ್ಟಿದ ಮೊದಲು ಕಷ್ಟವನ್ನೇ ಅರಿಯದೆ ಸುಖದಿಂದ ಬೆಳೆದ ಕಾರಣ, ಬೇಗನೆ ನಡೆಯಲಾರದ ರಾಜಹಂಸನು ಮೆಲ್ಲಗೆ ಸಾರಸನೊಡ ಗೂಡಿ ನಡೆದುಬರುತ್ತಿರುವಲ್ಲಿ, ಚಿತ್ರವರ್ಣನ ಸೇನಾಪತಿಯಾದ ಕುಕ್ಕುಟನು ಹಿರಣ್ಯಗರ್ಭನನ್ನೂ ಸಾರಸನನ್ನೂ ಇದಿರಿಸಿ ನಿಂತನು. ಆಗ ಹಂಸರಾಜ ನಾದ ಹಿರಣ್ಯಗರ್ಭನು ತನ್ನ ಸೇನಾಪತಿಯಾದ ಸಾರಸನನ್ನು ನೋಡಿ "ಮಿತ್ರ! ಸಾರಸನೆ! ನನಗಾಗಿ ನಿನ್ನ ಪ್ರಾಣಗಳನ್ನು ಒಪ್ಪಿಸಬೇಡ. ಈಗ ಲಾದರೂ ನೀನು ತಪ್ಪಿಸಿಕೊಂಡು ಹೋಗಬಲ್ಲೆ. ಬೇಗನೆ ನೀರನ್ನು ಹೊಕ್ಕು ನೀನಾದರೂ ಪ್ರಾಣಗಳನ್ನು ಕಾಪಾಡಿಕೊ. ಸರ್ವಜ್ಞನ ಅನುಮತಿಯಂತೆ ನನ್ನ ಕುವರನಾದ ಚೂಡಾಮಣಿಯನ್ನು ಅರಸುತನದಲ್ಲಿ ಪಟ್ಟಗಟ್ಟಿ, ರಾಜ್ಯವಾಳಿಕೊಂಡಿರು'' ಎಂಬುದಾಗಿ ಹೇಳಲು, ಸಾರಸನು "ದೇವಾ! ನಿನ್ನ ಮಾತುಗಳನ್ನು ನಾನು ಈ ಕಿವಿಗಳಿಂದ ಕೇಳಲಾರೆನು. ಸಾಕು! ನನ್ನ ಕಿವಿಗಳು ಬಿರಿಯುತ್ತಿವೆ. ಇಂತು ಸಹಿಸಲಾಗದ ವಾಗ್ವಜ್ರಗಳಿಂದ

ಇರಿಯಬೇಡ. ಚಂದ್ರಸೂರ್ಯರಿರುವ ವರೆಗೆ ಮಹಾಸ್ವಾಮಿಯವರು ಜಯಶೀಲರಾಗಿಯೇ ಇರತಕ್ಕುದು. ನಾನಲ್ಲವೇ ದುರ್ಗರಕ್ಷಕನು? ನನ್ನ ರಕ್ತಮಾಂಸಗಳಿಂದ ಸಾರಿಸಿದ ಹಾದಿಯಿಂದಲೇ ಹಗೆಯು ನಮ್ಮ ಕೋಟೆಯನ್ನು ಪ್ರವೇಶ ಮಾಡಲಿ! ತಮ್ಮಂತಹ ತ್ಯಾಗಶೀಲನೂ, ಗುಣಗ್ರಾಹಿಯೂ, ಮಾನಮರ್ಯಾದೆಗಳನ್ನು ಅರಿತವನೂ ಎನಿಸಿದ ಅರಸನನ್ನು ಪಡೆಯಬೇಕಾದರೆ, ಎಷ್ಟೋ ಪುಣ್ಯಮಾಡಿರಬೇಕು" ಎಂಬುದಾಗಿ ಬಿನ್ನಯಿಸಿದನು. ಆ ಮಾತಿಗೆ ಅರಸನಾದ ಹಿರಣ್ಯಗರ್ಭನು "ಪರಿಶುದ್ಧನೂ, ಶೂರನೂ, ಸ್ವಾಮಿಭಕ್ತನೂ ಎನಿಸಿದ ನಿನ್ನಂತಹ ಸೇವಕರು ಸುಲಭವಾಗಿ ಸಿಗುವರೇ?" ಎನಲು ಸೇನಾಪತಿಯಾದ ಸಾರಸನು ಇಂತೆಂದನು:—

"ಯುದ್ಧದಲ್ಲಿಯೇ ಸಾವು. ಮತ್ತೆಲ್ಲಿಯೂ ಇಲ್ಲವೆನ್ನುವುದಾದರೆ ಈಗ ಈ ಹಾಳು ಪ್ರಾಣಗಳನ್ನು ಉಳಿಸಿಕೊಂಡರೂ ಸಾರ್ಥಕ. ಹೇಗೂ ಮರಣವು ನಿಶ್ಚಯವಾಗಿರುವಾಗ, ಸ್ವಾಮಿಯನ್ನು ಹಗೆಗಳ ಕೈಗೆ ಒಪ್ಪಿಸಿ, ಓಡಿಹೋಗುವುದರ ಮೂಲಕ ಕೀರ್ತಿಯನ್ನು ಮಲಿನಗೊಳಿಸಬೇಕೇ? ಗಾಳಿಯಿಂದ ಅಲುಗುತ್ತಿರುವ ಅಲೆಯಂತೆ ನಿಮಿಷಮಾತ್ರದಲ್ಲಿ ಹಾಳಾಗುವ ಈ ಜನ್ಮದಲ್ಲಿ ಹೆರರ ಜೀವವನ್ನು ಉಳಿಸುವ ಯೋಗವು ಯಾವಾಗಲೂ ಸಂಭವಿಸುವುದಿಲ್ಲ. ಅಂತಹ ಅದೃಷ್ಟವು ಪುಣ್ಯವಿಶೇಷದಿಂದ ದೊರೆತರೆ ನನ್ನ ಪ್ರಾಣಗಳನ್ನು ಒಪ್ಪಿಸುವುದು ಶ್ಲಾಘ್ಯವಲ್ಲವೇ? ಆ ಕಾರಣದಿಂದ ಪ್ರಭುವಾದ ನಿನ್ನನ್ನು ಕಾಪಾಡುವುದು ನನ್ನ ಕರ್ತವ್ಯ! ಪ್ರಜೆಗಳು ಎಷ್ಟೇ ಸಂಪನ್ನರೆನಿಸಿದ್ದರೂ ಆಳುವ ಅರಸನೊಬ್ಬನಿಲ್ಲದಿದ್ದರೆ ಬದುಕಲಾರರು. ಧನ್ವಂತರಿಯೇ ವೈದ್ಯನಾಗಿ ಬಂದರೂ ಸತ್ತವನನ್ನು ಬದುಕಿಸಲಾರನಷ್ಟೆ!"

"ಅರಸನು ಕಣ್ಣುಮುಚ್ಚಿದರೆ ಲೋಕವೆಲ್ಲವೂ ಕಣ್ಣುಮುಚ್ಚಿದಂತೆಯೇ, ಸರಿ. ಸೂರ್ಯನು ಮೂಡಿದ ಕೂಡಲೇ ತಾವರೆಯು ಬಿರಿವಂತೆ, ರಾಜನು ಕಣ್ದೆರೆದನೆಂದರೆ ಜಗತ್ತೆಲ್ಲ ಕಣ್ಣು ತೆರೆಯುವುದು. ರಾಜ, ಮಂತ್ರಿ, ರಾಷ್ಟ್ರ ಕೋಟೆ, ಬೊಕ್ಕಸ, ಸೇನೆ, ಮಿತ್ರರು, ಪ್ರಜೆಗಳು, ಕೈಗಾರಿಕೆಯ ಕಸಬಿನವರು—ಇವರೆಲ್ಲರೂ ರಾಜ್ಯಕ್ಕೆ ಅಂಗಗಳು. ಅದರಲ್ಲಿ ಅರಸನು ಮೊದಲನೆಯವನು. ಇಂತು ಪ್ರಧಾನವಾದ ಅಂಗವೆನಿಸಿದ ರಾಜನನ್ನು ಹಗೆಗಳಿಗೆ ಒಪ್ಪಿಸಿ, ನಾನು ತಲೆತಪ್ಪಿಸಿಕೊಂಡು ಓಡಿಹೋಗಬೇಕೇ?"

ಇಷ್ಟರಲ್ಲಿ ಕುಕ್ಕುಟನು ಹತ್ತಿರ ಬಂದು ರಾಜಹಂಸನ ಮೈಮೇಲೆ ಬಿದ್ದು ಮೊನೆಯುಗುರುಗಳಿಂದ ಪರಚಿ ಗಾಯಪಡಿಸಿದನು. ಸಾರಸನು ನಡುವೆ ಅಡ್ಡಬಂದು ಹಿರಣ್ಯಗರ್ಭನನ್ನು ನೀರಿನೊಳಕ್ಕೆ ತಳ್ಳಿದನು. ಬಳಿಕ ಸಾರಸನು ಕುಕ್ಕುಟನ ಸಿಟ್ಟಿಗೆ ಗುರಿಯಾದನು. ಸಾರಸನ ಒಡಲೆಲ್ಲ ಗಾಯಗಳಿಂದ ಬಿರಿಯಿತು. ಅವನ ರೂಪು ಮಾರ್ಪುಗೊಂಡಿತು. ಅಲ್ಲಿಗೂ ಸಾರಸನು ಎದೆಗುಂದದೆ, ಬಲವಾಗಿ ತನ್ನ ಮೂತಿಯಿಂದ ತಿವಿಯಲು ಕುಕ್ಕುಟನು ಅಲ್ಲಿಯೇ ಮಡಿದನು. ಬಳಿಕ ಹಕ್ಕಿಗಳೆಲ್ಲವೂ ಗುಂಪುಕೂಡಿ ದೊಂಬಿಯ ಹೋರಾಟದಲ್ಲಿ ಸಾರಸನನ್ನು ತಿವಿದುಕೊಂದುವು. ಚಿತ್ರವರ್ಣನು ಕೋಟೆಯನ್ನು ನುಗ್ಗಿ, ಅಲ್ಲಿದ್ದ ಸರ್ವಸ್ವವನ್ನು ಸೂರೆಗೊಂಡು ನೂರಾರು ಜಯಶಬ್ದಗಳೊಡನೆ ಕೋಲಾಹಲದಿಂದ ದುರ್ಗವನ್ನು ಲೂಟಿ ಮಾಡಿ, ಆನಂದದಿಂದ ಹೊರಬಂದು ತನ್ನ ಪಾಳೆಯವನ್ನು ಸೇರಿದನು'' ಎಂಬುದಾಗಿ ವಿಷ್ಣುಶರ್ಮನು ಕಥೆಯನ್ನು ಮುಗಿಸಿದನು.

ಈ ಕಥೆಯನ್ನು ಕೇಳಿ ರಾಜಪುತ್ರರು "ಹಿರಣ್ಯಗರ್ಭನ ಸೇನೆಯಲ್ಲಿ ಆ ಸಾರಸನೊಬ್ಬನೇ ಭಾಗ್ಯಶಾಲಿಯು. ಅವನು ತನ್ನ ದೇಹವನ್ನು ಒಪ್ಪಿಸಿ, ಅರಸನನ್ನು ಕಾಪಾಡಿದನಲ್ಲವೇ? ಲೋಕದಲ್ಲಿ ಗೂಳಿಯಂತಿರುವ ಎಷ್ಟೋ ಎತ್ತುಗಳನ್ನು ಎಲ್ಲ ಆಕಳುಗಳೂ ಈನುತ್ತವೆ. ಆದರೆ ತನ್ನ ಕೊಂಬಿನ ತುದಿಯಿಂದ ಷಣ್ಮುಖನನ್ನು ಕೆರೆಯುವ ಭಾಗ್ಯವುಳ್ಳ ಗೂಳಿ (ಶಿವನ ವಾಹನವಾದ ನಂದಿ)ಯನ್ನು ಮಾತ್ರ ಯಾವುದೋ ಒಂದು ಆಕಳು ಕರು ಹಾಕಿತು'' ಎಂದರು. ಈ ಮಾತಿಗೆ ವಿಷ್ಣುಶರ್ಮನು ಇಂತೆಂದನು:—

"ಮಹಾಸತ್ವಸಂಪನ್ನನೆನಿಸಿದ ಸಾರಸನು ತನ್ನ ದೇಹವನ್ನು ಒಪ್ಪಿಸುವುದರ ಮೂಲಕ ಬೆಲೆಗೆ ತೆಗೆದುಕೊಂಡ ದಿವ್ಯಲೋಕಗಳನ್ನು ಪಡೆದು, ವಿದ್ಯಾಧರಿಯರ ಪರಿವಾರದಿಂದ ಸೇವೆಯನ್ನು ಕೈಕೊಳ್ಳುತ್ತ, ಶಾಶ್ವತ ಭೋಗಗಳನ್ನು ಅನುಭವಿಸಲಿ!''

"ಆಳುವ ಅರಸನಲ್ಲಿ ಭಕ್ತಿಯನ್ನಿರಿಸಿ, ಕೃತಜ್ಞತೆಯಿಂದ ಹೋರಾಡಿ, ರಣರಂಗದಲ್ಲಿ ಪ್ರಭುವಿಗಾಗಿ ತಮ್ಮ ಪ್ರಾಣಗಳನ್ನು ಧಾರೆಯೆರೆಯುವ ಶೂರರು ಸ್ವರ್ಗಕ್ಕೆ ಅತಿಥಿಗಳಾಗುವರೆಂಬುದಾಗಿ ಶಾಸ್ತ್ರಗಳು ಸಾರುತ್ತಿವೆ. ಸುತ್ತಲೂ ಹಗೆಗಳು ಮುತ್ತಿ, ಬಗೆಬಗೆಯಿಂದ ಪೀಡಿಸುತ್ತಿದ್ದರೂ ಸ್ವಲ್ಪವೂ ಎದೆ

ಗುಂದದೆ ಧೈರ್ಯವಾಗಿ ಹೋರಾಡಿ ಶರತಲ್ಪದಲ್ಲಿ ಪವಡಿಸುವ ಶೂರರು ನಾಶವಿಲ್ಲದ ಉತ್ತಮಲೋಕಗಳನ್ನು ಪಡೆದು, ಶಾಶ್ವತವಾಗಿ ದಿವ್ಯಭೋಗಗಳನ್ನು ಅನುಭವಿಸುವರು. ಇಂತು ನೀವು **ವಿಗ್ರಹ**ವನ್ನು ಕೇಳಿದಿರಲ್ಲವೇ?''

ಈ ಮಾತಿಗೆ ರಾಜಪುತ್ರರು "ತಮ್ಮ ಅನುಗ್ರಹದಿಂದ ನಾವು ಸುಖವನ್ನು ಅನುಭವಿಸಿದೆವು'' ಎಂದರು. ಆಗ ವಿಷ್ಣುಶರ್ಮನು "ಒಳ್ಳೆಯದು. ರಾಜಪುತ್ರರಾದ ನಿಮಗೆ ಆನೆಗಳೊಂದಿಗೂ ಕುದುರೆಗಳೊಂದಿಗೂ ಹೋರಾಡಬೇಕಾದ ಸಂದರ್ಭವು ಎಂದಿಗೂ ಸಂಭವಿಸಲೇ ಬೇಡ. ಹಗೆಗಳು ನಿಮ್ಮ ನೀತಿಯುಕ್ತವಾದ ಮಂತ್ರವೆಂಬ ಬಿರುಗಾಳಿಗೆ ಇದಿರು ನಿಲ್ಲಲಾರದೆ, ತಲೆತಪ್ಪಿಸಿಕೊಂಡು ಹೋಗಿ ಬೆಟ್ಟದ ಗವಿಗಳಲ್ಲಿ ಅಡಗಿಕೊಳ್ಳಲಿ'' ಎಂದನು.

**ಇಂತು ಹಿತೋಪದೇಶ ಕರ್ಣಾಟಕ ಗದ್ಯಾನುವಾದದಲ್ಲಿ ವಿಗ್ರಹಂ ಸಂಪೂರ್ಣಂ.**

**ಮೂರನೆಯ ಕಥೆಯು ಮುಗಿದುದು.**

---

## ಸಂಧಿ.

ಮರುದಿನ ಕಥಾರಂಭ ಸಮಯದಲ್ಲಿ ಅರಸುಮಕ್ಕಳು ವಿಷ್ಣುಶರ್ಮನನ್ನು ಕುರಿತು "ಆರ್ಯಾ! ನಾವು ವಿಗ್ರಹವನ್ನು ಕೇಳಿ ತಿಳಿದೆವು. ಈಗ ಸಂಧಿಯನ್ನು ತಿಳುಹಬೇಕು'' ಎಂಬುದಾಗಿ ಬೇಡಿದರು. ಆಗ ವಿಷ್ಣುಶರ್ಮನು "ಕೇಳಿರಿ! ಸಂಧಿಯನ್ನೂ ತಿಳಿಯೆ ಹೇಳುವೆನು. ಇಂತು ನಡೆದ ಆ ದೊಡ್ಡ ಹೋರಾಟದಲ್ಲಿ ಇಬ್ಬರು ಅರಸರ ಸೇನೆಯೂ ಹಾಳಾಯಿತು. ಆಗ ಗೃಧ್ರ ಚಕ್ರವಾಕರೆಂಬ ಆ ಉಭಯಪಕ್ಷದ ಮಂತ್ರಿಗಳೂ ಸೇರಿ ಕ್ಷಣಕಾಲದಲ್ಲಿ ಮಾತಿನಿಂದಲೇ ಈರ್ವರು ದೊರೆಗಳಿಗೂ ಸಂಧಿಮಾಡಿಸಿದರು'' ಎಂದನು.

"ಅದು ಹೇಗೆ?'' ಎಂಬುದಾಗಿ ರಾಜಪುತ್ರರು ಪ್ರಶ್ನೆಮಾಡಲಾಗಿ ವಿಷ್ಣುಶರ್ಮನು ಕಥೆಯನ್ನು ಹೇಳತೊಡಗಿದನು.

ಇದಾದ ಬಳಿಕ ಹಿರಣ್ಯಗರ್ಭನು "ನಮ್ಮ ದುರ್ಗದಲ್ಲಿ ಬೆಂಕಿಯನ್ನು ಹೊತ್ತಿಸಿದವನಾರು? ಹಗೆಯ ಕಡೆಯವನೇ? ಇಲ್ಲವಾದರೆ ನಮ್ಮ ದುರ್ಗದಲ್ಲಿಯೇ ವಾಸಮಾಡುತ್ತಿದ್ದವರಲ್ಲಿ ಯಾರಾದರೂ ಶತ್ರುವಿನ ಪ್ರೇರಣೆ

ಯಿಂದ ಬೇಕಿ ಹಚ್ಚಿದನೋ?" ಎಂಬುದಾಗಿ ಪ್ರಶ್ನೆಮಾಡಿದನು. ಆಗ ಮಂತ್ರಿಯಾದ ಚಕ್ರವಾಕನಿಂತೆಂದನು:—"ದೇವಾ! ಮಹಾಸ್ವಾಮಿಯವರಿಗೆ ನಿಷ್ಕಾರಣ ಬಂಧುವೆನಿಸಿದ್ದ ಮೇಘವರ್ಣನೂ ಅವನ ಪರಿವಾರದವರೂ ಯಾರೂ ಕಾಣುವುದಿಲ್ಲ. ಆ ಕಾರಣದಿಂದ ಈ ಕೆಲಸವು ಅವನದಾಗಿರಬೇಕು."

ಈ ಮಾತನ್ನು ಕೇಳಿ ರಾಜಹಂಸನು ಸ್ವಲ್ಪ ಹೊತ್ತು ಯೋಚಿಸಿ "ಹಾಗೆಯೇ ಇರಬಹುದು. ಇದು ನನ್ನ ದುರದೃಷ್ಟ! ಅಂತೆಯೇ ಸರಿ. ಇದು ದೈವದ ಪರೀಕ್ಷೆಯೇ ಹೊರತು ಮಂತ್ರಿಗಳ ಅಪರಾಧವಲ್ಲ. ಹಾಗಲ್ಲದಿದ್ದರೆ, ಪ್ರಯತ್ನಪೂರ್ವಕವಾಗಿ ಕೈಗೂಡಿದ್ದ ಕಾರ್ಯವು ಕೆಡುವುದಾದರೂ ಉಂಟೇ?" ಎಂದನು. ಆಗ ಮಂತ್ರಿಯು "ಮನುಷ್ಯನು ತನಗೆ ಕೇಡು ಸಂಭವಿಸಿದಾಗ ದೈವವನ್ನು ದೂಷಿಸುವನು. ತಾನು ಮಾಡಿದ ಪ್ರಯತ್ನಗಳಲ್ಲಿ ದೋಷವೇನೆಂಬುದನ್ನು ಯೋಚಿಸುವುದೇ ಇಲ್ಲ. ಮತ್ತು ತನ್ನ ಹಿತವನ್ನು ಬಯಸುವ ಮಿತ್ರರ ಮಾತನ್ನು ಲಕ್ಷಿಸದ ದುರ್ಬುದ್ಧಿಯು, ಕೋಲಿನಿಂದ ಜಾರಿಬಿದ್ದ ಆಮೆಯಂತೆ ಹಾಳಾಗುವನು. ಮಾತಿನ ಮೇಲೆ ಯಾವಾಗಲೂ ಲಕ್ಷ್ಯವಿರಬೇಕು. ಪ್ರಾಣಿಯು ಕೆಡುವುದು ಮಾತಿನಿಂದಲೇ ಅಲ್ಲವೇ? ಹಂಸೆಗಳು ಒಯ್ಯುತ್ತಿದ್ದ ಆಮೆಯು ನೆಲಕ್ಕೆ ಬಿದ್ದುದೇ ಈ ವಿಷಯದಲ್ಲಿ ಉದಾಹರಣೆ" ಎಂಬುದಾಗಿ ಹೇಳಲು, ಅದರ ಪರಿಯನ್ನು ವಿವರಿಸುವಂತೆ ಹಿರಣ್ಯಗರ್ಭನು ಪ್ರಶ್ನೆಮಾಡಲಾಗಿ, ಚಕ್ರವಾಕನು ಆ ಕಥೆಯನ್ನು ಹೇಳತೊಡಗಿದನು.

## ೧ನೆಯ ಕಥೆ

ಮಗಧದೇಶದಲ್ಲಿ ಫುಲ್ಲೋತ್ಪಲವೆಂಬ ಸರೋವರವಿರುವುದು. ಅಲ್ಲಿ ಬಹುಕಾಲದಿಂದ ಸಂಕಟ ವಿಕಟಗಳೆಂಬ ಎರಡು ಹಂಸೆಗಳು ವಾಸಮಾಡುತ್ತಿದ್ದುವು. ಅವುಗಳಿಗೆ ಗೆಳೆಯನಾಗಿದ್ದ ಕಂಬುಗ್ರೀವವೆಂಬ ಕೂರ್ಮವೂ ಅಲ್ಲಿಯೇ ಇದ್ದಿತು. ಹೀಗಿರುವಲ್ಲಿ ಒಂದು ದಿನ ಬೆಸ್ತರು ಅಲ್ಲಿಗೆ ಬಂದು, "ನಾವು ಈ ದಿನ ಇಲ್ಲಿಯೇ ಇದ್ದು ನಾಳೆಯ ದಿವಸ ಬೆಳಗಾಗುತ್ತಲೇ ಇದರಲ್ಲಿರುವ ಮೀನುಗಳನ್ನೂ ಆಮೆಗಳನ್ನೂ ಬೇಟೆಯಾಡಬೇಕು" ಎಂಬುದಾಗಿ ಮಾತನಾಡಿಕೊಂಡರು. ಆ ಮಾತನ್ನು ಕೇಳಿ

ಆಮೆಯು ತನ್ನ ಸ್ನೇಹಿತರಾದ ಸಂಕಟ ವಿಕಟರೊಂದಿಗೆ ಇಂತೆಂದಿತು:— "ಮಿತ್ರರೇ! ಈ ಬೆಸ್ತರ ಮಾತನ್ನು ಕೇಳಿದಿರಲ್ಲವೇ? ಈಗ ನನ್ನ ಮುಂದಣ ಗತಿಯೇನು?" ಆಗ ಹಂಸೆಗಳು "ಕೇಳಿದೆವು. ಬೆಳಗಾಗುತ್ತಲೇ ಇದಕ್ಕೆ ತಕ್ಕಂತೆ ಮಾಡುವ" ಎಂದುವು. ಆಗ ಕೂರ್ಮವು ಹಂಸೆಗಳೊಂದಿಗೆ "ಹಾಗಲ್ಲ. ಈಗ ಔದಾಸೀನ್ಯ ಮಾಡಬಾರದು. ಇಂತಹ ಸಂದರ್ಭವನ್ನು ಹಿಂದೆ ಒಮ್ಮೆ ನಾನು ಇಲ್ಲಿಯೇ ನೋಡಿರುವೆನು. ಅನಾಗತ ವಿಧಾತ ಎಂದರೆ ಅಪಾಯವು ಒದಗುವುದಕ್ಕೆ ಮುಂಚಿತವಾಗಿಯೇ ಎಚ್ಚರಗೊಂಡು ಅದಕ್ಕೆ ತಕ್ಕ ಪ್ರತೀಕಾರಮಾಡುವವನೂ, ಪ್ರತ್ಯುತ್ಪನ್ನಮತಿ ಎಂದರೆ ಅಪಾಯವು ಸಂಭವಿಸಿದಾಗ ಆ ಸಮಯಕ್ಕೆ ತಕ್ಕಂತೆ ನಡೆಯುವವನೂ ಇವರಿಬ್ಬರೂ ಲೋಕದಲ್ಲಿ ಸುಖವನ್ನು ಅನುಭವಿಸುವರು. ಯದ್ಭವಿಷ್ಯ ಎಂದರೆ, ಬಂದುದೆಲ್ಲಾ ಬರಲಿ ಎಂಬುದಾಗಿ ಇದ್ದಲ್ಲಿಯೇ ಇರುತ್ತ ಅಲುಗದವನು ಹಾಳಾಗುವನು" ಎಂದಿತು. ಅದು ಹೇಗೆ? ಎಂಬುದಾಗಿ ಹಂಸೆಗಳು ಕೇಳಿದುವು. ಆಗ ಕೂರ್ಮವು ಆ ಕಥೆಯನ್ನು ಹೇಳಿತು.

## ಉಪಕಥೆ ೧

ಹಿಂದೆ ಒಮ್ಮೆ ಇದೇ ಕೊಳದಲ್ಲಿ ಇಂತೆಯೇ ಬೆಸ್ತರು ಬಂದಾಗ ಮೂರು ಮೀನುಗಳು ಹೀಗೆ ಯೋಚಿಸಿದುವು:–ಅನಾಗತವಿಧಾತವೆಂಬ ಮತ್ಸ್ಯವು "ನಾನು ಬೇರೊಂದು ಕೊಳಕ್ಕೆ ಹೋಗುವೆನು" ಎಂದು ಯೋಚಿಸಿ ಮತ್ತೊಂದು ಮಡುವಿಗೆ ಹೋಯಿತು. ಪ್ರತ್ಯುತ್ಪನ್ನಮತಿಯೆಂಬ ಎರಡನೆಯ ಮೀನು "ಮುಂದೆ ಏನಾಗುವುದೆಂಬುದಾಗಿ ಈಗಲೇ ನಿಶ್ಚಯಿಸಲು ಸಾಧ್ಯವೇ? ಅದರಲ್ಲಿ ನಂಬಿಕೆಯಾದರೂ ಏನು? ನಾನೆಲ್ಲಿಗೂ ಹೋಗುವುದಿಲ್ಲ. ಸಮಯ ಬಂದಾಗ ತಕ್ಕಂತೆ ಮಾಡಿದರಾಯಿತು" ಎಂದು ಅಲ್ಲಿಯೇ ಇದ್ದಿತು. ಇದು ಯುಕ್ತವೇ ಸರಿ. ಒದಗಿದ ಆಪತ್ತಿನಿಂದ ಪಾರಾಗುವುದು ಬುದ್ಧಿಶಾಲಿಯ ಲಕ್ಷಣ. ಆಗ ಯದ್ಭವಿಷ್ಯವೆಂಬ ಮೂರನೆಯ ಮೀನು ಹೀಗೆ ಹೇಳಿತು:—"ಯಾವುದು ಆಗುವುದಿಲ್ಲವೋ ಅದು ಹೇಗೂ ಆಗುವುದೇ ಇಲ್ಲ. ಅವಶ್ಯವಾಗಿ ನಡೆಯಬೇಕಾದುದು ನಡೆಯದೇ ಇರದು. ಈ ರೀತಿ ಚಿಂತೆ ಎಂಬ ವಿಷವನ್ನು ಮುರಿಯತಕ್ಕ ಈ ಔಷಧವನ್ನು ಏಕೆ ಸೇವಿಸಬಾರದು?"

ಮರುದಿನ ಬೆಳಗಾಗುತ್ತಲೇ ಪ್ರತ್ಯುತ್ಪನ್ನಮತಿಯು ಬೆಸ್ತರ ಬಲೆಯೊಳಗೆ ಸಿಲುಕಿಬಿದ್ದು, ತನ್ನನ್ನು ಸತ್ತಂತೆ ಕಾಣಿಸಿತು. ಬಲೆಯಿಂದ ತೆಗೆದುಕೊಳ್ಳುವಾಗ ಬೆಸ್ತನ ಕೈಯಿಂದ ಜಾರಿ, ಒಡನೆಯೇ ನೀರಿನಲ್ಲಿ ನೆಗೆದು ಆಳವಾದ ಸ್ಥಳವನ್ನು ಸೇರಿಕೊಂಡಿತು. ಯದ್ಭವಿಷ್ಯವೆಂಬ ಮೂರನೆಯ ಮತ್ಸ್ಯವು ಬಲೆಗಾರರ ಕೈಯಲ್ಲಿ ಸಿಲುಕಿ ಸತ್ತಿತು. "ಆ ಕಾರಣ ಈಗ ನಾನು ಬೇರೊಂದು ಮಡುವನ್ನು ಸೇರುವ ಬಗೆ ಯಾವುದು? ಅದಕ್ಕೆ ತಕ್ಕಂತೆ ನೀವು ಮಾಡಬೇಕು" ಎನಲು ಆ ಮಾತನ್ನು ಕೇಳಿ ಹಂಸೆಗಳು "ಮತ್ತೊಂದು ಮಡುವನ್ನು ಸೇರಿದೆಯಾದರೆ ನಿನಗೆ ಕ್ಷೇಮವೇ ದಿಟ. ಆದರೆ ನೆಲದ ಮೇಲೆ ಹೋಗುವಾಗ ನಿನ್ನ ಗತಿಯೇನು?" ಎಂದುವು.

ಆಮೆ—"ನೀವಿಬ್ಬರೂ ನನ್ನನ್ನು ಆಕಾಶಮಾರ್ಗವಾಗಿ ಒಯ್ಯಬೇಕು."

ಹಂಸೆಗಳು—"ಯಾವ ಉಪಾಯದಿಂದ?"

ಆಮೆ—"ನೀವಿಬ್ಬರೂ ಒಂದು ಕೋಲಿನ ಎರಡೂ ತುದಿಗಳನ್ನು ನಿಮ್ಮ ಕೊಕ್ಕುಗಳಿಂದ ಬಲವಾಗಿ ಕಚ್ಚಿಹಿಡಿಯಿರಿ. ನಾನು ಅದರ ಮಧ್ಯ ಭಾಗವನ್ನು ನನ್ನ ಬಾಯಿಂದ ಬಿಗಿಯಾಗಿ ಹಿಡಿಯುವೆನು. ಬಳಿಕ ನೀವಿಬ್ಬರು ರೆಕ್ಕೆಗಳ ಬಲದಿಂದ ಆಕಾಶಮಾರ್ಗದಲ್ಲಿ ಹೊತ್ತುಕೊಂಡು ಹೋಗಿರಿ."

ಹಂಸೆಗಳು—"ಈ ಉಪಾಯವು ಬಹಳ ಚೆನ್ನಾಗಿದೆ. ಆದರೆ ಉಪಾಯವನ್ನು ಯೋಚಿಸುವಾಗ ಅದರೊಂದಿಗೆ ಅಪಾಯವನ್ನೂ ಗಮನಿಸಬೇಕು. ಇದೀಗ ಬುದ್ಧಿಶಾಲಿಯ ಲಕ್ಷಣ. ಏಕೆಂದರೆ, "ಮತಿಗೆಟ್ಟ ಬಕವು ನೋಡುತ್ತಿರುವಾಗಲೇ ಅದರ ಮರಿಗಳನ್ನು ಮುಂಗುಸಿಯು ತಿಂದಿತು."

ಅದು ಹೇಗೆ? ಎಂಬುದಾಗಿ ಕೂರ್ಮವು ಪ್ರಶ್ನೆಮಾಡಲಾಗಿ ಹಂಸೆಗಳು ಹೇಳತೊಡಗಿದುವು.

### ಉಪಕಥೆ ೨

ಉತ್ತರ ದಿಕ್ಕಿನಲ್ಲಿ ಗೃಧ್ರಕೂಟವೆಂಬ ಪರ್ವತವಿರುವುದು. ಅಲ್ಲಿಯೇ ನರ್ಮದಾನದೀ ತೀರದಲ್ಲಿ ಒಂದು ಆಲದ ಮರದ ಮೇಲೆ ಬಕಪಕ್ಷಿಗಳು ವಾಸವಾಗಿದ್ದುವು. ಆ ಮರದ ಅಡಿಯಲ್ಲಿರುವ ಬಿಲದಲ್ಲಿ ಒಂದು ಸರ್ಪವು

ಇದ್ದಿತು. ಅದು ಮರದ ಮೇಲಣ ಹಕ್ಕಿಗಳ ಎಳೆ ಮರಿಗಳನ್ನು ತಿನ್ನು ತಿದ್ದಿತು. ಆಗ ಆ ಬಕಪಕ್ಷಿಗಳ ಗೋಳನ್ನು ಕೇಳಿ ಒಂದು ಮುದಿ ಬಕವು ಇಂತೆಂದಿತು:—"ಮೀನುಗಳನ್ನು ತಂದು ಮುಂಗುಸಿಯ ಬಿಲದಿಂದ ಹಾವಿನ ಹುತ್ತದ ವರೆಗೆ ಒಂದೊಂದನ್ನೇ ಸಾಲಾಗಿ ಇರಿಸಿರಿ. ಬಳಿಕ ಆ ಮೀನು ಗಳ ವಾಸನೆಯಿಂದ ಅದನ್ನು ತಿನ್ನುವುದಕ್ಕೆ ಆಸೆಪಟ್ಟು, ಆ ನಕುಲವು ಮೀನುಗಳನ್ನು ಒಂದೊಂದಾಗಿ ತಿನ್ನುತ್ತ ಹಾವಿನ ಹುತ್ತದ ವರೆಗೆ ಬಂದು, ಸರ್ಪವನ್ನು ಕಂಡು ಸಹಜವೈರದಿಂದ ಅದನ್ನು ಕೊಲ್ಲುವುದು." ಈ ಮಾತಿಗೆ ಸಮ್ಮತಿಸಿ ಬಕಪಕ್ಷಿಗಳು ಅಂತೆಯೇ ಮಾಡಿದುವು. ಮುಂಗ ಸಿಯು ಹೊರಬಂದು ಮತ್ಸ್ಯಗಳನ್ನು ತಿನ್ನುತ್ತ ಕ್ರಮವಾಗಿ ಹಾವನ್ನು ಕೊಂದಿತು; ಬಳಿಕ ಹಕ್ಕಿಮರಿಗಳ ಚಿಲಿಪಿಲಿ ಶಬ್ದವನ್ನು ಕೇಳಿ, ಆ ಮರವನ್ನು ಹತ್ತಿ, ಅವುಗಳ ಇದಿರಾಗಿಯೇ ಮರಿಗಳನ್ನೂ ನುಂಗಿತು. ಆದುದರಿಂದ ಬುದ್ಧಿಶಾಲಿಯು ಉಪಾಯವನ್ನು ಯೋಚಿಸುವಾಗ ಅದ ರೊಂದಿಗೆ ಅಪಾಯವನ್ನೂ ಯೋಚಿಸಬೇಕು. ನಾವಿಬ್ಬರೂ ನಿನ್ನನ್ನು ಒಯ್ಯುವಾಗ, ಅದನ್ನು ಕಂಡು ಆಶ್ಚರ್ಯದಿಂದ ಯಾರಾದರೂ ಏನನ್ನಾದರೂ ಮಾತನಾಡಿದಲ್ಲಿ ಅದನ್ನು ಕೇಳಿ ನೀನೇನಾದರೂ ಬಾಯ್ದೆರೆದೆಯೋ ನೋಡು, ನೀನು ಸಾಯುವುದೇ ದಿಟ. ಅದರಿಂದ ನೀನು ಇಲ್ಲಿಯೇ ಇರುವುದು ಲೇಸು."

ಆಗ ಕೂರ್ಮವು "ಏನು? ನಾನೂ ಅಂತಹ ಹೆಡ್ಡನೇ? ನಾನು ಯಾರಿಗೂ ಬದಲುಹೇಳುವುದಿಲ್ಲ. ಬಾಯ್ದೆರೆದರಲ್ಲವೇ?" ಎಂದಿತು. ಬಳಿಕ ಆ ಹಂಸೆಗಳು ಕೂರ್ಮವನ್ನು ಆಕಾಶಮಾರ್ಗವಾಗಿ ಒಯ್ಯುತ್ತಿರುವಾಗ ಅದನ್ನು ನೋಡಿ ದನಕಾಯುವ ಹುಡುಗರು "ಆಹಾ! ಏನು ಆಶ್ಚರ್ಯ! ಹಕ್ಕಿಗಳು ಆಮೆಯನ್ನು ಹೊರುತ್ತಿವೆ" ಎಂದರು. ಅವರಲ್ಲಿ ಒಬ್ಬನು "ಈ ಆಮೆಯು ನೆಲಕ್ಕೆ ಬಿದ್ದರೆ ನಾನು ಅದನ್ನು ಇಲ್ಲಿಯೇ ಸುಟ್ಟು ತಿನ್ನುವೆನು" ಎಂದನು. ಮತ್ತೊಬ್ಬನು "ತುಂಡುಮಾಡಿ ಹಂಚಿಕೊಳ್ಳಬೇಕು" ಎಂಬುದಾಗಿ ಹೇಳಲು, ಮಗದೊಬ್ಬನು "ಮನೆಗೆ ಕೊಂಡುಹೋಗಿ ಸುಟ್ಟು ತಿನ್ನಬೇಕು" ಎಂದನು. ಈ ರೀತಿಯಾಗಿ ಆ ಹುಡುಗರ ಕ್ರೂರವಾಕ್ಯಗಳನ್ನು ಕೇಳಿ ಸಹಿಸ ಲಾರದೆ ಸಿಟ್ಟುಗೊಂಡ ಆ ಕೂರ್ಮವು, ಮೈಮೇಲಿನ ನೆನಹು ತಪ್ಪಿ "ನೀವು

ಬೂದಿಯನ್ನು ತಿನ್ನುವಿರಂತೆ" ಎನ್ನುತ್ತಿರುವಾಗಲೇ ನೆಲದ ಮೇಲೆ ದುಪ್ಪನೆ ಬಿದ್ದು, ಗೊಲ್ಲರ ಹುಡುಗರ ಪಾಲಾಯಿತು" ಎಂಬುದಾಗಿ ಚಕ್ರವಾಕನು ಕಥೆಯನ್ನು ಮುಗಿಸಿದನು.

ಇಷ್ಟರಲ್ಲಿ ಗೂಢಚಾರನಾಗಿ ಹೋಗಿದ್ದ ದೀರ್ಘಮುಖನು ರಾಜನಲ್ಲಿಗೆ ಬಂದು "ಸ್ವಾಮಿ! ಒಂದೊಂದು ನಿಮಿಷದಲ್ಲಿಯೂ ದುರ್ಗವನ್ನು ಶೋಧನೆಮಾಡುತ್ತಲೇ ಇರಬೇಕೆಂಬುದಾಗಿ ನಾನು ಮೊದಲೇ ಅರಿಕೆ ಮಾಡಲಿಲ್ಲವೇ? ತಾವು ನನ್ನ ಮಾತಿನಂತೆ ಆ ಕೆಲಸವನ್ನು ಮಾಡದೆ ಹೋದಿರಿ. ಆಗ ಮೋಸಹೋದುದಕ್ಕೆ ಈಗ ಈ ಫಲವನ್ನು ಅನುಭವಿಸಬೇಕಾಯಿತು. ದೂರದರ್ಶಿಯು ಕಳುಹಿದ ಆ ಮೇಘವರ್ಣನೇ ನಮ್ಮ ಕೋಟೆಗೆ ಬೆಂಕಿ ಇಟ್ಟವನು" ಎಂಬುದಾಗಿ ಹೇಳಿದನು.

ಆಗ ರಾಜನು ನಿಟ್ಟುಸಿರುಬಿಡುತ್ತ ಇಂತೆಂದನು:—"ಹಗೆಯ ವಿನಯವನ್ನೂ, ಕಪ್ಪಕಾಣಿಕೆಗಳನ್ನೂ ಉಪಕಾರವನ್ನೂ, ನೋಡಿ ಮೋಸಹೋಗಬಾರದು. ಒಂದು ವೇಳೆ ಹಾಗೆ ನಂಬಿದರೆ, ಮರದ ತುದಿಯಲ್ಲಿ ಮಲಗಿ ನಿದ್ರಿಸಿದವನಂತೆ ನೆಲಕ್ಕೆ ಉರುಳಿಬಿದ್ದು, ಬಳಿಕ ಎಚ್ಚರಗೊಳ್ಳುವನು." ಈ ಮಾತನ್ನು ಕೇಳಿ ಗೂಢಚಾರನು "ಇಂತು ನಮ್ಮ ದುರ್ಗವನ್ನು ಪಾಳ್ಗೆಡಹಿದ ಬಳಿಕ, ಮೇಘವರ್ಣನು ಚಿತ್ರವರ್ಣನನ್ನು ಸಂದರ್ಶಿಸಿದ ಕೂಡಲೇ ಮಯೂರ ರಾಜನು "ಈ ಮೇಘವರ್ಣನಿಗೆ ಕರ್ಪೂರದ್ವೀಪದಲ್ಲಿ ಪಟ್ಟಗಟ್ಟಿರಿ" ಎಂಬುದಾಗಿ ತನ್ನ ಮಂತ್ರಿ ಮುಂತಾದ ಪರಿವಾರಕ್ಕೆ ಅಣತಿ ಇತ್ತನು.

"ನಿಯಮಿಸಿದ ಕಾರ್ಯವನ್ನು ನೆರವೇರಿಸಿದ ಸೇವಕನ ಪರಿಶ್ರಮವನ್ನು ಸೀರುಪಾಲು ಮಾಡಬಾರದು. ಅವನನ್ನು ಕಂಡು ಮಾತನಾಡುವಾಗ ಅವನ ಕಷ್ಟಕ್ಕೆ ತಕ್ಕ ಬಹುಮಾನದೊಂದಿಗೆ, ಒಳ್ಳೆಯ ಮಾತಿನಿಂದ ಮನಃಪೂರ್ವಕವಾಗಿ ಮನ್ನಿಸಬೇಕು" ಎಂಬುದಾಗಿ ಹೇಳಿದನು. ಇಷ್ಟರಲ್ಲಿ ಚಕ್ರವಾಕನು "ದೇವಾ! ಮನವೆಯನ್ನು ಲಾಲಿಸಬೇಕು" ಎಂಬುದಾಗಿ ಎಚ್ಚರಗೊಳಿಸಲು, ಹಿರಣ್ಯಗರ್ಭನು "ಇನ್ನೂ ಏನು ವಿಶೇಷ?" ಎಂಬುದಾಗಿ ಆತುರದಿಂದ ಪ್ರಶ್ನೆ ಮಾಡಲಾಗಿ ಗೂಢಚಾರನು ವಿವರಿಸತೊಡಗಿದನು:—"ಪ್ರಭೋ! ಇದು ಯುಕ್ತವಲ್ಲ. ಮೇಘವರ್ಣನ ವಿಷಯದಲ್ಲಿ ನಿನ್ನ ಅನುಗ್ರಹವನ್ನು

ಬೇರೊಂದು ವಿಧವಾಗಿ ತೋರಬಹುದು. ಏಕೆಂದರೆ, ಎಲೆ ರಾಜನೆ! ವಿಚಾರವಿಲ್ಲದವನಿಗೆ ಯುಕ್ತಿಯನ್ನು ಹೇಳುವುದು, ಹೊಟ್ಟನ್ನು ಕುಟ್ಟುವುದು, ನೀಚರಿಗೆ ಉಪಕಾರ ಮಾಡುವುದು, ಇವೆಲ್ಲವೂ ಮರಳಿನ ಮೇಲೆ ಮುದ್ರೆಹಾಕಿದಂತೆ. ದೊಡ್ಡವರಿಗೆ ಯೋಗ್ಯವಾದ ಪದವಿಯಲ್ಲಿ ನೀಚರನ್ನು ಎಂದಿಗೂ ಇರಿಸಬಾರದು; ಚೂಡಾಮಣಿಯ ಸ್ಥಳದಲ್ಲಿ ಪಾದುಕೆಯನ್ನು ಯಾವನೂ ಇರಿಸಲೊಲ್ಲನು. ಹಿರಿಯರೂ ಅಂತೆಯೇ ಹೇಳಿರುವರು. ನೀಚನು ಉನ್ನತ ಪದವಿಯನ್ನು ಪಡೆದನಾದರೆ, ಒಡನೆಯೇ ತನ್ನ ದಣಿಯನ್ನೇ ಕೊಲ್ಲುವುದಕ್ಕೆ ಪ್ರಯತ್ನಿಸುವನು. ಇಲಿಯು ಹುಲಿಯ ಆಕಾರವನ್ನು ಧರಿಸಿದೊಡನೆಯೇ ತನ್ನ ಸ್ವಾಮಿಯಾದ ಋಷಿಯನ್ನೇ ನುಂಗತೊಡಗಿತು. ಇದೇ ಈ ವಿಷಯದಲ್ಲಿ ಉದಾಹರಣೆ'' ಎಂಬುದಾಗಿ ಮಂತ್ರಿಯಾದ ದೀರ್ಘದರ್ಶಿಯು ಚಿತ್ರವರ್ಣನ ಉತ್ಸಾಹವನ್ನು ಮುರಿದು, ಮಯೂರರಾಜನ ಇಷ್ಟದಂತೆ ಇಲಿಯು ಹುಲಿಯಾದ ಕಥೆಯನ್ನು ಹೇಳತೊಡಗಿದನು. ಅದೆಂತೆಂದರೆ:—

## ೨ನೆಯ ಕಥೆ

ಗೌತಮ ಮುನಿಯ ತಪೋವನದಲ್ಲಿ ಮಹಾವ್ರತನೆಂಬ ಒಬ್ಬ ಮುನಿ ಇದ್ದನು. ಆತನ ಪರ್ಣಶಾಲೆಯ ಹತ್ತಿರ ಕಾಗೆಯ ಬಾಯಿಂದ ಜಾರಿಬಿದ್ದ ಒಂದು ಇಲಿಮರಿಯು ಆತನಿಗೆ ಕಾಣಿಸಿತು. ಆತನು ಅದನ್ನು ನೋಡಿ ಮರುಕಗೊಂಡು ಅದನ್ನು ತಂದು, ನವಣೆಯ ನುಚ್ಚಿನಿಂದ ಕಾಪಾಡುತ್ತ ಬಂದನು. ಹೀಗಿರುವಲ್ಲಿ ಒಂದು ದಿನ ಒಂದು ಬೆಕ್ಕು ಆ ಇಲಿಯನ್ನು ತಿನ್ನುವ ಸಲುವಾಗಿ ಹೊಂಚುಹಾಕುತಿದ್ದಿತು. ಇದರಿಂದ ಆ ಮೂಷಕವು ಬಹಳವಾಗಿ ಹೆದರಿತು. ಇದನ್ನು ಕಂಡು ಆ ಋಷಿಯು ತನ್ನ ತಪೋಮಹಿಮೆಯಿಂದ ಆ ಇಲಿಮರಿಯನ್ನು ಬಲಿಷ್ಠವಾದ ಒಂದು ಬೆಕ್ಕಿನ ರೂಪಕ್ಕೆ ಮಾರ್ಪಡಿಸಿದನು. ಬಳಿಕ ಆ ಬಿಡಾಲವು ನಾಯಿಗೆ ಹೆದರಿತು. ಆಗ ಆ ಮುನಿಯು ಅದನ್ನು ನಾಯಿಯನ್ನಾಗಿಸಿದನು. ನಾಯಿ ಹುಲಿಗೆ ಅಂಜಿತು. ಅಷ್ಟರಲ್ಲಿ ಆತನು ನಾಯಿಯನ್ನು ಹುಲಿಯನ್ನಾಗಿ ಮಾಡಿ, ಅದನ್ನೂ ಇಲಿಯಂತೆಯೇ ಸಾಕುತಿದ್ದನು. ಇದನ್ನು ನೋಡಿ, ಆ ತಪೋವನದಲ್ಲಿ ವಾಸವಾಗಿದ್ದವರೆಲ್ಲರೂ "ಈ ಮುನಿಯು ಇಲಿಯನ್ನು ಹುಲಿಯನ್ನಾಗಿ ಮಾಡಿರುವನು'' ಎಂದುಕೊಳ್ಳುತಿದ್ದರು. ಇದನು ಕೇಳಿದ ಆ ಹುಲಿಯು ಮನಮುರುಗಿ

"ಅಯ್ಯೋ! ಈ ತಾಪಸನು ಬದುಕಿರುವ ವರೆಗೂ ನನಗೆ ಈ ಅಪವಾದವು ತಪ್ಪಿದುದಲ್ಲ. ಈಗ ಹೇಗೂ ನಾನು ಹುಲಿಯಾಗಿರುವೆನಷ್ಟೆ! ನನ್ನ ಮೊದಲಿನ ಸುದ್ದಿ ಇವರಿಗೇಕೆ? ಹಿಂದೆ ನಾನು ಏನಾಗಿದ್ದರೇನು? ಆದರೆ ಈ ಅಪವಾದವನ್ನು ಮಾತ್ರ ಸಹಿಸಲಾರೆನು" ಎಂಬುದಾಗಿ ಯೋಚಿಸಿ, ಆ ಮುನಿಯನ್ನು ಕೊಲ್ಲುವ ಸಲುವಾಗಿ ಮುಂದರಿಸಿತು. ಇದರ ಅಭಿಪ್ರಾಯವನ್ನು ತಿಳಿದ ಆ ಮುನಿಯು "ಹಾ! ಹುಲಿ! ನೀನು ಮರಳಿ ಇಲಿಯಾಗು" ಎಂದನು. ಕೂಡಲೇ ಹುಲಿ ಇಲಿಯಾಯಿತು. ಆ ಕಾರಣ ನೀಚನನ್ನು ಯಾವಾಗಲೂ ಉನ್ನತ ಪದವಿಯಲ್ಲಿರಿಸಬಾರದು. ನೀಚನು ಉನ್ನತಪದವನ್ನು ಏರಿದ ಕೂಡಲೇ ತನ್ನ ದಣಿಯನ್ನೇ ಕೊಲ್ಲುವುದಕ್ಕೆ ಪ್ರಯತ್ನಿಸುವನು. ಇಷ್ಟು ಮಾತ್ರವೇ ಅಲ್ಲ; ಈಗ ಪ್ರಭುವು ಅಪ್ಪಣೆ ಕೊಡಿಸಿದಂತೆ ಈ ಮೇಘವರ್ಣನಿಗೆ ಕರ್ಪೂರದ್ವೀಪದ ಆಧಿಪತ್ಯವನ್ನು ಕೊಡುವುದು ಸುಲಭಸಾಧ್ಯವೆಂಬ ಭಾವನೆಯೂ ತಪ್ಪು. ಇತ್ತ ಲಾಲಿಸಬೇಕು."

"ಬಕಪಕ್ಷಿಯು, ಮೇಲು, ಕೀಳು, ನಡುತರದ ಮೀನುಗಳನ್ನು ತಿಂದು ದಣಿದು, ರುಚಿಹತ್ತಿ, ಏಡಿಯನ್ನು ಹಿಡಿಯ ಹೋಗಿ ಸತ್ತಿತು" ಎನಲು, ಆ ಕಥೆಯನ್ನು ಹೇಳುವಂತೆ ಚಿತ್ರವರ್ಣನು ಕೇಳಲಾಗಿ, ದೂರದರ್ಶಿಯು ಹೇಳತೊಡಗಿದನು.

## ೩ನೆಯ ಕಥೆ

ಮಾಳವದೇಶದಲ್ಲಿ ಪದ್ಮಗರ್ಭವೆಂಬ ತಟಾಕವಿದ್ದಿತು. ಅಲ್ಲಿ ಒಂದು ಮುದಿ ಕೊಕ್ಕರೆಯು ಬಲಗುಂದಿ, ಬಳಲಿ ಮರುಗುತ್ತಿರುವಂತೆ ತನ್ನನ್ನು ತೋರ್ಪಡಿಸುತ್ತ ನಿಂತಿದ್ದಿತು. ಇಂತಹ ಸ್ಥಿತಿಯಲ್ಲಿದ್ದ ಆ ಬಕವನ್ನು ಕಂಡು ಒಂದು ಏಡಿಯು "ಅಯ್ಯಾ! ಇದೇನು? ಹೀಗೆ ಆಹಾರವನ್ನು ಬಿಟ್ಟು ನಿಂತಿರುವೆ?" ಎಂದಿತು. ಆಗ ಬಕವು "ನನಗೆ ಮೀನುಗಳೇ ಆಹಾರ! ನಾಳೆ ಬೆಳಗಾಗುತ್ತಲೇ ಬೆಸ್ತರು ಇಲ್ಲಿಗೆ ಬಂದು, ಬಲೆ ಬೀಸಿ, ಇಲ್ಲಿರುವ ಮೀನುಗಳನ್ನೆಲ್ಲ ಹಿಡಿದು ಒಯ್ಯುವರೆಂಬ ಸುದ್ದಿಯನ್ನು ಕೇಳಿದೆನು. ಅದು ದಿಟವಾದಲ್ಲಿ ನನ್ನ ಆಹಾರಕ್ಕೆ ಸೊನ್ನೆ ಬೀಳುವುದು. ನಾನು ಹೊಟ್ಟೆಗಿಲ್ಲದೆ ಸಾಯಬೇಕಾಗುವುದು. ಈ ಯೋಚನೆಯಿಂದ ನನಗೆ ಈಗಾಗಲೇ ಊಟದ ಮೇಲೆ ಆಸೆ ಕಡಿಮೆಯಾಗಿದೆ. ಏನು ಮಾಡುವುದಕ್ಕೂ ದಿಕ್ಕೇ ತೋರದಂತಾಗಿದೆ" ಎಂದಿತು.

ಈ ಮಾತನ್ನು ಕೇಳಿ ಮೀನುಗಳು ಹೀಗೆ ಯೋಚಿಸಿದುವು:—"ಈಗ ಸದ್ಯಕ್ಕೆ ನಮಗೆ ಈ ಕೊಕ್ಕರೆಯೇ ಉಪಕಾರಿಯಾಗಿದೆ. ಅದರಿಂದ ಯಾವುದಾದರೊಂದು ಬಗೆಯಿಂದ ಬದುಕುವ ಮಾರ್ಗವನ್ನು ಹೇಳುವಂತೆ ಇದನ್ನೇ ಕೇಳಿ ತಿಳಿದುಕೊಳ್ಳುವ! ಅಪಕಾರಿಯಾದ ಹಗೆಯೊಂದಿಗೆ ಸಂಧಿ ಮಾಡಿಕೊಳ್ಳಬಹುದು. ಆದರೆ ಅಪಕಾರಿಯಾದ ಮಿತ್ರನೊಡನೆ ಒಪ್ಪಂದವು ಎಂದಿಗೂ ಸಲ್ಲದು. ಮಿತ್ರನಲ್ಲಿಯೂ ಶತ್ರುವಿನಲ್ಲಿಯೂ ನೋಡಬೇಕಾದ ಮುಖ್ಯ ಲಕ್ಷಣವು-ಉಪಕಾರ, ಅಪಕಾರ, ಇವೆರಡೇ ಅಲ್ಲವೇ" ಎಂಬುದಾಗಿ ಯೋಚಿಸಿ, "ಹಾಗಾದರೆ ನಾವು ಮುಂದೆ ಬದುಕುವ ಮಾರ್ಗವಾವುದು?" ಎಂಬುದಾಗಿ ಕೇಳಿದುವು. "ಜಲವಸತಿಯುಳ್ಳ ಮತ್ತೊಂದು ಪ್ರದೇಶಕ್ಕೆ ತೆರಳುವುದೇ ನೀವು ಜೀವಿಸುವುದಕ್ಕೆ ಉಪಾಯ. ಬೇಕಾದರೆ ನಾನು ನಿಮ್ಮೆಲ್ಲರನ್ನೂ ಸರದಿಯ ಮೇರೆಗೆ ಅಲ್ಲಿಗೆ ಕರೆದೊಯ್ಯುವೆನು" ಎಂಬುದಾಗಿ ಕೊಕ್ಕರೆಯು ಹೇಳಿದುದನ್ನು ಕೇಳಿ, ಆ ಮತ್ಸ್ಯಗಳೆಲ್ಲವೂ ಅದಕ್ಕೆ ಸಮ್ಮತಿಸಿದುವು.

ತರುವಾಯ ಆ ಧೂರ್ತಬಕವು ಒಂದೊಂದಾಗಿ ಮೀನುಗಳನ್ನು ಕೊಂಡೊಯ್ದು, ಒಂದೆಡೆಯಲ್ಲಿರಿಸಿ, ತಿಂದು ಮರಳಿ ಹಿಂದಿರುಗಿ "ಅವುಗಳನ್ನೆಲ್ಲ ನಾನು ಮತ್ತೊಂದು ಕೊಳದಲ್ಲಿ ಬಿಟ್ಟು ಬಂದೆನು" ಎಂದಿತು.

ಆಗ ಕರ್ಕಟವು ಆತುರದಿಂದ "ಬಕರಾಜಾ! ನನ್ನನ್ನೂ ಅಲ್ಲಿಗೆ ಕರೆದುಯ್ಯಬಾರದೇ?" ಎಂಬುದಾಗಿ ಅಂಗಲಾಚಿ ಬೇಡಿತು. ಅಂದಿನವರೆಗೆ ಯಾವಾಗಲೂ ಏಡಿಯ ಮಾಂಸವನ್ನೇ ಸವಿಯದಿದ್ದ ಆ ಮೋಸದ ಕೊಕ್ಕರೆಯು ಅಕ್ಕರೆಯಿಂದ ಅದನ್ನೂ ಒಯ್ದು ಒಂದು ದಿಣ್ಣೆಯ ಮೇಲೆ ಇರಿಸಿತು. ಆಗ ಕರ್ಕಟವು ತನ್ನ ಸುತ್ತಲೂ ನೆಲದ ಮೇಲೆ ಚೆಲ್ಲಿರುವ ಮೀನಿನ ಮುಳ್ಳುಗಳನ್ನು ನೋಡಿ "ಅಕಟಾ! ಕೆಟ್ಟೆನು! ಅಯ್ಯೋ ನನ್ನ ದುರದೃಷ್ಟವೇ! ಈಗ ನಾನೇನು ಮಾಡಬಹುದು? ಹುಂ. ಇರಲಿ. ಈ ಸಮಯಕ್ಕೆ ತಕ್ಕಂತೆಯೇ ನಡೆಯಬೇಕು. ಇದೇ ವಿವೇಕಿಯ ಲಕ್ಷಣ" ಎನ್ನುತ್ತ ಹೊಂಚುಹಾಕುತಿದ್ದು, ಆ ಕೊಕ್ಕರೆಯ ಕುತ್ತಿಗೆಯನ್ನು ಕಚ್ಚಿ ತುಂಡುಮಾಡಿತು. ಕೂಡಲೇ ಬಕವು ಅಲ್ಲೇ ಸತ್ತುಬಿದ್ದಿತು. ಆ ಕಾರಣ ಈಗ ನಿನ್ನ ಯೋಚನೆಯು ಸುಲಭವಾಗಿ ನಡೆಯುವುದೆಂಬ ಭಾವನೆಯನ್ನು ದೂರಮಾಡು."

ಅಷ್ಟರಲ್ಲಿ ಚಿತ್ರವರ್ಣನು ಮತ್ತೆ ಇಂತೆಂದನು:—"ಮಂತ್ರಿವರ್ಯಾ! ಇತ್ತ ಕೇಳು. ನಾನು ಈ ವಿಷಯವನ್ನು ಹಿಂದೆಯೇ ಯೋಚಿಸಿರುವೆನು. ಈ ಕರ್ಪೂರದ್ವೀಪದಲ್ಲಿ ಮೇಘವರ್ಣನಿಗೆ ಪಟ್ಟವಾದ ಕೂಡಲೇ ಇವನು ಇಲ್ಲಿರುವ ಉತ್ತಮ ವಸ್ತುಗಳನ್ನೆಲ್ಲ ನಮಗೆ ಕಾಣಿಕೆಮಾಡುತ್ತಿರಬೇಕು. ಅವನ ಸಂಗಡ ನಾವು ವಿಂಧ್ಯಪರ್ವತದಲ್ಲಿ ವಿನೋದವಾಗಿ ವಾಸಮಾಡ ಬಹುದು." ಆಗ ದೂರದರ್ಶಿಯು ನಗುತ್ತ "ದೇವಾ! ಭವಿಷ್ಯದ ಸುದ್ದಿ ಯನ್ನು ಊಹಿಸಿ ಹಿಗ್ಗಬಾರದು. ಹಾಗೆ ಸಂತೋಷದಿಂದ ಮೈಮರೆತು ಉಬ್ಬಿದರೆ, ಗಡಿಗೆಯನ್ನೊಡೆದು ಹಾಳುಮಾಡಿಕೊಂಡ ಬ್ರಾಹ್ಮಣನ ಗತಿಯೇ ಅವನಿಗೆ ಬರುವುದು" ಎಂಬುದಾಗಿ ಹೇಳಲು, ಆ ಕಥೆಯನ್ನು ಸವಿಸ್ತಾರ ವಾಗಿ ಹೇಳುವಂತೆ ರಾಜನು ಆಜ್ಞಾಪಿಸಲಾಗಿ ಮಂತ್ರಿಯು ಉಸಿರ ತೊಡಗಿದನು.

## ೪ನೆಯ ಕಥೆ

ದೇವೀಕೋಟೆ ಎಂಬ ನಗರದಲ್ಲಿ ದೇವಶರ್ಮನೆಂಬ ಬ್ರಾಹ್ಮಣ ನಿದ್ದನು. ಆತನು ಒಂದು ವಿಷುವತ್ಪುಣ್ಯ (ಸಂಕ್ರಮಣ) ಕಾಲದಲ್ಲಿ ಒಂದು ಗಡಿಗೆಯ ತುಂಬ ಅರಳುಹಿಟ್ಟನ್ನು ಸಂಪಾದಿಸಿದನು. ಅದನ್ನು ತೆಗೆದುಕೊಂಡು, ಕುಂಬಾರನ ಮನೆಯ ಮುಂದೆ ಪಡಸಾಲೆಯಲ್ಲಿ ಒಂದೆಡೆ ಬಿಡಾರಮಾಡಿ, ಹಿಟ್ಟಿನ ಗಡಿಗೆಯನ್ನು ಪಕ್ಕದಲ್ಲಿರಿಸಿ, ಮಲಗಿ, ಈ ರೀತಿ ಯೋಚಿಸಿದನು:—"ನಾನು ಈ ಗಡಿಗೆಯ ಹಿಟ್ಟನ್ನು ಮಾರಿದರೆ ಹತ್ತು ಕವಡೆಗಳು ಸಿಗುತ್ತವೆ. ಆ ಕವಡೆಗಳಿಗೆ ಇಲ್ಲಿಯೇ ಕುಡಿಕೆ, ಮಡಿಕೆ, ಮುಚ್ಚಳಗಳನ್ನು ಬೆಲೆಗೆ ತೆಗೆದು, ಮಾರುತ್ತ, ಹೀಗೆಯೇ ನಾನಾ ವಿಧ ವಾಗಿ ಹೆಚ್ಚಿಸುತ್ತ ಆ ಮೇಲೆ ಅಡಕೆ, ಬಟ್ಟೆಬರೆ ಮುಂತಾದ ಹೆಚ್ಚು ಬೆಲೆಯ ವಸ್ತುಗಳನ್ನು ಕೊಂಡು, ಮಾರಿ, ಲಕ್ಷಗಟ್ಟಲೆ ಹಣವನ್ನು ಸಂಪಾದಿಸಿ, ನಾಲ್ವರು ತರುಣಿಯರನ್ನು ಮದುವೆಯಾಗುವೆನು. ಆ ಸವ ತಿಯರಲ್ಲಿ ಅತ್ಯಂತ ರೂಪವತಿಯಾದವಳನ್ನು ಅಕ್ಕರೆಯಿಂದ ಮೋಹಿಸು ವೆನು. ಆಗ ಸಪತ್ನಿಯರು ಹೊಡೆದಾಟಕ್ಕೆ ಮೊದಲಿಟ್ಟರಾದರೆ, ಸಿಟ್ಟು ಗೊಂಡ ನಾನು ಅವರನ್ನು ಹೀಗೆ ದೊಣ್ಣೆಯಿಂದ ಬಡೆದುವೆನು" ಎನ್ನುತ್ತ ಕೈಯಲ್ಲಿದ್ದ ದೊಣ್ಣೆಯನ್ನು ಬಲವಾಗಿ ಎಸೆದನು. ಹಿಟ್ಟಿನ ಗಡಿಗೆಯು

ಪುಡಿಯಾಯಿತು. ಅಲ್ಲಿದ್ದ ಎಷ್ಟೋ ಮಡಿಕೆ ಕುಡಿಕೆಗಳು ನುಗ್ಗುನುಚ್ಚಾದುವು. ಆ ಸಪ್ಪಳವನ್ನು ಕೇಳಿ, ಕುಂಬಾರನು ಅಲ್ಲಿಗೆ ಬಂದು ಒಡೆದು ಬಿದ್ದಿದ್ದ ಗಡಿಗೆಗಳನ್ನು ನೋಡಿ ಮರುಗಿ ಆ ಬ್ರಾಹ್ಮಣನನ್ನು ಹಳಿದು, ಪಡಸಾಲೆಯಿಂದ ಹೊರಕ್ಕೆ ದೂಡಿದನು. ಆ ಕಾರಣದಿಂದ ಯಾರೂ ಭವಿಷ್ಯದ ಸುದ್ದಿಯನ್ನು ಸ್ಮರಿಸಿ ಹಿಗ್ಗಬಾರದು.''

ಈ ಕಥೆಯನ್ನು ಕೇಳಿ ಚಿತ್ರವರ್ಣನು ದೂರದರ್ಶಿಯನ್ನು ಹತ್ತಿರಕ್ಕೆ ಕರೆದು ''ಅಯ್ಯಾ! ಈಗ ನಮ್ಮ ಕರ್ತವ್ಯವೇನು? ಅದನ್ನು ವಿವರಿಸು'' ಎಂಬುದಾಗಿ ಏಕಾಂತದಲ್ಲಿ ಪ್ರಶ್ನೆಮಾಡಿದನು. ಆಗ ಮಂತ್ರಿಯಾದ ಗೃಧ್ರನು ಹೇಳಿದನು:—ಅದೆಂತೆಂದರೆ, ''ಕೀಳುಜಾತಿಯ ಆನೆಯು ಸೊಕ್ಕಿ, ಯಾರ ಅಡ್ಡಿಗೂ ನಿಲ್ಲದೆ, ಸ್ವೇಚ್ಛೆಯಾಗಿ ನುಗ್ಗಿತೆಂದರೆ, ಅಪವಾದವು ಮಾವುತನಿಗೆ ತಪ್ಪುವುದಿಲ್ಲ. ಅಂತೆಯೇ, ಅರಸರು ಹೆಮ್ಮೆಯಿಂದ ಹಿಂದು ಮುಂದು ನೋಡದೆ ನಡೆಯ ತೊಡಗಿದರೆ ಅಪಕೀರ್ತಿಯು ಎಂದಿಗೂ ಮಂತ್ರಿಗಳನ್ನೇ ಸೇರುವುದು. ದೇವಾ! ನಾವೀಗ ನಮ್ಮ ಸಾಮರ್ಥ್ಯದಿಂದ ಹಗೆಯ ಕೋಟೆಯನ್ನು ಹಾಳುಗೆಡಹಲಿಲ್ಲವಲ್ಲಾ! ಆಳಿದವರ ಉಪಾಯ ಬಲದಿಂದಲ್ಲವೇ ಗೆದ್ದೆವು?'' ಈ ಮಾತನ್ನು ಕೇಳಿ ಚಿತ್ರವರ್ಣನು ''ನನ್ನ ಉಪಾಯದಿಂದ ಅಲ್ಲ. ನಿನ್ನ ಬುದ್ಧಿಚಾತುರ್ಯಯುಕ್ತವಾದ ಉಪಾಯದಿಂದ'' ಎಂದನು. ಆಗ ಮಂತ್ರಿಯು ''ನನ್ನ ಮಾತಿಗೆ ಬೆಲೆ ಕೊಟ್ಟು ಅದರಂತೆ ನಡೆಯುವುದಾದರೆ, ನಾವು ಈಗಲೇ ನಮ್ಮ ದೇಶಕ್ಕೆ ತೆರಳಬೇಕು. ಹಾಗೆ ಮಾಡಲು ಸಮ್ಮತಿಸದಿದ್ದಲ್ಲಿ, ಮಳೆಗಾಲವು ಬಂದೊಡನೆಯೇ ಸಮಾನಬಲನಾದ ಈ ರಾಜಹಂಸನೊಂದಿಗೆ ನಮಗೆ ಮರಳಿ ಯುದ್ಧವು ತಪ್ಪಿದುದೇ ಅಲ್ಲ. ಪರದೇಶದಲ್ಲಿ ಇಕ್ಕಟ್ಟಿಗೆ ಸಿಲುಕಿ, ಮುಂದೆ ನಮ್ಮ ದೇಶಕ್ಕೆ ಹೋಗುವುದೂ ಕಷ್ಟವಾಗುವುದು. ಅದರಿಂದ ಬೇಗನೆ ಈತನೊಂದಿಗೆ ಸಂಧಿಮಾಡಿಕೊಂಡು ನಮ್ಮ ರಾಜಧಾನಿಗೆ ತೆರಳುವ! ಕೋಟೆಯನ್ನು ಕೆಡಹಿ ಹಾಳು ಬೀಳಿಸಿದೆವು. ಕೀರ್ತಿಯು ಬಂದೇ ಬಂದಿತು. ಇದೇ ಈಗ ನಮಗೆ ಸಮ್ಮತವಾಗಿ ತೋರುತ್ತದೆ. ಏಕೆಂದರೆ, ಯಾವನು ಧರ್ಮದ ಮೇಲೆಯೇ ಲಕ್ಷ್ಯವಿಟ್ಟು, ಇದು ಅರಸನಿಗೆ ಹಿತವಾಗುವುದೇ ಅಥವಾ ಅಪ್ರಿಯವಾಗುವುದೇ ಎಂಬುದನ್ನು ಗಮನಿಸದೆ, ಅಪ್ರಿಯವಾಗಿ

ದ್ದರೂ ಹಿತಕಾರಿಯಾದ ಸತ್ಯವನ್ನೇ ನುಡಿದು, ಅರಸನಿಗೆ ಮೇಲ್ಮೆಯನ್ನೇ ಯೋಚಿಸುವನೋ ಅವನೇ ನಿಜವಾದ ಮಂತ್ರಿಯು. ಯುದ್ಧದಲ್ಲಿ ಗೆಲುವು ಯಾವಾಗಲೂ ಸಂದೇಹ. ಇಂತಿರಲು ಸಮಬಲನಾದ ಹಗೆಯೊಂದಿಗೆ ಸಂಧಿಮಾಡಿಕೊಳ್ಳುವುದೇ ಲೇಸು. ಮಿತ್ರರನ್ನೂ, ಸೇನೆಯನ್ನೂ, ರಾಷ್ಟ್ರವನ್ನೂ, ತನ್ನನ್ನೂ, ಸಂದೇಹವೆಂಬ ಉಯ್ಯಾಲೆಯಂತಿರುವ ಯುದ್ಧದಲ್ಲಿ ತೂಗಿ ನೋಡತಕ್ಕವನು ಮೂರ್ಖನೇ ಸರಿ'' ಎಂದನು.

ಅದಕ್ಕೆ ಅರಸನು "ಮೊದಲೇ ಈ ಮಾತನ್ನು ನನಗೇಕೆ ಹೇಳಲಿಲ್ಲ?'' ಎಂದನು. ಆ ಮಾತಿಗೆ ಮಂತ್ರಿಯು "ನಾನು ಹೇಳುವ ಮಾತುಗಳನ್ನು ಸಂಪೂರ್ಣವಾಗಿ ಕೇಳಲೇ ಇಲ್ಲ. ನನ್ನ ಮಾತು ಮುಗಿಯುವುದರೊಳಗಾಗಿ ಕಾರ್ಯವನ್ನು ನಡೆಯಿಸ ತೊಡಗಿದಿರಿ. ನಾನು ಈ ಯುದ್ಧವನ್ನು ಸಮ್ಮತಿಸಲೇ ಇಲ್ಲ. ಇಲ್ಲಿಯ ಅರಸನಾದ ಹಿರಣ್ಯಗರ್ಭನು ಸಚ್ಚಾರಿತ್ರ ಸಂಪನ್ನನು. ನಾವು ಈತನೊಂದಿಗೆ ಮಾತನಾಡುವಾಗ ಮಿತವಾಗಿರಬೇಕು. ಸತ್ಯವಂತನೊಡನೆಯೂ, ಚಾರಿತ್ರಸಂಪನ್ನನೊಡನೆಯೂ, ಧಾರ್ಮಿಕನೊಡನೆಯೂ, ಅನಾರ್ಯನೊಡನೆಯೂ, ಅನೇಕ ಮಂದಿ ಅಣ್ಣತಮ್ಮಂದಿರೊಡಗೂಡಿದವನೊಡನೆಯೂ, ಬಲಶಾಲಿಯೊಡನೆಯೂ, ಅನೇಕ ವೇಳೆ ಜಯಶೀಲನಾದವನೊಡನೆಯೂ ಹೋರಾಡಬಾರದು. ಈ ಏಳು ಮಂದಿಯೊಡನೆ ಸಂಧಿಮಾಡಿಕೊಳ್ಳುವುದೇ ಲೇಸೆಂಬುದಾಗಿ ಹಿರಿಯರೂ ಅಭಿಪ್ರಾಯ ಪಟ್ಟಿರುತ್ತಾರೆ. ಸತ್ಯಸಂಧನು ಯಾವಾಗಲೂ ತನ್ನ ಸತ್ಯಕ್ಕೆ ಹಾನಿ ತಟ್ಟದಂತೆ ಜಾಗರೂಕತೆಯಿಂದಿರುವನು. ಒಡಂಬಡಿಕೆಯನ್ನು ಎಳ್ಳಷ್ಟಾದರೂ ಮೀರುವುದಿಲ್ಲ. ಸಚ್ಚರಿತನು ತನ್ನ ಪ್ರಾಣಕ್ಕೆ ಅಪಾಯ ಬಂದರೂ ಕೆಟ್ಟಹಾದಿಯಲ್ಲಿ ಕಾಲಿಡಲಾರನು. ಧಾರ್ಮಿಕನ ಮೇಲೆ ದಂಡೆತ್ತಿದರೆ ಲೋಕವೆಲ್ಲ ಅವನಿಗೆ ಒತ್ತಾಸೆಮಾಡುವುದು. ಧರ್ಮವೂ ಪ್ರಜೆಗಳ ಅನುರಾಗವೂ ಒಂದಾಗಿ ಸೇರಿರುವುದರಿಂದ ಧಾರ್ಮಿಕನೇ ಸುಲಭವಾಗಿ ಗೆಲ್ಲುವನು.

ಕೆಲವು ಸಮಯಗಳಲ್ಲಿ ನಮಗೆ ಒದವಿದ ವಿಪತ್ತನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಅನಾರ್ಯರೊಂದಿಗೂ ಸಂಧಿ ಮಾಡಿಕೊಳ್ಳಲೇ ಬೇಕು. ಅಂತಹ ಸಮಯವು ಒದವಿದಾಗ ಅವನನ್ನು ಆಶ್ರಯಿಸಲಾರದೆ ಕಾಲಹರಣ ಮಾಡ

ಬಾರದು. ಗುಬುರಾಗಿಯೂ ದಟ್ಟವಾಗಿಯೂ ಬೆಳೆದು ಮುಳ್ಳುಗಳಿಂದ ತುಂಬಿರುವ ಮೆಳೆಯಿಂದ ಒಂದು ಬಿದಿರನ್ನು ಮಾತ್ರವೇ ಕಡಿದು, ಹೊರಗೆ ಸೆಳೆಯುವುದು ಎಂತು ಸುಲಭಸಾಧ್ಯವಲ್ಲವೋ ಅಂತೆಯೇ ಬಹಳ ಮಂದಿ ಒಡಹುಟ್ಟಿದವರನ್ನು ಪಡೆದಿರುವ ಹಗೆಯನ್ನು ಭೇದಿಸಲು ಶಕ್ಯವಲ್ಲ. ಈ ಕಾರಣದಿಂದ ಅಂತಹವನೊಡನೆ ಅವಶ್ಯವಾಗಿ ಸಂಧಿಯನ್ನು ಮಾಡಿ ಕೊಳ್ಳಲೇ ಬೇಕು. ಹೋರಾಡಿ ಫಲವಿಲ್ಲ. ಬಲ್ಲಿದನ ಸಂಗಡ ಹೋರಾ ಡುವ ವಿಷಯದಲ್ಲಿ ಶಾಸ್ತ್ರಗಳು ಅನುಕೂಲವಾಗಿ ಹೇಳುವುದಿಲ್ಲ. ಮೋಡವು ಎಂದಿಗಾದರೂ ಗಾಳಿಗೆ ಇದಿರುಬೀಳುವುದುಂಟೇ? ಇನ್ನು ಪರಶು ರಾಮನಂತೆ ಹಲವು ಬಾರಿ ಜಯಶೀಲನೆನಿಸಿದ, ಪ್ರತಾಪಶಾಲಿಯಾದ ಹಗೆ ಯೊಂದಿಗೆ ಹೋರಾಡುವುದು ನೀತಿಸಮ್ಮತವಲ್ಲ. ಪ್ರತಾಪಶಾಲಿಯು ಯಾವಾಗಲೂ ಎಲ್ಲೆಲ್ಲಿಯೂ ಇದಿರಿಲ್ಲದೆ, ಎಲ್ಲರ ಭಾಗ್ಯವನ್ನೂ ತಾನೇ ಅನುಭವಿಸುತ್ತಾನೆ. ಅನೇಕ ತಡವೆ ಯುದ್ಧಗಳಲ್ಲಿ ಜಯಶೀಲನಾಗಿರುವ ಹಗೆಯೊಂದಿಗೆ ಸಂಧಿ ಮಾಡಿಕೊಂಡರೆ, ಅಂತಹ ಜಯಶಾಲಿಯ ಪ್ರತಾಪ ದಿಂದಲೇ ಮಿಕ್ಕ ಹಗೆಗಳನ್ನೂ ಸುಲಭವಾಗಿ ವಶಪಡಿಸಿಕೊಳ್ಳಬಹುದು. ಈಗ ನಮಗೆ ಹಗೆಯಾಗಿರುವ ಈ ರಾಜಹಂಸನು ಅನೇಕ ಸದ್ಗುಣಭೂಷಿತ ನಾಗಿರುವ ಕಾರಣ, ಈತನೊಂದಿಗೆ ನಾವು ಯುದ್ಧಮಾಡುವುದು ಎಷ್ಟು ಮಾತ್ರಕ್ಕೂ ತರವಲ್ಲ. ಸಂಧಿಮಾಡಿಕೊಳ್ಳುವುದೇ ಲೇಸು'' ಎಂಬುದಾಗಿ ಬಿತ್ತರಿಸಿದನು.

ಈ ರೀತಿಯಾಗಿ ಬಕನು ಇದಿರು ಕಡೆಯ ಪಾಳೆಯದ ಸುದ್ದಿಯನ್ನು ತಿಳುಹಲಾಗಿ, ಆ ಮಾತುಗಳನ್ನೆಲ್ಲ ಕೇಳಿ ಚಕ್ರವಾಕನು-“ಇರಲಿ. ಎಲ್ಲವೂ ವಿದಿತವಾಯಿತು. ನೀನು ಬೇಗನೆ ಹೋಗಿ ಇನ್ನೂ ಅಲ್ಲಿನ ವಿದ್ಯಮಾನ ಗಳೇನೆಂಬುದನ್ನು ತಿಳಿದು ಬಾ'' ಎಂಬುದಾಗಿ ಆಜ್ಞಾಪಿಸಿದನು. ಅಷ್ಟರಲ್ಲಿ ಹಿರಣ್ಯಗರ್ಭನು ಚಕ್ರವಾಕನನ್ನು ಕುರಿತು-“ಓ ಮಂತ್ರಿಯೇ! ಸಂಧಿ ಯನ್ನು ಯಾರೊಂದಿಗೆ ಹೇಗೆ ಮಾಡಿಕೊಳ್ಳಬೇಕು? ಅದರ ವಿವರವನ್ನು ತಿಳಿಯಬೇಕೆಂದಿರುವೆನು'' ಎನಲು ಮಂತ್ರಿಯು ಈ ಪರಿ ಹೇಳತೊಡಗಿ ದನು. ಅದೆಂತೆಂದರೆ:—

“ಸ್ವಾಮಿಯು ಲಾಲಿಸಬೇಕು. ಹುಡುಗ, ಮುದುಕ, ಬೇನೆಯಿಂದ ನರಳತಕ್ಕವ, ಬಂಧುಬಳಗಗಳಿಂದ ತಿರಸ್ಕೃತನಾದವ, ಅಂಜುಬುರುಕ, ಹೇಡಿ

ಯಾದ ಪರಿವಾರವುಳ್ಳವ, ಜಿಪುಣ, ಪಿಸುಣ, ಚಾಡಿಕೋರರಿಂದ ಕೂಡಿದವ, ಮಂತ್ರಿಗಳಲ್ಲಿ ನಂಬುಗೆ ಇಲ್ಲದವ, ವಿಷಯಲಂಪಟ, ಐಕಮತ್ಯವಿಲ್ಲದ ಸಲಹೆಯನ್ನು ಕೊಡತಕ್ಕವ, ದೇವಬ್ರಾಹ್ಮಣರಲ್ಲಿ ಭಕ್ತಿಯಿಲ್ಲದವ, ದೈವಕಟ್ಟಳೆಗೆ ವ್ಯತಿರಿಕ್ತವಾಗಿ ನಡೆಯತಕ್ಕವ, ಅದೃಷ್ಟವನ್ನೇ ನೆಚ್ಚಿ ಕೆಲಸಮಾಡತಕ್ಕವ, ಕ್ಷಾಮಡಾಮರಗಳಿಗೆ ಸಿಲುಕಿ ಪಾಡುಪಟ್ಟವ, ಸೇನೆಯಲ್ಲಿ ಸರಳಿದವ, ಸ್ಥಾನಬಲವಿಲ್ಲದವ, ಸಮಯಬಲವಿಲ್ಲದವ, ಸತ್ಯವನ್ನಾಗಲಿ ಧರ್ಮವನ್ನಾಗಲಿ ಲೆಕ್ಕಿಸದವ, ಇಂತಿರುವ ಈ ಇಪ್ಪತ್ತು ಮಂದಿಯೊಂದಿಗೆ ಎಂತಹ ಸಂದರ್ಭದಲ್ಲಿಯೂ ಸಂಧಿಯ ಸುದ್ದಿಯನ್ನೇ ಎತ್ತಬಾರದು. ಏನಾದರೂ ಪಾಡುಪಟ್ಟು ಹೋರಾಡಲೇಬೇಕು. ಯುದ್ಧವು ಪ್ರಾರಂಭವಾಯಿತೆಂದರೆ, ಇವರು ತತ್ತರಗೊಂಡು ಹಗೆಯ ಕೈಗೆ ಸಿಕ್ಕುವರು. ಇದಕ್ಕೆ ಕಾರಣವೇನೆಂದರೆ, ಹುಡುಗನಿಗೆ ಪ್ರಭುಶಕ್ತಿಯು ಕಡಿಮೆ. ಅದರಿಂದ ಪ್ರಜೆಗಳು ಸಾಮಾನ್ಯವಾಗಿ ಅವನ ಪರವಾಗಿ ನಿಂತು ಹೋರಾಡುವುದಿಲ್ಲ. ಹೋರಾಡಿದವರಿಗೆ ಮನ್ನಣೆಯನ್ನೂ, ಹಿಂಜರಿದವರಿಗೆ ದಂಡನೆಯನ್ನೂ ವಿಧಿಸಲು, ಬಾಲಕನಿಗೆ ಸಾಮರ್ಥ್ಯವಿಲ್ಲ. ಇನ್ನು ಹಳೆಯ ರೋಗಿಗೂ ಮುದುಕನಿಗೂ ಉತ್ಸಾಹವಿರುವುದಿಲ್ಲ. ಅವರ ನಂಟರಿಷ್ಟರೇ ಆವರನ್ನು ಅಸಡ್ಡೆ ಮಾಡುವರು. ಈ ಕಾರಣದಿಂದ ಅವರೊಂದಿಗೆ ಒಡಂಬಡಿಕೆಗಿಂತಲೂ ಹೋರಾಟವೇ ಲೇಸು. ಬಂಧುಬಳಗಗಳು ಒತ್ತರಿಸಿದವನನ್ನು ಗೆಲ್ಲುವುದು ಸುಲಭ. ಅಂತಹ ಸಂದರ್ಭವೊದವಿದಾಗ ಆವನ ನಂಟರಿಷ್ಟರನ್ನು ನಮ್ಮ ಒಳಸಂಚಿನಲ್ಲಿ ಸೇರಿಸಿದೆವಾದರೆ, ಅವರೇ ಅವನನ್ನು ನಿರ್ಮೂಲಗೊಳಿಸುವರು. ಹೇಡಿಯು ತಾನಾಗಿಯೇ ಯುದ್ಧಕ್ಕೆ ಹಿಂಜರಿಯುವನು. ತಿರುಳಿಲ್ಲದ ಪರಿವಾರವನ್ನು ಮುಂದಿಟ್ಟು ಯುದ್ಧಮಾಡುವವನ ಗತಿಯೂ ಅಂತೆಯೇ ಸರಿ. ಯುದ್ಧವು ಘೋರವಾಗಿ ನಡೆಯತೊಡಗಿತೆಂದರೆ ಹೇಡಿಯೂ, ತಿರುಳಿಲ್ಲದ ಪರಿವಾರವೂ ತಾವಾಗಿಯೇ ಹಿಮ್ಮೆಟ್ಟಿ ಓಡಿ ಹೋಗುವರು."

"ಜಿಪುಣನು ಎಂತಹ ಆಪತ್ಕಾಲದಲ್ಲಿಯೂ ಕಾಸು ಬಿಚ್ಚುವುದಿಲ್ಲ. ಅವನಿಗೂ ಕಾಸಿಗೂ ಗಂಟು. ಈ ಕಾರಣದಿಂದ ಸೇವಕರು ಅವನಿಗಾಗಿ ಮುಂಬರಿದು ಹೋರಾಡಲೊಲ್ಲರು. ಅಂತಹ ಅರಸನ ಪರಿವಾರದವರು

ಇದ್ದಿರುಕಡೆಯ ದೊರೆಯಿಂದ ಬೇಕಾದಷ್ಟು ಹಣವನ್ನು ಪಡೆದು, ತಮ್ಮ ಒಡೆಯನ್ನು ತಾವೇ ಕೊನೆಗಾಣಿಸುವರು.''

"ಅನುರಾಗವಿಲ್ಲದ ಮಂತ್ರಿಗಳು ಯುದ್ಧಸಮಯದಲ್ಲಿ ತಮ್ಮ ಪ್ರಭುವನ್ನು ಅಸಡ್ಡೆಮಾಡುವರು. ವಿಷಯಲಂಪಟನನ್ನು ಗೆಲ್ಲುವುದು ದೊಡ್ಡ ಕೆಲಸವಲ್ಲ. ಮಂತ್ರಾಲೋಚನೆಯಲ್ಲಿ ಬಹುಮಂದಿಯ ಪಕ್ಷವನ್ನು ಅವಲಂಬಿಸದ ಅರಸು ಮಂತ್ರಿಗಳ ವಿದ್ವೇಷಕ್ಕೆ ಗುರಿಯಾಗುವನು. ಸ್ಥಿರಚಿತ್ತನಲ್ಲದ ಕಾರಣ, ಕಾರ್ಯಸಮಯದಲ್ಲಿ, ಮಂತ್ರಿಬಲವಿಲ್ಲದೆ, ಹಿಂದುಮುಂದು ತಿಳಿಯದೆ ಕಷ್ಟಪಡುವನು.''

ದೇವರಲ್ಲಿಯೂ ಭೂಸುರರಲ್ಲಿಯೂ ಭಕ್ತಿಯಿಲ್ಲದವನು ಧರ್ಮವಿಮುಖನೆನಿಸುವನು. ಸರ್ವಕಾಲದಲ್ಲಿಯೂ ಧರ್ಮವೇ ಜಯಶೀಲವೂ ಬಲಶಾಲಿಯೂ ಆಗಿರುವುದರಿಂದ, ಅಂತಹವನು ತಾನಾಗಿಯೇ ಹಾಳಾಗುವನು. ಅದೃಷ್ಟಹೀನನ ಪಾಡು ಅಂತೆಯೇ ಸರಿ. ಇನ್ನು ಮನುಷ್ಯನ ಏಳಿಗೆಗೂ ಕೇಡಿಗೂ ಅದೃಷ್ಟವೇ ಕಾರಣವೆಂಬುದಾಗಿ ನಂಬಿರತಕ್ಕವನು ಯಾವ ಪ್ರಯತ್ನವನ್ನೂ ಮಾಡದೆಯೇ ಸುಮ್ಮನೆ ಕುಳಿತಿರುವನು.''

"ಕ್ಷಾಮಡಾಮರಗಳಿಂದ ಕಷ್ಟಪಟ್ಟವನು ಮೊದಲೇ ಹಾಳಾದಂತೆಯೇ ಸರಿ. ಅಂತಹವನನ್ನು ಗೆಲ್ಲುವುದಕ್ಕೆ ವಿಶೇಷ ಶ್ರಮವು ಬೇಕಾಗಿರುವುದಿಲ್ಲ. ಸೇನೆಯಲ್ಲಿ ನರಳಿದವನಿಗೆ ಹೋರಾಡಲು ಉತ್ಸಾಹವೂ ಶಕ್ತಿಯೂ ಸಾಲದು. ಸ್ಥಾನಬಲವಿಲ್ಲದವನನ್ನು ಹುಲು ಹಗೆಗಳೂ ಸುಲಭವಾಗಿ ಗೆಲ್ಲಬಹುದು. ಮೊಸಳೆಯು ಎಷ್ಟೇ ಚಿಕ್ಕದಾದರೂ ನೀರಿನಲ್ಲಿರುವಾಗ ಎಂತಹ ಮದಿಸಿದ ಆನೆಯನ್ನಾದರೂ ಸೆಳೆಯಬಲ್ಲುದು. ಹಲವು ಮಂದಿಯ ಸಂಗಡ ವೈರವನ್ನು ಬಳೆಯಿಸಿದವನು, ದಿಕ್ಕುತೋರದೆ ಹೆದರಿಕೆಯಿಂದ ನಡುಗುತ್ತ, ಗಿಡುಗಗಳ ಹಿಂಡಿಗೆ ಸಿಲುಕಿದ ಪಾರಿವಾಳದಂತೆ ಹಾಳಾಗುವನು.''

"ಸಮಯ ಬಲವಿಲ್ಲದ ಸೇನೆಯೊಂದಿಗೆ ಹೋರಾಡತಕ್ಕ, ಅನುಕೂಲ ಸಮಯವುಳ್ಳ ಸೇನೆಯು ಅದನ್ನು ಸುಲಭವಾಗಿ ನಿರ್ಮೂಲಗೊಳಿಸುವುದು. ಇರುಳಿನಲ್ಲಿ ಕಣ್ಣುಕಾಣದ ಕಾಗೆಯನ್ನು ಗೂಗೆಯು ಕೊಲ್ಲುವುದೇ ಇದಕ್ಕೆ ಉದಾಹರಣೆ. ಸತ್ಯವನ್ನೂ ಧರ್ಮವನ್ನೂ ಲಕ್ಷ್ಯಮಾಡದವನ ಸಂಗಡ

ಎಂದಿಗೂ ಸಂಧಿಮಾಡಿಕೊಳ್ಳಲೇ ಬಾರದು. ಒಂದುವೇಳೆ ಸಂಧಿಮಾಡಿ ಕೊಂಡರೂ ಅವನ ದುರುಳತನವು ಅವನನ್ನು ಸುಮ್ಮನೆ ಇರಗೊಳಿಸದು.''

''ಇತ್ತ ಲಾಲಿಸಬೇಕು. ಸಂಧಿ, ವಿಗ್ರಹ, ಆಸನ, ಯಾನ, ದ್ವೈಧೀಭಾವ, ಸಮಾಶ್ರಯ ಎಂಬ ಆರು ಗುಣಗಳು; ಕಾರ್ಯಾರಂಭೋಪಾಯ, ಪುರುಷ ದ್ರವ್ಯಸಂಪತ್ತಿ, ದೇಶಕಾಲವಿಭಾಗ, ವಿನಿಪಾತಪ್ರತೀಕಾರ, ಕಾರ್ಯಸಿದ್ಧಿ ಎಂಬ ಐದು ಮಂತ್ರಾಂಗಗಳು; ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳು; ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿ ಎಂಬ ಮೂರು ಶಕ್ತಿಗಳು—ಇವುಗಳನ್ನು ಅನುದಿನವೂ ಯೋಚಿಸುತ್ತಿದ್ದು ಸಮಯ ವರಿತು ಹೋರಾಡಬೇಕು.''

''ನಮ್ಮ ಪ್ರಾಣಗಳನ್ನೇ ಸೂರೆಕೊಟ್ಟರೂ ಜಯವು ದೊರೆಯುವುದು ಕಷ್ಟ. ಅಂತಹ ಜಯಲಕ್ಷ್ಮಿಯು ತಾನು ಚಪಲೆಯಾಗಿದ್ದರೂ ನೀತಿನಿಪುಣರ ಮನೆಯ ಬಾಗಿಲಲ್ಲಿ ಕಾದುಬಿದ್ದಿರುವಳು. ಯಾವಾತನು ತಾನು ಗಳಿಸಿದ ಹಣವನ್ನು ಸಮಾನವಾಗಿ ಹಂಚಿಡುವನೋ, ಯಾವಾತನ ಗೂಢಚಾರರು ಹಗೆಯರಸರಿಗೆ ಗೋಚರಿಸದಂತೆ ಗೂಢವಾಗಿ ಕಾರ್ಯಗಳನ್ನು ನೆರವೇರಿಸು ವರೋ, ಯಾವ ಅರಸನ ಮಂತ್ರಶಕ್ತಿಯು ಎಂದಿಗೂ ಹೊರಬೀಳದಿರು ವುದೋ, ಯಾವ ರಾಜನು ಎಂತಹ ಸಮಯದಲ್ಲಿಯೂ ಯಾರ ವಿಷಯ ದಲ್ಲಿಯೂ ಅಪ್ರಿಯ ವಾರ್ತೆಯನ್ನು ನುಡಿಯುವುದಿಲ್ಲವೋ ಆತನು ಸಮುದ್ರವಸನೆಯಾದ ಭೂದೇವಿಯನ್ನು ಶಾಶ್ವತವಾಗಿ ತನ್ನ ಆಳ್ವಿಕೆಗೆ ಒಳ ಪಡಿಸಿಕೊಳ್ಳುವನು.''

''ಸಂಧಿಯನ್ನು ಮಾಡಿಕೊಳ್ಳುವುದೇ ಲೇಸೆಂಬುದಾಗಿ ಮಂತ್ರಿಯು ಈಗ ಹೇಳುತಿದ್ದರೂ, ತಾನು ಜಯಶೀಲನಾಗಿರುವೆನೆಂಬ ಹೆಮ್ಮೆಯಿಂದ ರಾಜನು ಒಡಂಬಡಿಕೆಗೆ ಸಮ್ಮತಿಸಲಾರನು. ಆ ಕಾರಣ ನಾವು ಈಗ ಭೇದೋಪಾಯ ವನ್ನು ಕೈಕೊಂಡು, ನಮ್ಮ ಕಾರ್ಯವನ್ನು ಸಾಧಿಸಬೇಕು. ಸಿಂಹಳದ ಅರಸ ನಾದ ಮಹಾಬಲನು ನಮಗೆ ಆಪ್ತಸ್ನೇಹಿತನಾಗಿರುವನು. ಆತನು ಈಗ ಜಂಬೂದ್ವೀಪದಲ್ಲಿ ಕಲಹವನ್ನು ಹೂಡಬೇಕು. ಏಕೆಂದರೆ:—

''ವೀರಪುರುಷನು, ಐಕಮತ್ಯದಿಂದ ಹೋರಾಡಲು ಸಿದ್ಧವಾಗಿರುವ ಸೇನೆ ಯೊಡಗೂಡಿ, ತನ್ನನ್ನು ಜಾಗರೂಕತೆಯಿಂದ ಕಾಪಾಡಿಕೊಂಡು, ನಾಲ್ಕಾ

ಕಡೆಯಿಂದ ಹಗೆಯನ್ನು ಇಕ್ಕಟ್ಟಿಗೆ ಸಿಕ್ಕಿಸಿ ಪೀಡಿಸಬೇಕು. ಹೀಗೆ ಮುತ್ತಿಗೆಯು ಪ್ರಬಲವಾಗಿ ಅತ್ತಿತ್ತ ಅಲುಗುವುದಕ್ಕೆ ಶಕ್ಯವಿಲ್ಲದೆ ಕಿರು ಕುಳಕ್ಕೆ ಒಳಗಾದ ಹಗೆಯು ತಾನಾಗಿಯೇ ಶತ್ರುಪಕ್ಷದ ಕೈಸೇರುವನು. ಲೋಹವು ಚೆನ್ನಾಗಿ ಕಾದಿರುವಾಗ ಅದನ್ನು ಮತ್ತೊಂದು ಲೋಹನೊಡನೆ ಬೆಸೆಯುವುದು ಬಹಳ ಸುಲಭ'' ಎಂಬುದಾಗಿ ಮಂತ್ರಿಯು ಬಿನ್ನಯಿಸಲು, ಅರಸನು "ಅಂತೆಯೇ ಆಗಲಿ'' ಎಂದು ಹೇಳಿ, ಒಂದು ಪತ್ರಿಕೆಯನ್ನು ಬರೆದು ವಿಚಿತ್ರನೆಂಬ ಕೊಕ್ಕರೆಯನ್ನು ಕರೆದು ಅವನ ಕೈಗೆ ಆ ಪತ್ರಿಕೆಯನ್ನು ಕೊಟ್ಟು, ಅವನನ್ನು ಸಿಂಹಳದ್ವೀಪಕ್ಕೆ ಕಳುಹಿದನು.''

ಬಳಿಕ ಗೂಢಚಾರನು ಮಯೂರರಾಜನ ಬಳಿಗೆ ಬಂದು ಹೀಗೆ, ಪಿಜ್ಞಾಪಿಸಿದನು:—ದೇವಾ! ಮೇಘವರ್ಣನು ಬಹಳ ಕಾಲ ಅಲ್ಲಿದ್ದ ವನು. ಅವನನ್ನು ಕರೆತರಿಸಿ 'ಹಿರಣ್ಯಗರ್ಭರಾಜನು ಸಂಧಿಗೆ ತಕ್ಕವನೋ ಅಲ್ಲವೋ ಎಂಬ ವಿಷಯವನ್ನು ಅವನ ಮೂಲಕ ತಿಳಿಯಬಹುದು.''

"ತರುವಾಯ ಅರಸನು ಮೇಘವರ್ಣನನ್ನು ಬರಮಾಡಿಸಿ "ಮೇಘ ವರ್ಣನೇ! ಆ ಹಿರಣ್ಯಗರ್ಭನ ಸ್ವಭಾವವನ್ನು ನೀನು ಚೆನ್ನಾಗಿ ಬಲ್ಲೆಯಾ? ಆತನ ಮಂತ್ರಿಯಾದ ಚಕ್ರವಾಕನ ನಡೆವಳಿಯು ಎಂತಹುದು?'' ಎಂಬು ದಾಗಿ ಪ್ರಶ್ನೆಮಾಡಲಾಗಿ, ಮೇಘವರ್ಣನು "ಸ್ವಾಮೀ! ಆ ಹಿರಣ್ಯಗರ್ಭ ಮಹಾರಾಜನು ಸಕಲಗುಣಸಂಪನ್ನನು. ಧರ್ಮಪುರುಷನ ಅವತಾರವೆನ್ನ ಬಹುದು. ಸತ್ಯಸಂಧನು. ಅತ್ಯಂತ ಧರ್ಮಾತ್ಮನು. ಇನ್ನು ಚಕ್ರವಾಕ ನಂತಹ ಮಂತ್ರಿಯನ್ನು ಎಲ್ಲಿಯೂ ನೋಡಿಯೂ ಇಲ್ಲ, ಕೇಳಿಯೂ ಇಲ್ಲ'' ಎಂಬುದಾಗಿ ಬಿನ್ನಯಿಸಿದನು. "ಹಾಗಾದರೆ ಅವನು ಮೋಸಹೋದು ದಾದರೂ ಹೇಗೆ?'' ಎಂಬುದಾಗಿ ಅರಸನು ಪ್ರಶ್ನೆಮಾಡಲಾಗಿ, ಮೇಘ ವರ್ಣನು ಈ ಪರಿ ಹೇಳತೊಡಗಿದನು:—

"ನಂಬಿದವರನ್ನು ಮೋಸಗೊಳಿಸುವುದೂ ಒಂದು ಜಾಣ್ಮೆ ಎಂದರೆ ಹೇಗೆ? ಮಡಿಲಲ್ಲಿ ಮಲಗಿ ನಿದ್ದೆಮಾಡುವವನನ್ನು ಕೊಲ್ಲುವುದೂ ಪೌರು ಷವೇ? ಆ ಮಂತ್ರಿಯು ನನ್ನ ಮೋರೆಯನ್ನು ಕಂಡೊಡನೆಯೇ ನನ್ನ ಯೋಗ್ಯತೆಯನ್ನು ಕಂಡುಹಿಡಿದು ಅರಸನಿಗೆ ಅರುಹಿದನು. ಆದರೆ ಆ ಅರ ಸನು ಮಹಾತ್ಮನು. ಅದರಿಂದಲೇ ಅವನು ಮೋಸಹೋದನು.''

ದುರುಳನನ್ನು ತನ್ನಂತೆಯೇ ಸತ್ಯವಾದಿಯೆಂಬುದಾಗಿ ನಂಬಿದವನು, ಮೋಸಗಾರರ ಮಾತಿನಿಂದ ಮೇಕೆಯನ್ನು ನೀಗಿಕೊಂಡ ಬ್ರಾಹ್ಮಣನಂತೆ ಕೆಡುವನು".

"ಅದು ಹೇಗೆ?" ಎಂಬುದಾಗಿ ಅರಸನು ಪ್ರಶ್ನೆಮಾಡಲಾಗಿ ಮೇಘ ವರ್ಣನು ಹೇಳತೊಡಗಿದನು.

### ೫ನೆಯ ಕಥೆ

ಗೌತಮ ಮುನಿಯ ತಪೋವನದಲ್ಲಿ ಯಜ್ಞವನ್ನು ಮಾಡಲು ಸಂಕಲ್ಪಿಸಿದ ಒಬ್ಬ ಬ್ರಾಹ್ಮಣನು ಹತ್ತಿರವಿದ್ದ ಒಂದು ಹಳ್ಳಿಗೆ ಹೋಗಿ ತನಗೆ ಬೇಕಾದ ಮೇಕೆಯನ್ನು ಬೆಲೆಗೆ ಕೊಂಡು, ಹೆಗಲ ಮೇಲೆ ಹೊತ್ತು ಬರು ತ್ತಿದ್ದನು. ನಡುದಾರಿಯಲ್ಲಿ ಮೂವರು ಮೋಸಗಾರರು ಇವನನ್ನು ಕಂಡು "ಯಾವುದಾದರೊಂದು ಉಪಾಯದಿಂದ ಈ ಮೇಕೆಯನ್ನು ನಾವು ಕಸು ಗೊಳ್ಳಬೇಕು. ನಮ್ಮ ಬುದ್ಧಿಚಾತುರ್ಯವನ್ನು ಉಪಯೋಗಿಸುವುದಕ್ಕೆ ಇದೇ ತಕ್ಕ ಸಮಯ" ಎಂಬುದಾಗಿ ಯೋಚಿಸಿ, ದಾರಿಯುದ್ದಕ್ಕೂ ಒಂದು ಹರದಾರಿಗೆ ಒಬ್ಬನಂತೆ ಮೂವರು ಮೂರು ಮರಗಳ ಅಡಿಯಲ್ಲಿ ಕುಳಿತು ಆ ಬ್ರಾಹ್ಮಣನನ್ನೇ ಇದಿರುನೋಡುತ್ತಿದ್ದರು. ಆ ಭೂಸುರನು ಹತ್ತಿರ ಬಂದ ಕೂಡಲೇ ಮೊದಲನೆಯವನು—"ಏನಯ್ಯಾ! ಹಾರುವಯ್ಯಾ! ನಾಯಿ ಯನ್ನು ಹೆಗಲ ಮೇಲೆ ಹೊತ್ತಿರುವೆಯಲ್ಲಾ?" ಎಂದನು. ಅದನ್ನು ಕೇಳಿ ಆ ದ್ವಿಜನು "ಇದು ಶ್ವಾನವಲ್ಲ, ಆಡು; ಯಜ್ಞದ ಸಲುವಾಗಿ ಕೊಂಡೊಯ್ಯುವೆನು" ಎನ್ನುತ್ತ ಮುಂದಕ್ಕೆ ನಡೆದನು. ಬಳಿಕ ಎರಡನೆ ಯವನೂ ಅಂತೆಯೇ ಪ್ರಶ್ನೆಮಾಡಲಾಗಿ ಈ ಬ್ರಾಹ್ಮಣನಿಗೆ ಸಂದೇಹ ವುಂಟಾಗಿ, ಆ ಮೇಕೆಯನ್ನು ಭುಜದಿಂದ ಕೆಳಕ್ಕೆ ಇಳುಹಿ ಚೆನ್ನಾಗಿ ನೋಡಿ, ಮರಳಿ ಹೆಗಲ ಮೇಲೆ ಹೊತ್ತು ಮೊದಲನೆಯವನಿಗೆ ಹೇಳಿ ದಂತೆಯೇ ಉತ್ತರಕೊಟ್ಟು ಮುಂದಕ್ಕೆ ಹೊರಟನು. ವಿದ್ಯಾವಂತರೂ ದುರುಳರ ಮಾತಿಗೆ ಮರುಳಾಗಿ ಸಂಶಯಗ್ರಸ್ತರಾಗುವರು. ಅವರ ಮಾತನ್ನು ಕೇಳಿದವರು ಚಿತ್ರಕರ್ಣನಂತೆ ಸಾಯುವರು." ಅದು ಹೇಗೆಂದು ಅರಸನು ಕೇಳಲಾಗಿ ಮೇಘವರ್ಣನು ಹೀಗೆಂದನು.

## ಉಪಕಥೆ

ಒಂದು ಕಾಡಿನಲ್ಲಿ ಮದೋತ್ಕಟವೆಂಬ ಸಿಂಹವಿದ್ದಿತು. ಅದಕ್ಕೆ ಒಂದು ಕಾಗೆ, ಒಂದು ಹುಲಿ, ಒಂದು ನರಿ, ಹೀಗೆ ಮೂವರು ಸೇವಕ ರಿದ್ದರು. ಆ ಮೂವರು ಒಂದು ದಿನ ಕಾಡಿನಲ್ಲಿ ತಿರುಗುತ್ತಿದ್ದಾಗ ಒಂದು ಒಂಟೆಯನ್ನು ನೋಡಿ ಪ್ರಶ್ನೆಮಾಡಲಾಗಿ, ಅದು ತನ್ನ ವೃತ್ತಾಂತವನ್ನೆಲ್ಲ ವಿವರಿಸಿತು. ಬಳಿಕ ಈ ಮೂರು ಮೃಗಗಳೂ ಅದನ್ನು ತಮ್ಮ ರಾಜನಾದ ಸಿಂಹದ ಬಳಿಗೆ ಕರೆತಂದುವು. ಮೃಗರಾಜನು ಆ ಆಗಂತುಕನಿಗೆ ಅಭಯ ವನ್ನಿತ್ತು ಚಿತ್ರಕರ್ಣನೆಂಬುದಾಗಿ ನಾಮಕರಣಮಾಡಿ ತನ್ನ ಬಳಿ ಇರಿಸಿ ಕೊಂಡಿತು. ಹೀಗೆಯೇ ಕೆಲವು ದಿನಗಳು ಕಳೆಯಲಾಗಿ ಒಂದು ದಿನ ಸಿಂಹವು ದೇಹದಲ್ಲಿ ಬೇನೆ ಇದ್ದುದರಿಂದಲೂ, ಬಹಳವಾಗಿ ಮಳೆ ಸುರಿಯುತ್ತಿದ್ದುದರಿಂದಲೂ, ಎಲ್ಲಿಯೂ ಆಹಾರವು ದೊರೆಯದೆ ಹಸಿವೆ ಯಿಂದಲೂ, ಬೇನೆಯಿಂದಲೂ, ನರಳುತ್ತ ಬಿದ್ದಿದ್ದಿತು. ಆಗ ಕಾಗೆ, ಹುಲಿ, ನರಿಗಳು ಹೀಗೆ ಯೋಚಿಸಿದುವು:—"ದೊರೆಯು ಚಿತ್ರಕರ್ಣನನ್ನೇ ಕೊಲ್ಲುವ ಹಾಗೆ ಉಪಾಯ ಮಾಡೋಣ! ಮುಳ್ಳು ಮೇಯುವ ಈ ಪ್ರಾಣಿಯಿಂದ ನಮಗೆ ಆಗಬೇಕಾದುದೇನು?" ಆಗ ಹುಲಿಯು—"ನಮ್ಮ ಸ್ವಾಮಿಯು ಇದಕ್ಕೆ ಅಭಯಪ್ರದಾನ ಮಾಡಿರುವನು. ಇಂತಿರುವಲ್ಲಿ, ನಾವು ಪ್ರಭು ವನ್ನು ಈ ಕೆಲಸದಲ್ಲಿ ಪ್ರವರ್ತಿಸುವಂತೆ ಹೇಳುವುದು ಸಾಧ್ಯವೇ? ಆತ ನಾದರೂ ಈ ಕಾರ್ಯವನ್ನು ಅನುಮೋದಿಸಿ ನಮ್ಮ ಕೋರಿಕೆಯಂತೆ ಈ ಚಿತ್ರಕರ್ಣನನ್ನು ಕೊಲ್ಲುವನೇ?" ಎಂದಿತು. ಆ ಮಾತನ್ನು ಕೇಳಿ ಕಾಗೆಯು "ಈಗ ನಮ್ಮ ರಾಜನು ತುಂಬ ಇಳಿದುಹೋಗಿರುವನು. ಮೈಯೆಲ್ಲವು ಬತ್ತಿಹೋಗಿದೆ. ಆ ಕಾರಣ ಈ ಸಮಯದಲ್ಲಿ ಇಂತಹ ಪಾಪಕಾರ್ಯಕ್ಕೆ ಹಿಂಜರಿಯಲಾರನು. ಹೇಗೆಂದರೆ-ಹಸಿವೆಯಿಂದ ಪೀಡಿತೆ ಯಾದ ಜನನಿಯು ತನ್ನ ಕಂದನನ್ನೂ ಬಿಟ್ಟು ಓಡುವಳು. ಹಸಿದ ಹಾವು ತನ್ನ ಮೊಟ್ಟೆಯನ್ನೇ ನುಂಗುವುದು. ಕ್ಷುಧಿತನು ಯಾವ ಪಾಪವನ್ನಾದರೂ ಮಾಡುವನು. ಹಸಿವೆಯಿಂದ ಪೀಡಿತನಾದವನಿಗೆ ಕರುಣೆ ಇರುವುದಿಲ್ಲ. ಕೊಬ್ಬಿದವನೂ, ಅಮಲು ಪದಾರ್ಥವನ್ನು ಸೇವಿಸಿದವನೂ, ಹುಚ್ಚನೂ, ಬಳಲಿದವನೂ, ಮುನಿದವನೂ, ಹಸಿದವನೂ, ಜಿಪುಣನೂ, ಹೆದರಿದ

ವನೂ, ಆತುರಗಾರನೂ, ಕಾಮುಕನೂ ಧರ್ಮವನ್ನು ಲೆಕ್ಕಿಸುವುದಿಲ್ಲ" ಎಂದಿತು.

ಈ ರೀತಿಯಾಗಿ ನಿಶ್ಚಯಿಸಿ, ಅವು ಮೂರೂ ಸಿಂಹದ ಬಳಿಗೆ ಬಂದುವು. ಆಗ ಸಿಂಹವು "ಏನಾದರೂ ಬೇಟೆ ಸಿಕ್ಕಿತೇ?" ಎಂದು ಪ್ರಶ್ನೆ ಮಾಡಲಾಗಿ, "ಸ್ವಾಮಿಾ! ಎಷ್ಟು ಕಷ್ಟಪಟ್ಟು ಹುಡುಕಿದರೂ ಯಾವ ದೊಂದು ಬೇಟೆಯೂ ದೊರೆಯಲಿಲ್ಲ" ಎಂಬುದಾಗಿ ಕಾಗೆಯು ಉತ್ತರ ಕೊಟ್ಟಿತು. "ಹಾಗಾದರೆ ಈಗ ಬದುಕುವ ಉಪಾಯವಾದರೂ ಯಾವುದು?" ಎಂಬುದಾಗಿ ಸಿಂಹವು ಪ್ರಶ್ನೆಮಾಡಿತು. "ಸ್ವಾಧೀನದಲ್ಲಿ ರುವ ಆಹಾರವನ್ನು ಬಿಟ್ಟ ಕಾರಣ ಈ ಕಷ್ಟವು ಒದಗಿತು" ಎಂದು ಕಾಗೆಯು ಹೇಳಲಾಗಿ, "ನಮ್ಮ ಆಧೀನದಲ್ಲಿರುವ ಆಹಾರವಾದರೂ ಯಾವುದು?" ಎಂದು ಸಿಂಹವು ಕೇಳಿತು. ಆಗ ಕಾಗೆಯು "ಚಿತ್ರಕರ್ಣನು" ಎಂಬುದಾಗಿ ಮೃಗರಾಜನ ಕಿವಿಯಲ್ಲಿ ಹೇಳಿತು. ಆ ಮಾತನ್ನು ಕೇಳಿ, ಕಂಠೀರವವು ನೆಲವನ್ನು ತಾಗಿ, ಕಿವಿಗಳನ್ನು ಮುಚ್ಚಿಕೊಂಡು—"ದೇವ, ದೇವಾ! ನಾನಾಗಿಯೇ ಅಭಯಪ್ರದಾನ ಮಾಡಿ ನನ್ನಲ್ಲಿ ನಿಲ್ಲಿಸಿಕೊಂಡೆನು. ಈಗ ಇಂತಹ ಅಕಾರ್ಯವನ್ನು ಮಾಡಬಹುದೇ? ಬಗೆಬಗೆಯ ದಾನ ಗಳಲ್ಲಿ ಅಭಯದಾನವು ಅತ್ಯುತ್ತಮವಾದ ಮಹಾದಾನವೆನಿಸುವುದು. ಗೋದಾನ, ಭೂದಾನ, ಅನ್ನದಾನ, ಉದಕದಾನ ಮುಂತಾದುವು ಅಭಯ ದಾನಕ್ಕೆ ಎಂದಿಗೂ ಸಮಾನವೆನಿಸಲಾರವು. ಎಲ್ಲರ ಬಯಕೆಗಳನ್ನು ನೆರವೇರಿಸುತ್ತ, ಅಶ್ವಮೇಧಯಾಗವನ್ನು ಮಾಡಿ ಪಡೆಯುವಷ್ಟು ಫಲವನ್ನು ಮರೆಹೊಕ್ಕ ಒಂದು ಪ್ರಾಣಿಯನ್ನು ಕಾಪಾಡುವುದರಿಂದ ಸಂಪಾದಿಸ ಬಹುದು" ಎಂದಿತು.

ಆಗ ಕಾಗೆಯು "ಪ್ರಭುವು ಅದನ್ನು ತಾನಾಗಿಯೇ ಕೊಲ್ಲ ಕೆಲಸ ವಿಲ್ಲ. ಈ ಪ್ರಾಣಿಯೇ ತನ್ನನ್ನು ನಿಮಗೆ ಅರ್ಪಿಸುವಂತೆ ನಾವು ಮಾಡು ವೆವು" ಎನಲು, ಕಂಠೀರವವು ಆ ಮಾತಿಗೆ ಸುಮ್ಮನಿದ್ದಿತು. ತರುವಾಯ ವಾಯಸವು ತನಗೆ ಅವಕಾಶ ದೊರೆಯಿತೆಂಬ ಸಂತೋಷದಿಂದ ಮಿಕ್ಕವುಗಳ ನ್ನೆಲ್ಲ ಒಟ್ಟುಗೂಡಿಸಿ, ಸಮಿಾಪಕ್ಕೆ ಕರೆತಂದು ಕಪಟೋಪಾಯವನ್ನು ಹೂಡಿ ಇಂತೆಂದಿತು:—"ದೇವಾ! ಎಷ್ಟು ಪಾಡುಪಟ್ಟರೂ ಆಹಾರವು ದೊರೆಯ

ಲಿಲ್ಲ. ಪ್ರಭುಗಳು ಈ ರೀತಿ ಹಸಿದು ಬಳಲುವುದು ತರವಲ್ಲ. ಆ ಕಾರಣ ಈಗ ನನ್ನ ಮಾಂಸವನ್ನು ತಿಂದು ಸಂತುಷ್ಟರಾಗಬಹುದು. ಏಕೆಂದರೆ, ಈ ಸಕಲ ಸಂಪತ್ತಿಗೆ ಸ್ವಾಮಿಯೇ ಮುಖ್ಯ ಕಾರಣವಷ್ಟೆ! ಬುಡವು ಭದ್ರ ವಾಗಿರುವ ವರೆಗೆ ಮರಗಳೂ ಫಲವನ್ನು ನೀಡುವುವು'' ಎಂದಿತು.

ಆಗ ಸಿಂಹವು "ಇಂತಹ ಕೆಲಸವನ್ನು ಮಾಡುವುದಕ್ಕಿಂತ ಆಹಾರ ವಿಲ್ಲದೆ ಸಾಯುವುದು ಲೇಸು'' ಎಂದು ಹೇಳಲಾಗಿ, ನರಿಯು ಕಾಗೆ ಯಂತೆಯೇ ತನ್ನ ದೇಹವನ್ನು ಸಿಂಹಕ್ಕೆ ಸಮರ್ಪಿಸಿತು. ಕೇಸರಿಯು ಅದಕ್ಕೂ ಸಮ್ಮತಿಸಲಿಲ್ಲ. ಬಳಿಕ ಹುಲಿಯು "ಪ್ರಭೋ! ನನ್ನ ದೇಹದಿಂದ ತಮ್ಮ ಪ್ರಾಣಗಳನ್ನು ದಣಿಸಿಕೊಳ್ಳಬಹುದು'' ಎಂದಿತು. "ಛೀ! ಛೀ! ಎಂದಿಗೂ ಅಂತಹ ಕೆಲಸವು ಯುಕ್ತವೆನಿಸಲಾರದು'' ಎಂದು ಕಂಠೀರವವು ನುಡಿಯಲಾಗಿ, ಅಷ್ಟರಲ್ಲಿ ಭರವಸೆಯನ್ನು ಪಡೆದಿದ್ದ ಉಷ್ಟ್ರವು ಮಿಕ್ಕವು ಗಳಂತೆಯೇ ತನ್ನ ಶರೀರವನ್ನು ಮೃಗರಾಜನ ಆಹಾರಾರ್ಥವಾಗಿ ಅರ್ಪಿ ಸಿತು. ಅದರ ಬಾಯಿಂದ ಮಾತು ಹೊರಡುತ್ತಿರುವಾಗಲೇ ಹುಲಿಯು ಒಂಟೆಯ ಹೊಟ್ಟೆಯನ್ನು ಸಿಗಿದು ಕೊಂದಿತು. ಬಳಿಕ ಎಲ್ಲವೂ ಅದನ್ನು ತಿಂದುವು. ಆ ಕಾರಣ ವಿದ್ಯಾವಂತರೂ ದುರುಳರ ಮಾತಿಗೆ ಮರುಳಾಗಿ ಸಂಶಯಗ್ರಸ್ತರಾಗುವರು ಎಂಬುದಾಗಿ ಹೇಳಿದೆನು.

ಬಳಿಕ ಆ ಬ್ರಾಹ್ಮಣನು ಮುಂದೆ ನಡೆತರಲಾಗಿ ಮೂರನೆಯ ವಂಚ ಕನು "ಏನಯ್ಯಾ! ಶುನಕವನ್ನು ಹೆಗಲ ಮೇಲೆ ಹೊತ್ತಿರುವೆಯಲ್ಲಾ!'' ಎಂದನು. ಮಾತನ್ನು ಕೇಳಿದ ಕೂಡಲೇ "ಇದು ದಿಟವಾಗಿಯೂ ನಾಯಿಯೇ ಸರಿ'' ಎಂಬುದಾಗಿ ನಿಶ್ಚಯಿಸಿ, ಆ ಮೇಕೆಯನ್ನು ಅಲ್ಲಿಯೇ ಬಿಟ್ಟು ತನ್ನ ಮನೆಗೆ ಹೋದನು. ಅನಂತರ ಆ ಧೂರ್ತರು ಅದನ್ನು ಕೊಂಡೊಯ್ದು ಅನುಭವಿಸಿದರು. ಹೀಗಿರುವುದರಿಂದ ದುರುಳನನ್ನು ತನ್ನಂತೆಯೇ ಸತ್ಯವಾದಿಯೆಂಬುದಾಗಿ ನಂಬಿದವನು ಮೋಸಗಾರರ ಮಾತಿ ನಿಂದ ಮೇಕೆಯನ್ನು ನೀಗಿಕೊಂಡ ಬ್ರಾಹ್ಮಣನಂತೆ ಕೆಡುವನು.''

ಆಗ ಚಿತ್ರವರ್ಣರಾಜನು 'ಎಲೆ ಮೇಘವರ್ಣನೇ! ನೀನು ಹಗೆಗಳ ನಡುವೆ ಬಹಳ ಕಾಲವಿದ್ದೆಯಲ್ಲವೇ? ಅಲ್ಲಿ ನೀನು ಕಾಲಹರಣ ಮಾಡಿದುದು ಹೇಗೆ? ಅವರಲ್ಲಿ ಒಳ್ಳೆಯವನೆಂಬ ಹೆಸರುವಾಸಿಯನ್ನು ಯಾವ ರೀತಿಯಿಂದ ಸಂಪಾ

ದಿಸಿದೆ?' ಎಂಬುದಾಗಿ ಪ್ರಶ್ನೆಮಾಡಲಾಗಿ, ಮೇಘವರ್ಣನು ಇಂತು ಹೇಳ ತೊಡಗಿದನು:–"ಸ್ವಾಮಿ! ದಣಿಯ ಕೆಲಸವನ್ನು ನೆರವೇರಿಸುವುದಕ್ಕಾಗಿಯೂ ತನ್ನ ಪ್ರಯೋಜನವನ್ನು ಈಡೇರಿಸಿಕೊಳ್ಳುವುದಕ್ಕಾಗಿಯೂ ಪ್ರಾಣಿಯು ಯಾವ ಕೆಲಸವನ್ನಾದರೂ ಮಾಡಲೇ ಬೇಕು. ಇತ್ತ ಲಾಲಿಸಬೇಕು. ಅರಸನೆ! ಸುಡುವುದಕ್ಕಾಗಿ ತಂದ ಅಡಿಗಬ್ಬನ್ನು ತಲೆಯ ಮೇಲೆ ಹೊರಿಕಟ್ಟಿ ತರುವುದಿಲ್ಲವೇ? ಹೊಳೆಯ ನೀರಿನ ಅಲೆಯು ಮರದ ಪಾದ (ಬುಡ) ವನ್ನು ತೊಳೆಯುತ್ತಿರುವಂತೆಯೇ ಅದನ್ನು ಉರುಳಿಸುವುದು. ಇನ್ನು ಬುದ್ಧಿಶಾಲಿಯು ತನ್ನ ಕಾರ್ಯಸಾಧನೆಗಾಗಿ ಹಗೆಯನ್ನಾದರೂ ಹೆಗಲ ಮೇಲೆ ಹೊರುವನು. ಮುದಿ ಹಾವು ಮಂಡೂಕಗಳನ್ನು ಅಂತೆಯೇ ಕೊನೆಗಾಣಿಸಿತಲ್ಲವೇ?" ಎಂದಿತು. ಆ ಕಥೆಯನ್ನು ಬಣ್ಣಿಸುವಂತೆ ಚಿತ್ರವರ್ಣನು ಕೇಳಲಾಗಿ ಮೇಘವರ್ಣನು ಹೇಳತೊಡಗಿದನು.

## ೬ನೆಯ ಕಥೆ

ಜೀರ್ಣಾರಣ್ಯದಲ್ಲಿ ಮಂದವಿಷವೆಂಬ ಒಂದು ಸರ್ಪವಿದ್ದಿತು. ಅದು ತುಂಬ ಮುದಿಯಾಗಿ ಆಹಾರವನ್ನು ಸಂಪಾದಿಸುವುದಕ್ಕೆ ಶಕ್ತಿಯಿಲ್ಲದೆ ಒಂದು ಸರೋವರದ ದಡದಲ್ಲಿ ಬಿದ್ದಿದ್ದಿತು. ದೂರದಲ್ಲಿದ್ದ ಒಂದು ಭೇಕವು ಅದನ್ನು ಕಂಡು "ಏನಿದು? ಆಹಾರವನ್ನೇ ಹುಡುಕಿಕೊಳ್ಳದಿರುವೆಯಲ್ಲಾ!" ಎಂಬುದಾಗಿ ಕೇಳಿತು. ಆ ಮಾತಿಗೆ ಸರ್ಪವು "ಹೋಗು! ಹೋಗು! ನಿರ್ಭಾಗ್ಯನಾದ ನನ್ನ ಸಮಾಚಾರವನ್ನು ಕಟ್ಟಿಕೊಂಡು ನಿನಗೇನು?" ಎಂದಿತು. ಅದರಿಂದ ಆ ಮಂಡೂಕವು ಮತ್ತಷ್ಟು ಅಚ್ಚರಿಗೊಂಡು, "ಅದೇನು? ಹೇಳಲೇ ಬೇಕು. ಹೇಳಿದಲ್ಲದೆ ಬಿಡೆನು" ಎಂಬುದಾಗಿ ಬಲಾತ್ಕರಿಸಿತು. ಆಗ ಭುಜಂಗವು ಈ ರೀತಿ ತನ್ನ ಕಥೆಯನ್ನು ಹೇಳತೊಡಗಿತು.

## ಉಪಕಥೆ

ಬ್ರಹ್ಮಪುರದಲ್ಲಿ ಕೌಂಡಿನ್ಯನೆಂಬ ಒಬ್ಬ ಶ್ರೋತ್ರಿಯನು ವಾಸವಾಗಿದ್ದನು. ಆತನಿಗೆ ಸಕಲ ಸದ್ಗುಣಭೂಷಿತನೂ, ಸೌಂದರ್ಯನಿಧಿಯೂ ಎನಿಸಿದ ಸುಮಾರು ಇಪ್ಪತ್ತು ವರ್ಷ ಪ್ರಾಯದ ಒಬ್ಬನೇ ಮಗನಿದ್ದನು. ನನ್ನ ದುರದೃಷ್ಟದಿಂದಲೂ, ಸಹಜವಾದ ಕ್ರೂರತನದಿಂದಲೂ, ನಾನು ಆತನನ್ನು

ಕಚ್ಚಿದೆನು. ಸುಶೀಲನೆಂಬ ಆ ತರುಣನು ಒಡನೆಯೇ ಮಡಿದನು. ಅದನ್ನು ಕಂಡು ಕೌಂಡಿನ್ಯನು ದುಃಖಭರದಿಂದ ಗೋಳಿಡುತ್ತ ನೆಲದ ಮೇಲೆ ಬಿದ್ದು ಹೊರಳಾಡ ತೊಡಗಿದನು. ಆಗ ಬ್ರಹ್ಮಪುರವಾಸಿಗಳೆಲ್ಲರೂ ಅಲ್ಲಿ ಬಂದು ನೆರೆದರು. ಅವರಲ್ಲಿ ಕಪಿಲನೆಂಬ ಸ್ನಾತಕನು (ಗುರುಕುಲವಾಸ ಮಾಡಿ ಬ್ರಹ್ಮಚರ್ಯವನ್ನು ಮುಗಿಸಿ, ಮದುವೆಗೆ ಸಿದ್ಧನಾಗಿರತಕ್ಕವನು) ಇಂತೆಂದನು:—

"ಅಯ್ಯಾ! ಕೌಂಡಿನ್ಯನೇ! ನೀನೊಬ್ಬ ಮೂಢನು. ಅಲ್ಲವಾದರೆ ಹೀಗೇಕೆ ಅಳುತಿದ್ದೆ? ಮಗುವು ಭೂಮಿಯಲ್ಲಿ ಹುಟ್ಟಿದ ಕೂಡಲೇ ಅನಿತ್ಯತೆಯೆಂಬುದು ಅದನ್ನು ಮೊತ್ತಮೊದಲು ಅಪ್ಪಿಕೊಳ್ಳುವುದು. ಬಳಿಕ ಜನನಿಯೋ ದಾದಿಯೋ ಎತ್ತಿಕೊಳ್ಳುವರು. ಹೀಗಿರುವಲ್ಲಿ ಶೋಕಕ್ಕೆ ಅವಕಾಶವೆತ್ತಣದು? ಸೇನೆ, ಕುದುರೆ, ಕಾಲ್ಬಲ ಮುಂತಾದ ಪರಿವಾರದಿಂದ ಕೂಡಿದ ಎಂತೆಂತಹ ಅರಸರ ಪಾಡು ಏನಾಯಿತು? ಅವರೆಲ್ಲರೂ ಯಾವ ಪೊಡವಿಯ ಮೇಲೆ ಮಡಿದರೋ, ಆ ಭೂಮಿಯು ಮಾತ್ರ ಇನ್ನೂ ಸಾಕ್ಷಿಯಾಗಿರುವುದಲ್ಲವೇ? ಈ ದೇಹಕ್ಕೆ ಅಪಾಯವು ತಪ್ಪಿದುದೇ ಅಲ್ಲ. ಅದು ಯಾವಾಗಲೂ ಅಪಾಯದೊಂದಿಗೇ ಇರುವುದು. ಸಂಪತ್ತುಗಳ ಹಿಂದೆಯೇ ವಿಪತ್ತುಗಳೂ ಅಂಟಿಕೊಂಡಿರುವುವು. ಈ ದೇಹವು ನಿಮಿಷ ನಿಮಿಷಕ್ಕೂ ಕ್ಷೀಣವಾಗುತ್ತಿರುವುದು ಕಾಣಬರುವುದಿಲ್ಲವೇ? ನೀರಿನಲ್ಲಿ ಇರಿಸಿದ ಹಸಿಯ ಮಣ್ಣಿನ ಗಡಿಗೆಯಂತೆ ಬಿರಿಯುತ್ತಿರುವುದನ್ನು ಕಾಣಲಾರೆಯಾ? ಮರಣ ದಂಡನೆಗೆ ಗುರಿಯಾದವನನ್ನು ಕೊಲೆದಾಣಕ್ಕೆ ಕರದೊಯ್ಯುವಾಗ ಅವನ ಮೃತ್ಯುವು ಅಡಿಗಡಿಗೂ ಎಂತು ಹತ್ತಿರಕ್ಕೆ ಬರುವುದೋ ಅಂತೆಯೇ ದಿನದಿನಕ್ಕೂ ಪ್ರಾಣಿಗಳಿಗೆ ಮರಣವು ಸಮೀಪಿಸುತ್ತಿರುವುದು. ಯೌವನ, ಸೌಂದರ್ಯ, ಬದುಕು, ಗಳಿಸಿ ಕೂಡಿಟ್ಟ ಹಣ, ದೊರೆತನ, ಗೆಳೆಯರ ನೇಹ, ಇವುಗಳೆಲ್ಲವೂ ಶಾಶ್ವತವಲ್ಲ. ಆ ಕಾರಣ ವಿವೇಕಿಯು ಇವುಗಳಲ್ಲಿ ಮೋಹವನ್ನು ಇಡಬಾರದು. ದೊಡ್ಡ ಕಡಲಿನಲ್ಲಿ ಅಲೆಗಳ ಮೂಲಕ ಕಸಕಡ್ಡಿಗಳು ಒಟ್ಟಾಗಿ ಸೇರಿದ್ದು, ಬಳಿಕ ಕಾಲಾಂತರದಲ್ಲಿ ಭಿನ್ನಭಿನ್ನವಾಗಿ ಒಂದನ್ನೊಂದು ಅಗಲಿ ದೂರವಾಗುವುವು. ಈ ಲೋಕದಲ್ಲಿ ಪ್ರಾಣಿಗಳ ಮೈತ್ರಿಯೂ ಬಾಂಧವ್ಯವೂ ಇಂತಹುದೇ ಸರಿ. ದಾರಿಗನು

ತನ್ನ ಬಳಲಿಕೆಯನ್ನು ಹೋಗಲಾಡಿಸುವ ಸಲುವಾಗಿ ಮರದ ನೆಳಲಿನಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದು, ಶ್ರಮವು ಕಡಿಮೆಯಾದ ಕೂಡಲೇ ಮುಂದಣ ಹಾದಿಯನ್ನು ಹಿಡಿಯುವುದು ಸಹಜ. ಈ ಪ್ರಪಂಚದಲ್ಲಿ ಜಂತುಗಳು ಒಟ್ಟುಗೂಡುವುದೂ ಇಂತೆಯೇ ಸರಿ. ಈ ದೇಹವು ಪಂಚಭೂತಗಳಿಂದ ನಿರ್ಮಿತವಾದುದು. ಸತ್ತ ಬಳಿಕ ಆ ಭೂತಗಳ ಅಂಶಗಳು ಆ ಆ ಭೂತ ಗಳಲ್ಲಿಯೇ ಅಡಗುವುವು. ಹೀಗಾದ ಬಳಿಕ ಇದಕ್ಕೆ ಮರುಗಿದರೆ ಫಲ ವೇನು? ಪ್ರಾಣಿಯು ತನ್ನ ಮನಸ್ಸಿಗೆ ಪ್ರೀತಿಜನಕವೆಂಬ ಭಾವನೆಯಿಂದ ಎಷ್ಟೆಷ್ಟು ಬಗೆಯ ಸಂಬಂಧಗಳನ್ನು ಬಳೆಯಿಸಿದರೂ ಯಾವುದೂ ಶಾಶ್ವತ ವಾಗಿ ನಿಲ್ಲತಕ್ಕುದಲ್ಲ. ಮುಖ್ಯವಾಗಿ ತನ್ನ ದೇಹದೊಂದಿಗೆ ಕೂಡಿ ಕೊಂಡಿರುವುದು ನೆಚ್ಚಿಕೆ ಇಲ್ಲ. ಇಂತಿರುವಲ್ಲಿ, ಗುಣಗಳೊಂದಿಗೆ ಮನು ಷ್ಯನು ಯಾವಾಗಲೂ ಕೂಡಿರುವನೆಂಬುದಾಗಿ ಹೇಳುವ ವಿಷಯದಲ್ಲಿ ಆಧಾರವಾದರೂ ಏನಿರುವುದು? ಸ್ನೇಹವು ಅಗಲುವಿಕೆಯನ್ನೇ ಸೂಚಿಸು ವುದು. ಹುಟ್ಟು ದಿಟವಾಗಿಯೂ ಮರಣವನ್ನೇ ಒಡಗೊಂಡಿರುವುದು. ಅಪಥ್ಯವೆನಿಸಿದ ಆಹಾರವನ್ನು ತಿನ್ನುವಾಗ ಎಷ್ಟೋ ಹಿತವಾಗಿ ತೋರಿ ದರೂ, ಕಾಲಾಂತರದಲ್ಲಿ ಅದರಿಂದ ರೋಗವು ಪ್ರಬಲಿಸದೆ ಇರಲಾರದು. ಪ್ರಿಯ ಸಮಾಗಮವೂ ಇಂತೆಯೇ, ಮೊದಲು ಮೊದಲು ಎಷ್ಟೊ ಮನೋಹರವಾಗಿ ಕಂಡುಬಂದರೂ, ಎಂದಾದರೊಂದು ದಿನ ಅಗಲುವಿಕೆ ಯಿಂದ ದುಃಖವನ್ನು ಒಡ್ಡದಿರಲಾರದು."

"ನದಿಯ ಪ್ರವಾಹವು ಹರಿಯುತ್ತ ಹರಿಯುತ್ತ ಮುಂದೆ ಮುಂದೆ ಸಾಗುತ್ತಿರುವುದೇ ಹೊರತು ಎಂದಿಗೂ ಹಿಂದಿರುಗುವುದಿಲ್ಲ. ಅಂತೆಯೇ ಮನುಷ್ಯನ ಆಯುಷ್ಯವು ಹಗಲು ರಾತ್ರಿಗಳ ಮೂಲಕ ಕಳೆಯುತ್ತಲೇ ಇರುವುದು. ಈ ಸಂಸಾರದಲ್ಲಿ ಸತ್ಪುರುಷರ ಸಹವಾಸವು ವಿಶೇಷ ಸುಖ ವನ್ನು ಒದವಿಸುವುದೆಂಬುದು ದಿಟ. ಆದರೆ, ಇಂತಹ ಸಜ್ಜನ ಸಾಂಗತ್ಯವೂ ಎಂದಿಗಾದರೂ ತಪ್ಪಿಹೋಗುವುದು. ಆ ಕಾರಣ ಈ ಲೋಕದಲ್ಲಿ ಯಾವುದೂ ಸ್ಥಿರವಲ್ಲ. ದುಃಖಗಳಲ್ಲಿ ಇದು ಮೊದಲನೆಯದೆಂಬುದಾಗಿ ಭಾವಿಸ ಬೇಕು. ಈ ಕಾರಣದಿಂದಲೇ ಸಜ್ಜನರು ಯಾವ ಸಂಗವನ್ನೂ ಬಯಸು ವುದಿಲ್ಲ. ಸಜ್ಜನರ ಅಗಲುವಿಕೆಯಿಂದ ಜರ್ಜರಿತವಾದ ಮನಸ್ಸನ್ನು ಮರಳಿ

ಒಟ್ಟುಗೂಡಿಸುವುದಕ್ಕೆ ತಕ್ಕುದಾದ ಔಷಧವು ಈ ಲೋಕದಲ್ಲಿಯೇ ಇಲ್ಲ. ಸಗರಚಕ್ರವರ್ತಿಯೇ ಮೊದಲಾದ ಅರಸರು ತಮ್ಮ ಒಳ್ಳೆಯ ಕೆಲಸಗಳಿಂದ ಭೂಮಂಡಲದಲ್ಲಿ ಹೆಸರುವಾಸಿಯನ್ನು ಪಡೆದವರಷ್ಟೆ! ಈಗ ಅವರೇ ಆಗಲಿ ಅವರ ಸತ್ಕಾರ್ಯಗಳೇ ಆಗಲಿ ಯಾವುವೂ ಇಲ್ಲವಷ್ಟೆ!"

"ಮೃತ್ಯುವು ಮಹಾಭಯಂಕರವಾದುದು. ಅದರ ಅಧಿಕಾರವನ್ನು ಅಡ್ಡಗಿಸುವುದು ಯಾರಿಗೂ ತರವಲ್ಲ. ಮೃತ್ಯುವನ್ನು ಒಮ್ಮೆ ಸ್ಮರಿಸಿದರೆ ಸಾಕು. ವಿವೇಕಿಯಾದವನು ಮಳೆಯ ನೀರಿನಿಂದ ಬಿಗಿತಪ್ಪಿ, ಸಡಿಲವಾದ ತೊಗಲಿನ ಕಟ್ಟುಗಳಂತೆ ಒಡನೆಯೇ ಎದೆಗುಂದಿ, ತನ್ನ ಪ್ರಯತ್ನಗಳನ್ನೆಲ್ಲ ತಾನಾಗಿಯೇ ಬಿಡುವನು. ಜಂತುಸಮುದಾಯವು ಜನನಿಯ ಬಸುರಲ್ಲಿ ಬಿದ್ದುದು ಮೊದಲು ನಿಮಿಷನಿಮಿಷದಲ್ಲಿ ಮೃತ್ಯುವಿನ ಬಳಿಗೆ ಪ್ರಯಾಣ ಮಾಡುತ್ತಲೇ ಇರುವುದು. ಈ ಯಾತ್ರೆಗೆ ಯಾವಾಗಲೂ ನಿಲುಗಡೆಯೇ ಇಲ್ಲ. ಸಂಸಾರದ ನಿಜಸ್ಥಿತಿಯನ್ನು ಯೋಚಿಸಿದರೆ ಅದರಿಂದ ತೋರಿಬರುವ ದುಃಖಕ್ಕೆ ಕೊನೆಮೊದಲುಂಟೇ? ಆದರೆ ಈ ದುಃಖವೆಲ್ಲವೂ ಅಜ್ಞಾನದ ವಿಜೃಂಭಣೆಯೇ ಹೊರತು, ದಿಟವಾಗಿ ಈ ಬಗೆಯ ಶೋಕಕ್ಕೆ ಅವಕಾಶ ವಿಲ್ಲವಷ್ಟೆ! ಒಂದುವೇಳೆ 'ಇದಕ್ಕೆ ಅಜ್ಞಾನವು ಕಾರಣವಲ್ಲ. ಅಗಲು ವಿಕೆಯೇ ಕಾರಣ' ಎನ್ನಬಹುದು. ಆದರೆ ಹಾಗೆ ದಿಟವಾಗಿಯೂ ವಿರ ಹವೇ ಕಾರಣವಾಗಿದ್ದಲ್ಲಿ, ದಿನಗಳು ಕಳೆದ ಹಾಗೆಲ್ಲ ಶೋಕವು ಇಮ್ಮಡಿ ಯಾಗಬೇಕಲ್ಲವೇ? ಅನುಭವದಲ್ಲಿ ಮಾತ್ರ ದುಃಖವು ದಿನದಿನಕ್ಕೂ ಕಡಿಮೆಯಾಗುತ್ತಿರುವುದೇ ಹೊರತು, ಹೆಚ್ಚುವುದಿಲ್ಲವಲ್ಲಾ! ಆ ಕಾರಣ ಈ ವಿಷಯದಲ್ಲಿ ಮರುಗಿ ಫಲವಿಲ್ಲ. ದುಃಖಕ್ಕೆ ಎಡೆಗೊಡದೆ ಆತ್ಮ ಸ್ವರೂಪವನ್ನು ಪ್ರತಿನಿಮಿಷದಲ್ಲಿಯೂ ಲಕ್ಷ್ಯದಲ್ಲಿರಿಸಬೇಕು. ಏಕೆಂದರೆ ಮರ್ಮಸ್ಥಾನಗಳಲ್ಲಿ ತಗುಲಿದ ಹರಿತವಾದ ಆಯುಧದಂತೆ ಆಯಾ ಸ್ಥಾನ ಗಳನ್ನು ಸೀಳುತ್ತಿರುವ ಶೋಕವೆಂಬ ಬಲವಾದ ಪೆಟ್ಟುಗಳನ್ನು ಮನಸ್ಸಿಗೆ ತಾರದೆ, ಅಲಕ್ಷ್ಯವಾಗಿರುವುದೇ ಅದಕ್ಕೆ ಉತ್ತಮವಾದ ಔಷಧ."

ಸ್ನಾತಕನ ಈ ಉಪದೇಶದಿಂದ ಕೌಂಡಿನ್ಯನ ದುಃಖವು ಕಡಿಮೆ ಯಾದ ಕೂಡಲೇ ಆತನು ಎಚ್ಚತ್ತವನಂತೆ ಝುಗ್ಗನೆ ಎದ್ದುನಿಂತು "ಇನ್ನು ನಾನು ಮನೆ ಎಂಬ ಈ ನರಕದಲ್ಲಿ ನಿಮಿಷವಾದರೂ ಇರಲೊಲ್ಲೆನು.

ಕಾಡಿಗೆ ಹೋಗುವೆನು" ಎಂದನು. ಆಗ ಕಪಿಲನು ತಿರುಗಿ ಈ ಪರಿ ಹೇಳತೊಡಗಿದನು:—

"ಸಂಸಾರದಲ್ಲಿ ಮಮತೆಯುಳ್ಳವನು ಅರಣ್ಯಕ್ಕೆ ಹೋದರೆ ಮಾತ್ರ ಫಲವೇನು? ಅಲ್ಲಿಯೂ ಅವನಿಗೆ ನಿಮಿಷನಿಮಿಷಕ್ಕೂ ಎಷ್ಟೋ ಬಗೆಯ ತೊಂದರೆಗಳು ಸಂಭವಿಸದಿರಲಾರವು. ಮನೆಯಲ್ಲಿಯೇ ಇರುತ್ತ ಪಂಚೇಂದ್ರಿಯಗಳನ್ನು ಬಿಗಿಹಿಡಿಯುವುದು ತಪಸ್ಸು ಎನಿಸಲಾರದೇ? ಮಮತೆಗೆ ಅವಕಾಶ ಕೊಡದೆ ಇರುವುದಾದರೆ, ಮನೆಯೇ ತಪೋವನವೆನಿಸಲಾರದೇ? ದುಃಖಕ್ಕೆ ಗುರಿಯಾದ ಮಾತ್ರದಿಂದಲೇ ಧರ್ಮವನ್ನು ಆಚರಿಸಲಾಗದೇ? ಬ್ರಹ್ಮಚರ್ಯವೇ ಮೊದಲಾದ ಯಾವುದಾದರೊಂದು ಆಶ್ರಮವನ್ನು ಅವಲಂಬಿಸಿ, ಆ ಆಶ್ರಮದ ನಿಯಮಗಳಿಗೆ ಅನುಸಾರವಾಗಿ ನಡೆಯುತ್ತ, ಸಕಲ ಜೀವಿಗಳಲ್ಲಿಯೂ ಸಮಭಾವನೆಯನ್ನಿರಿಸಿ, ಧರ್ಮವನ್ನು ಕೈಕೊಳ್ಳಬೇಕು. ಧರ್ಮಕ್ಕೂ ಆಶ್ರಮಕ್ಕೂ ಏನು ಗಂಟು? ಧರ್ಮವೇ ಬೇರೆ. ಆಶ್ರಮ ನಿಯಮಗಳೇ ಬೇರೆ. ಪ್ರಾಣವನ್ನು ಉಳಿಸಿಕೊಳ್ಳುವ ಮಟ್ಟಿಗೆ ಆಹಾರವನ್ನು ಸೇವಿಸುತ್ತ, ಸಂತತಿಗೆ ವಿಚ್ಛೇದ ಬಾರದಂತೆ ಸಂಸಾರದಲ್ಲಿದ್ದು, ಸತ್ಯಕ್ಕೆ ಚ್ಯುತಿಬಾರದಂತೆ ಮಿತವಾಗಿ ಮಾತನಾಡುತ್ತ, ನಿಯಮವನ್ನು ಕೈಕೊಂಡವನು ಎಂತಹ ಕಷ್ಟವನ್ನಾದರೂ ಸುಲಭವಾಗಿ ಕಡೆ ಹಾಯುವನು."

"ಆತ್ಮವೇ ಹೊಳೆ. ಪುಣ್ಯವೇ ಈ ಹೊಳೆಗೆ ರೇವು. ಸತ್ಯವೇ ಈ ನದಿಯಲ್ಲಿ ತುಂಬಿತುಳುಕುವ ನಿರ್ಮಲವಾದ ಉದಕ. ಆಚಾರವು ಈ ಹೊಳೆಯ ದಡ. ದಯೆಯು ಅಲೆಯೆನಿಸುವುದು. ಇಂತಹ ನದಿಯಲ್ಲಿ ಮಿಾಯುವುದು ಅತ್ಯವಶ್ಯಕ. ಬರಿಯ ನೀರಿನಿಂದ ತೊಳೆದರೆ ಜೀವನು ಶುದ್ಧಿಯನ್ನು ಪಡೆಯುವುದಿಲ್ಲ."

"ಹುಟ್ಟು, ಸಾವು, ಮುಪ್ಪು, ಬೇನೆ, ನೋವು, ಇವುಗಳಿಂದ ದಟ್ಟವಾದ ಈ ಸಂಸಾರದಲ್ಲಿ ಸಾರವಿಲ್ಲ. ಇದನ್ನು ಬಿಟ್ಟಹೊರತು ಸುಖವು ಇಲ್ಲವೇ ಇಲ್ಲ. ಅಡಿಗಡಿಗೂ ದುಃಖವೇ ತಲೆದೋರುವುದಲ್ಲದೆ, ಸುಖದ ಸುಳಿವೇ ಇಲ್ಲವಲ್ಲಾ! ಸುಖವೆಂಬುದು ಉಪಸರ್ಜನವಾಗಿರಬಹುದು. ದುಃಖವನ್ನು ತೊಲಗಿಸುವುದಕ್ಕಾಗಿ ಮಾಡಬೇಕಾದ ಪ್ರತೀಕಾರಗಳನ್ನೇ ಸುಖವೆಂಬುದಾಗಿ ಹೇಳುವರು."

ಈ ಉಪದೇಶದ ವಾಕ್ಯಗಳು ಕಿವಿಗೆ ತೂರಿದ ಕೂಡಲೇ ಕೌಂಡಿನ್ಯನು ಮನೆಯಲ್ಲಿಯೇ ನಿಲ್ಲಲು ಒಪ್ಪಿದನು. ಬಳಿಕ ಆ ದ್ವಿಜನು ದುಃಖಪೀಡಿತನಾಗಿ ನನ್ನನ್ನು ಕುರಿತು "ಇಂದು ಮೊದಲು ನೀನು ಕಪ್ಪೆಗಳಿಗೆ ವಾಹನವಾಗು" ಎಂಬುದಾಗಿ ಶಾಪವನ್ನಿತ್ತನು. ಬಳಿಕ ಮತ್ತೊಬ್ಬ ಭೂಸುರನು "ಕಪಿಲನ ಉಪದೇಶದಿಂದ ನಿನ್ನ ಮನೋವೃತ್ತಿಯು ಶಾಂತಿಯನ್ನು ಪಡೆಯಿತು. ಏಕೆಂದರೆ, ಯಾವುದರಲ್ಲಿಯೂ ಹೆಚ್ಚು ಮಮತೆಯನ್ನು ತೋರಬಾರದು. ಸಾಧ್ಯವಾದ ಮಟ್ಟಿಗೂ ಸಂಗವನ್ನು ಸಂಪೂರ್ಣವಾಗಿ ಬಿಡಬೇಕು. ಒಂದು ವೇಳೆ ಸಂಬಂಧವು ತೊಲಗದಿದ್ದರೆ, ಹಿರಿಯರ ಸಂಗತಸ್ನೇಹವನ್ನು ಬಳೆಯಿಸಬಹುದು. ಸಜ್ಜನರ ಸಹವಾಸವು ಔಷಧಕ್ಕೆ ಸಮಾನವಾದುದು" ಎಂದನು.

ಈ ಮಾತುಗಳಿಂದ ಕೌಂಡಿನ್ಯನ ಶೋಕವು ಕ್ರಮವಾಗಿ ಕಡಿಮೆಯಾಗುತ್ತ ಬಂದಿತು. ಒಡನೆಯೇ ಆತನು ಶಾಸ್ತ್ರೋಕ್ತರೀತಿಯಿಂದ ಸನ್ಯಾಸವನ್ನು ಕೈಕೊಂಡನು. ಇಂತು ಆ ಬ್ರಾಹ್ಮಣನ ಶಾಪದಿಂದ ಮರುಗುತ್ತ, "ನಾನು ಈಗ ಮಂಡೂಕಗಳನ್ನು ಹೊರುವುದಕ್ಕಾಗಿ ಇಲ್ಲಿಗೆ ಬಂದಿರುವೆನು" ಎಂದಿತು.

ಆ ಬಳಿಕ ಆ ಕಪ್ಪೆಯು ನೀರಿನೊಳಗೆ ಹೋಗಿ ತನ್ನ ಒಡೆಯನಾದ ಜಾಲಪಾದನೆಂಬ ಭೇಕರಾಜನಿಗೆ ಈ ವೃತ್ತಾಂತವನ್ನು ಬಿನ್ನಯಿಸಿತು. ಒಡನೆ ಮಂಡೂಕರಾಜನು ವೇಗವಾಗಿ ಅಲ್ಲಿಗೆ ಬಂದು ಹಾವಿನ ಬೆನ್ನ ಮೇಲೆ ಕುಳಿತನು. ಹಾವು ಅದನ್ನು ಹೊತ್ತು ಚಿತ್ರವಿಚಿತ್ರಗಮನದಿಂದ ಹರಿಯತೊಡಗಿತು. ಮರುದಿನ ಹರಿದಾಡುವುದಕ್ಕೂ ಶಕ್ತಿಯಿಲ್ಲದೆ ಬಿದ್ದಿರುವ ಸರ್ಪವನ್ನು ಕಂಡು ಭೇಕರಾಜನು–"ಇದೇನು? ಈ ದಿವಸ ಮೆಲ್ಲಗೆ ನಡೆಯುತ್ತಿರುವೆ?" ಎಂಬುದಾಗಿ ಕೇಳಿದನು. ಆಗ ಆ ನಾಗರಹಾವು "ಅಯ್ಯಾ! ತಿಂಡಿತೀರ್ಥಗಳಿಲ್ಲದೆ ಬಲಗುಂದಿರುವೆನು" ಎಂದಿತು. "ಇಗೋ, ನಾನು ಅಪ್ಪಣೆ ಕೊಟ್ಟಿರುವೆನು. ನಿನಗೆ ಬೇಕಾದಷ್ಟು ಕಪ್ಪೆಗಳನ್ನು ತಿನ್ನಬಹುದು" ಎಂದಿತು. ಆಗ ಮುದಿಹಾವು "ತಮ್ಮ ಉಪಕಾರಕ್ಕೆ ನಾನು ಕೃತಜ್ಞನಾಗಿರುವೆನು. ತಮ್ಮ ಆಣತಿಯನ್ನು ಶಿರಸಾವಹಿಸಿದೆನು" ಎನ್ನುತ್ತ ಒಂದೊಂದಾಗಿ ಕಪ್ಪೆಗಳನ್ನೆಲ್ಲ ತಿನ್ನತೊಡಗಿತು. ಬಳಿಕ ಆ ಸರೋವರದಲ್ಲಿ ಕಪ್ಪೆಗಳೇ ಇಲ್ಲದಿರಲು ಒಂದು ದಿನ ಆ ಹಾವು ಮಂಡೂಕರಾಜನನ್ನೂ ನುಂಗಿತು.

"ಆ ಕಾರಣ ಬುದ್ಧಿಶಾಲಿಯು ತನ್ನ ಕಾರ್ಯಸಾಧನೆಗಾಗಿ ಹಗೆಯು ನ್ನಾದರೂ ಹೆಗಲ ಮೇಲೆ ಹೊರಬೇಕು" ಎಂಬುದಾಗಿ ಮೇಘವರ್ಣನು ತಾನು ಹಿರಣ್ಯಗರ್ಭನ ಪಾಳೆಯದಲ್ಲಿದ್ದಾಗ ಕಾಲಹರಣ ಮಾಡಿದ ಸಮಾ ಚಾರವನ್ನು ಹೇಳಿ, "ಸ್ವಾಮಿ! ಹೀಗೆ ಕಳೆದ ಸಮಾಚಾರವನ್ನು ಮಾತ ನಾಡುತ್ತ ಕುಳಿತರೆ, ಇದಕ್ಕೆ ಎಂದಿಗಾದರೂ ಕೊನೆಯುಂಟೇ? ಈಗ ಹಿರಣ್ಯ ಗರ್ಭನೊಂದಿಗೆ ಸಂಧಿಮಾಡಿಕೊಳ್ಳಬೇಕೆಂಬುದೇ ನನ್ನ ಅಭಿಪ್ರಾಯ. ಆತನು ಒಡಂಬಡಿಕೆಗೆ ತಕ್ಕವನು" ಎಂದನು.

ಇಂತು ಮೇಘವರ್ಣನು ಹೇಳಿದುದನ್ನು ಲಾಲಿಸಿ ಚಿತ್ರವರ್ಣನು "ನಿನಗೇಕೆ ಇದರ ಗೊಡವೆ? ಎಂತೂ ಇವನು ನಮ್ಮಿಂದ ಸೋತವನು. ನಮ್ಮ ಊಳಿಗದಲ್ಲಿದ್ದು ಬದುಕುವುದಾದರೆ ಬದುಕಲಿ. ಇಲ್ಲವಾದರೆ ಹೋರಾಡಲಿ" ಎಂದನು. ಇಷ್ಟರಲ್ಲಿ ಜಂಬೂದ್ವೀಪದಿಂದ ಗಿಳಿಯು ಬಂದು "ದೇವಾ! ಸಿಂಹಳರಾಜನಾದ ಸಾರಸನು ಈಗ ನಮ್ಮ ಜಂಬೂದ್ವೀಪವನ್ನು ಮುತ್ತಿರುವನು" ಎಂದಿತು. ಈ ಮಾತನ್ನು ಕೇಳಿ ಅರಸನು ತತ್ತರಗೊಂಡು "ಏನು? ಏನು?" ಎಂಬುದಾಗಿ ಮೇಲೆಮೇಲೆ ಪ್ರಶ್ನೆಮಾಡಿದನು. ಆಗ ಗಿಳಿಯು ಮೊದಲಿನಂತೆಯೇ ಹೇಳಿತು.

ಅದಕ್ಕೆ ಮಂತ್ರಿಯಾದ ಗೃಧ್ರನು "ಭಲೆ! ಭಲೆ! ಚಕ್ರವಾಕನೇ! ನೀನೇ ಸರ್ವಜ್ಞನು" ಎಂಬುದಾಗಿ ಹಿರಣ್ಯಗರ್ಭನ ಮಂತ್ರಿಯನ್ನು ಕೊಂಡಾಡ ತೊಡಗಿದನು. ಇದನ್ನು ಕೇಳಿ ಚಿತ್ರವರ್ಣನು "ಇವನ ಮಾತು ಹಾಗಿರಲಿ! ನಾನೀಗಲೇ ಹೊರಟು ಅವನನ್ನು ಬುಡಮುಟ್ಟ ಉರುಳಿಸಿಬರುವೆನು" ಎಂದನು. ಆಗ ದೂರದರ್ಶಿಯು ನಗುತ್ತ ಇಂತೆಂದನು:—"ಶರತ್ಕಾಲದ ಮೋಡಗಳಂತೆ ಸುಮ್ಮನೆ ಗರ್ಜಿಸಬಾರದು. ಕೀಳನ್ನಾಗಲಿ ಮೇಲನ್ನಾಗಲಿ ಇತರರಿಗೆ ತಿಳಿಯದಂತೆ ಮಾಡುವುದು ದೊಡ್ಡಸ್ತಿಕೆ. ಅರಸನು ಬಲು ಮಂದಿ ಹಗೆಗಳೊಡನೆ ಒಂದೇ ಸಮಯದಲ್ಲಿ ಹೋರಾಡಬಾರದು. ಸರ್ಪವು ಭಯಂಕರವೂ ಬಲಶಾಲಿಯೂ ಆಗಿದ್ದರೂ, ಸುತ್ತಲೂ ಇರುವೆಗಳು ಮುತ್ತಿ ಕೊಂಡರೆ ಹೊರಳಾಡಿ ಸಾಯುವುದೇ ದಿಟ."

"ದೇವಾ! ಹೇಗೆ ಯೋಚಿಸಿದರೂ, ಈ ಸಮಯದಲ್ಲಿ ಸಂಧಿಮಾಡಿ ಕೊಳ್ಳುವುದೇ ಯುಕ್ತವಾಗಿ ತೋರುತ್ತದೆ. ನಾವು ಈಗ ಒಡಂಬಡಿಕೆಗೆ

ಸಮ್ಮತಿಸದಿದ್ದರೆ ಇಲ್ಲಿಯ ಅರಸನಾದ ಹಿರಣ್ಯಗರ್ಭನು ಹಿಂದುಗಡೆಯಿಂದ ನಮ್ಮ ಹಗೆಗಳನ್ನು ನಮ್ಮ ಮೇಲೆ ಹೋರಾಡಲು ಎಬ್ಬಿಸುವನು. ವಸ್ತುಸ್ಥಿತಿಯನ್ನು ಅರಿಯದೆ ಸಿಟ್ಟಿಗೆ ಒಳಗಾದ ಮೂಢನು, ಮುಂಗುಸಿಯನ್ನು ಕೊಂದ ಬ್ರಾಹ್ಮಣನಂತೆ ಪಶ್ಚಾತ್ತಾಪಕ್ಕೆ ಗುರಿಯಾಗುವನು.'' ಆ ಕಥೆಯನ್ನು ಹೇಳುವಂತೆ ಚಿತ್ರವರ್ಣನು ಕೇಳಲಾಗಿ ದೂರದರ್ಶಿಯು ಹೇಳತೊಡಗಿದನು.

### ೭ನೆಯ ಕಥೆ

ಉಜ್ಜಯಿನಿಯಲ್ಲಿ ಮಾಧವಶರ್ಮನೆಂಬ ಬ್ರಾಹ್ಮಣನಿದ್ದನು. ಆತನ ಹೆಂಡತಿಯು ಒಮ್ಮೆ ತನ್ನ ಮಗುವನ್ನು ನೋಡಿಕೊಳ್ಳುವಂತೆ ಗಂಡಸಿಗೆ ಹೇಳಿ, ತಾನು ಮೀಯುವುದಕ್ಕೆ ಹೋದಳು. ಅದೇ ಸಮಯದಲ್ಲಿಯೇ ಅರಸನು ಈ ಬ್ರಾಹ್ಮಣನನ್ನು ಕರೆಕಳುಹಿದನು. ಹುಟ್ಟುಬಡವನಾಗಿದ್ದ ಈ ಭೂಸುರನು ಆಗ ಈ ರೀತಿ ಯೋಚಿಸಿದನು:-“ಈಗ ನಾನು ಬೇಗನೆ ಹೋಗದಿದ್ದರೆ, ಅರಮನೆಯ ವರಮಾನವು ತಪ್ಪುವುದು. ದಾನ, ಪ್ರತಿಗ್ರಹ, ಕರ್ತವ್ಯಗಳನ್ನು ಸಮಯವರಿತು ಮಾಡದಿದ್ದರೆ, ಅದರ ಫಲವನ್ನು ಕಾಲವು ಹೀರುವುದು. ಇಲ್ಲಿ ಮಗುವನ್ನು ನೋಡಿಕೊಳ್ಳಲು ಬೇರೆ ಯಾರೂ ಇಲ್ಲ. ಹೇಗೆ ಮಾಡಲಿ?'' ಎಂಬುದಾಗಿ ಸ್ವಲ್ಪ ಹೊತ್ತು ಯೋಚಿಸಿ, “ಇರಲಿ. ಬಹಳ ಕಾಲದಿಂದಲೂ ಸಾಕಿದ ಈ ಮುಂಗುಸಿಯನ್ನು ಕೂಸಿನ ಹತ್ತಿರ ಕಾವಲಿರಿಸಿ ಹೋಗುವೆನು'' ಎಂಬುದಾಗಿ ಯೋಚಿಸಿ, ಅಂತೆಯೇ ನಕುಲವನ್ನು ಕೂಸಿನ ಬಳಿ ಕಾವಲಿಟ್ಟು ತಾನು ಅರಮನೆಗೆ ಹೊರಟನು. ಸ್ವಲ್ಪ ಹೊತ್ತಿನ ಮೇಲೆ ಆ ಹಸುಳೆ ಇದ್ದೆಡೆಗೆ ಒಂದು ಕರಿಯ ನಾಗರಹಾವು ಬಂದಿತು. ಅದನ್ನು ಕಂಡೊಡನೆಯೇ ಮುಂಗುಸಿಯು ಅದರ ಮೇಲೆ ನೆಗೆದು ತುಂಡುತುಂಡಾಗಿ ಕತ್ತರಿಸಿತು. ಇಷ್ಟರಲ್ಲಿ ಬ್ರಾಹ್ಮಣನು ಮನೆಗೆ ಬಂದನು. ಆಗ ಮುಂಗುಸಿಯು, ರಕ್ತದಿಂದ ತೊಯ್ದ ಕೈ, ಬಾಯಿ, ಕಾಲುಗಳೊಂದಿಗೆ ಬೇಗನೆ ಬಂದು ಬ್ರಾಹ್ಮಣನ ಪಾದಗಳ ಮೇಲೆ ಬಿದ್ದು ಹೊರಳಾಡಿತು. ಆಗಳಾ ದ್ವಿಜನು ಮುಂಗುಸಿಯ ಮೈಯನ್ನು ನೋಡಿ, ಗಾಬರಿಪಟ್ಟು, ಅದು ತನ್ನ ಮಗುವನ್ನು ಕೊಂದಿರಬೇಕೆಂಬ ಭಾವನೆಯಿಂದ ಅದನ್ನು ಕೊಂದನು. ತರುವಾಯ ಮನೆಯೊಳ ಹೊಕ್ಕು ನೋಡಲಾಗಿ ಮಗುವು ತೊಟ್ಟಿಲಿನಲ್ಲಿ ಸುಖವಾಗಿ ಮಲಗಿದ್ದಿತು. ಹತ್ತಿರದಲ್ಲಿ ತುಂಡುತುಂಡಾಗಿದ್ದ ಹಾವೂ ಬಿದ್ದಿದ್ದಿತು. ಆಗ ಅವನು

"ಅಯ್ಯೋ! ಇಂತು ನನಗೆ ಮಹತ್ತರವಾದ ಉಪಕಾರವನ್ನು ಮಾಡಿದ ಮುಂಗುಸಿಯನ್ನು ಅನ್ಯಾಯವಾಗಿ ಕೊಂದೆನಲ್ಲಾ!'' ಎಂಬುದಾಗಿ ಮರುಗಿದನು. ಆದುದರಿಂದ ವಸ್ತುಸ್ಥಿತಿಯನ್ನು ಅರಿಯದೆ ಸಿಟ್ಟುಗೊಳ್ಳಬಾರದು."

"ಬಯಕೆ, ಸಿಟ್ಟು, ಜಿಪುಣತನ, ತಿಳಿಗೇಡಿತನ, ಹೆಮ್ಮೆ, ಕೆಚ್ಚು, ಈ ಆರು ದೋಷಗಳಿಗೆ ಸ್ವಲ್ಪವೂ ಎಡೆಗುಡಬಾರದು. ಇವುಗಳಿಂದ ಪಾರಾದವನು ಸುಖವಾಗಿರುವನು."

ಈ ರೀತಿ ಮಂತ್ರಿಯ ಮಾತನ್ನು ಕೇಳಿ ಅರಸನು "ಸಚಿವನೇ! ಇದು ಹೀಗೆಯೋ? ಈ ಮಾತು ದಿಟವಷ್ಟೆ?'' ಎಂದನು. ಆಗ ಪ್ರಧಾನನು "ಆಹಾ! ಈ ವಿಷಯದಲ್ಲಿ ಸಂದೇಹವೇನು? ನಿಜವಾದ ವಿಷಯದಲ್ಲಿ ನೆನಹು, ನಿಶ್ಚಯ, ಜಾಣ್ಮೆ, ದಿಟ್ಟತನ, ಮಂತ್ರ, ಗೋಪನ, ಇವು ಮಂತ್ರಿಯ ಉತ್ಕೃಷ್ಟಗುಣಗಳು. ಹಿಂದುಮುಂದು, ಮೇಲುಕೀಳುಗಳನ್ನು ಯೋಚಿಸದೆ ಯಾವ ಕೆಲಸವನ್ನೂ ಮಾಡಬಾರದು. ಗುಣದೋಷಗಳನ್ನು ವಿಚಾರಿಸದಿದ್ದರೆ ಆಪತ್ತಿಗೆ ಗುರಿಯಾಗಬೇಕಾಗುವುದು. ವಿಮರ್ಶಕಾರಿಯಾದ ಪುರುಷನ ಗುಣಸಂಪತ್ತಿಯನ್ನು ಕಂಡು ಬೆರಗಾಗಿ ಸಿರಿಯು ತಾನಾಗಿಯೇ ಒಲಿಯುವಳು. ಅರಸನೆ! ಈಗ ನನ್ನ ಮಾತಿನ ಮೇಲೆ ಸಂಪೂರ್ಣವಾಗಿ ಭರವಸೆಯನ್ನಿಟ್ಟು ಸಂಧಿಮಾಡಿಕೊಳ್ಳಲೇ ಬೇಕು. ಏಕೆಂದರೆ 'ಕಾರ್ಯವನ್ನು ಸಾಧಿಸಬೇಕಾದರೆ ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳಿರುವುವು.' ಆದರೆ ಕಾರ್ಯಸಿದ್ಧಿಯು ಸಾಮೋಪಾಯವನ್ನೇ ಆಶ್ರಯಿಸಿರುವುದು. ಮಿಕ್ಕ ಮೂರು ಉಪಾಯಗಳು ಲೆಕ್ಕಕ್ಕೆ ಮಾತ್ರವೇ ಬರುವುವು'' ಎಂಬುದಾಗಿ ಬಿನ್ನಯಿಸಿದನು.

ಆಗ ಅರಸನು "ಇದು ನೆರವೇರುವ ಬಗೆಯಾದರೂ ಯಾವುದು?'' ಎನಲಾಗಿ ಮಂತ್ರಿಯು ಇಂತೆಂದನು:—"ದೇವಾ! ಶಂಕಿಸದಿರು. ಕ್ಷಿಪ್ರದಲ್ಲಿಯೇ ಕೈಗೂಡುವುದು. ಹೇಗೆಂದರೆ:-ಮಣ್ಣಿನ ಗಡಿಗೆಯನ್ನು ಒಡೆಯುವುದು ಸುಲಭ. ಅಂತೆಯೇ ದುರುಳನನ್ನು ಭೇದಿಸುವುದು ಕಷ್ಟವಲ್ಲ. ಆದರೆ ಅದನ್ನು ಮರಳಿ ಹೊಂದಿಸುವುದು ಮಾತ್ರ ಯಾರಿಗೂ ತರವಲ್ಲ. ಚಿನ್ನದ ಕೊಡವನ್ನು ಬೆಸೆಯುವುದು ಒಂದು ಕ್ಷಣದ ಕೆಲಸ. ಮರಳಿ ಅದರ ಬೆಸುಗೆಯನ್ನು ಬಿಡಿಸುವುದು ಮಾತ್ರ ಬಹಳ ಕಷ್ಟದ ಕೆಲಸ.

ಹೆಡ್ಡನಿಗೆ ಸುಲಭವಾಗಿ ತಿಳುಹಬಹುದು. ಜ್ಞಾನಿಗೆ ಅರುಹುವುದು ಇನ್ನೂ ಸುಲಭ. ತಿಳಿದೂ ತಿಳಿಯದ ಮೂರ್ಖನಿಗೆ ತಿಳುಹುವುದು ಬ್ರಹ್ಮ ಸಿಂದಲೂ ತರವಲ್ಲ. ಮುಖ್ಯವಾಗಿ ಈ ಅರಸು ಸಕಲ ಧರ್ಮರಹಸ್ಯ ಗಳನ್ನು ಅರಿತವನು. ಮಂತ್ರಿಯಾದ ಸರ್ವಜ್ಞನು ಸಾಕ್ಷಾತ್ ಬೃಹಸ್ಪತಿ ಯಂತೆ ಸರ್ವಜ್ಞನೇ ಸರಿ. ಈ ವಿಷಯವನ್ನು ಮೇಘವರ್ಣನ ಮೂಲಕ ನಾನು ಮೊದಲೇ ತಿಳಿದಿರುವೆನು. ಆ ಅರಸನ ಈಗಣ ತಂತ್ರವನ್ನು ನೋಡಿ ದುದರಿಂದ ಈ ವಿಷಯವು ಇನ್ನೂ ಸ್ಪಷ್ಟವಾಯಿತು. ಹೆರರ ಗುಣಸಂಪತ್ತಿ ಯನ್ನೂ ನಡೆವಳಿಯನ್ನೂ ಪರೋಕ್ಷದಲ್ಲಿದ್ದರೂ ಅವರವರ ಕೆಲಸಗಳಿಂದಲೇ ಊಹಿಸಿ ತಿಳಿಯಬಹುದು. ಇನ್ನು ಇಂತೆಯೇ ಪರೋಕ್ಷದಲ್ಲಿರುವವರ ಕೆಲಸಗಳನ್ನೂ ಪರ್ಯವಸಾನದಿಂದ ಊಹಿಸಿ ದೃಢಪಡಿಸಬಹುದು.''

ಆಗ ಚಿತ್ರವರ್ಣನು "ಹೀಗೆ ಮಾತಿಗೆ ಮಾತು ಬೆಳೆಸುತ್ತ ಕುಳಿತರೆ ಫಲವಿಲ್ಲ. ನಿನ್ನ ಇಷ್ಟದಂತೆ ಮಾಡಬಹುದು'' ಎನಲಾಗಿ ಮಹಾಮಂತ್ರಿ ಯಾದ ಗೃಧ್ರನು "ಅವರ ವಿಷಯದಲ್ಲಿ ನಾವು ಅನ್ಯಥಾ ಭಾವಿಸಬಾರದು. ಈಗ ಒಡಂಬಡಿಕೆಯ ಹೊರತು ಬೇರೆ ಮಾರ್ಗವೇ ಇಲ್ಲ. ಹೇಗಾದರೂ ಸಂಧಿಯನ್ನು ಮಾಡಿಕೊಳ್ಳಲೇ ಬೇಕು'' ಎನ್ನುತ್ತ ಕೋಟೆಯನ್ನು ಹೊಕ್ಕನು.

ಇಷ್ಟರಲ್ಲಿ ಬೇಹುಗಾರನಾಗಿ ತೆರಳಿದ್ದ ಬಕನು ಹಿರಣ್ಯಗರ್ಭನ ಬಳಿ ಸಾರ್ದು, "ಜೀಯಾ! ಒಡಂಬಡಿಕೆಯ ಸಲುವಾಗಿ ದೂರದರ್ಶಿ ಮಂತ್ರಿಯು ಬರುತ್ತಿರುವನು'' ಎಂಬುದಾಗಿ ಬಿನ್ನಯಿಸಿದನು. ಈ ಮಾತನ್ನು ಕೇಳಿ ಹಿರಣ್ಯಗರ್ಭನು ಶಂಕೆಗೊಂಡು ಚಕ್ರವಾಕನನ್ನು ಕುರಿತು "ಮಂತ್ರಿಯೇ! ಇವರ ಕಡೆಯಿಂದ ಮರಳಿ ಯಾವನಾದರೂ ಒಳಸಂಚಿನಿಂದ ನಮ್ಮ ಬಿಡಾರ ವನ್ನು ಹುಗುವನೋ?'' ಎಂದನು. ಆಗ ಸರ್ವಜ್ಞನು ನಗುತ್ತ "ದೇವಾ! ಅಂಜ ಕೆಲಸವಿಲ್ಲ. ಈಗ ಭೀತಿಗೆ ಅವಕಾಶವೂ ಇಲ್ಲ. ಈ ಗೃಧ್ರನು ತನ್ನ ಹೆಸರಿಗೆ ತಕ್ಕಂತೆ ದೂರದರ್ಶಿಯೇ ಸರಿ. ಉದಾರಮನಸ್ಕನು. ಹೆದ ರಲು ಕಾರಣವೇನು? ಆದರೆ ಮಂದಮತಿಗಳ ಸ್ವಭಾವವೇ ಇಂತಹುದು. ಒಮ್ಮೆ ಯಾರ ವಿಷಯದಲ್ಲಿಯೂ ಸಂದೇಹವೇ ಇಲ್ಲ. ಇನ್ನೊಮ್ಮೆ ಒಂದೊಂದರಲ್ಲಿಯೂ ಶಂಕೆಯೇ. ಮತಿಗೆಟ್ಟ ಯಾವುದೋ ಒಂದು ಹಂಸವು ರಾತ್ರಿಯ ವೇಳೆಯಲ್ಲಿ ನೀರಿನಲ್ಲಿ ಮಾರ್ಪೊಳೆದ ನಕ್ಷತ್ರವನ್ನು

ಬಿಳಿದಾವರೆಯೆಂಬ ಭ್ರಾಂತಿಯಿಂದ ತಿನ್ನತೊಡಗಿ ಮೋಸಹೋಯಿತು. ಆ ಮೇಲೆ ಹಗಲಿನಲ್ಲಿ ದಿಟವಾಗಿಯೂ ಒಂದು ಬಿಳಿದಾವರೆಯನ್ನು ಕಂಡು ತಾರಗೆ ಎಂಬ ಭಾವನೆಯಿಂದ ಅದನ್ನು ತಿನ್ನದೆ ಬಿಟ್ಟಿತಂತೆ! ಹೀಗೆಯೇ ದುರುಳರ ತಂತ್ರಕ್ಕೆ ಒಳಗಾದವರು ವಾಸ್ತವಾಂಶವನ್ನು ತಿಳಿಯಲಾರದೆ ಹೆದರಿ, ನಿಜವಾದ ಸಂಗತಿಯು ಹೊರಬಿದ್ದ ಮೇಲೆಯೂ, ಅದರಲ್ಲಿ ಯಾವುದೋ ಒಂದು ಅಪಾಯವು ಒಳಗೊಂಡಿರಬೇಕೆಂಬುದಾಗಿ ತಿಳಿಯು ವರು.''

''ದುರುಳರ ಒಳಸಂಚಿನಿಂದ ಮನಮುರಿದವನಿಗೆ ಸಜ್ಜನರಲ್ಲಿಯೂ ನಂಬುಗೆ ಹುಟ್ಟಲಾರದು. ಒಮ್ಮೆ ಪಾಯಸವನ್ನು ತಿನ್ನ ಹೋಗಿ ಕೈ ಸುಟ್ಟುಕೊಂಡ ತರಳನು ಮೊಸರನ್ನೂ ಬಾಯಿಂದ ಊದಿ, ಆರಿಸಿ ತಿನ್ನು ತ್ತಾನೆಯಷ್ಟೆ! ಆ ಕಾರಣದಿಂದ ನಮ್ಮ ಶಕ್ತಿಗೆ ತಕ್ಕಂತೆ ಆತನನ್ನು ಸತ್ಕರಿ ಸುವ ಸಲುವಾಗಿ, ಈಗ ನಾವು ಉತ್ತಮವಾದ ಉಪಹಾರಗಳನ್ನು ಸಿದ್ಧ ಪಡಿಸಬೇಕು'' ಎನಲು ಚಕ್ರವಾಕನ ಮಾತಿನಂತೆಯೇ ಎಲ್ಲವನ್ನೂ ಸಜ್ಜು ಗೊಳಿಸಿದರು. ಬಳಿಕ ಚಕ್ರವಾಕನು ಕೋಟೆಯ ಬಾಗಿಲ ಹತ್ತಿರಕ್ಕೆ ನಡೆ ತಂದು ದೂರದರ್ಶಿಯನ್ನು ಇದಿರ್ಗೊಂಡು ಮನ್ನಿಸಿ, ಕೋಟೆಯ ಬಾಗಿಲ ಮಾರ್ಗವಾಗಿ ಗೌರವದಿಂದ ಕರೆತಂದು ರಾಜದರ್ಶನವನ್ನು ಮಾಡಿಸಿದನು. ಗೃಧ್ರಮಂತ್ರಿಯು ರಾಜನಾದ ಹಿರಣ್ಯಗರ್ಭನಿಗೆ ನಮಸ್ಕರಿಸಿ ತನಗೆ ಕೊಟ್ಟ ಒಂದು ಪೀಠದಲ್ಲಿ ಕುಳಿತನು. ಆಗ ಸರ್ವಜ್ಞನು ''ಇಲ್ಲಿನ ಸಮಸ್ತ ಭೋಗಭಾಗ್ಯಗಳೂ ತಮ್ಮವೆಂತಲೇ ಭಾವಿಸಬೇಕು. ತಮ್ಮ ಇಷ್ಟಾನುಸಾರ ಇವುಗಳನ್ನೆಲ್ಲ ನೀವು ಅನುಭವಿಸಬಹುದು'' ಎಂದನು. 'ಇದೀಗ ಯುಕ್ತ ವಾದ ಮಾತು' ಎಂಬುದಾಗಿ ಹಿರಣ್ಯಗರ್ಭ ಮಹಾರಾಜನೂ ಚಕ್ರವಾಕನ ಮಾತನ್ನು ಅನುಮೋದಿಸಿದನು. ಆಗ ದೂರದರ್ಶಿಯು ''ಇದು ಸರಿ. ಆದರೂ ಈಗ ಹೆಚ್ಚು ಒಕ್ಕಣಿಕೆಗೆ ಅವಕಾಶವಿಲ್ಲ. ಇದರಿಂದ ಫಲವೂ ಇಲ್ಲ. ಏಕೆಂದರೆ, ಜಿಪುಣನನ್ನು ಹಣದಿಂದಲೇ ವಶಪಡಿಸಿಕೊಳ್ಳಬೇಕು. ಸಿಟ್ಟುಗೊಂಡವನನ್ನು ಕೈಮುಗಿದು ಸಮಾಧಾನಗೊಳಿಸಬೇಕು. ಮೂರ್ಖ ನನ್ನು ಅವನ ಇಚ್ಛೆಯಂತೆಯೇ ಅನುಸರಿಸಿ ಸ್ವಾಧೀನಪಡಿಸಿಕೊಳ್ಳಬೇಕು. ನಿಜಸ್ಥಿತಿಯನ್ನು ವಿವರಿಸುವುದರ ಮೂಲಕ ಪಂಡಿತನನ್ನು ಮೆಚ್ಚಿಸಬೇಕು.

ಗೆಳೆಯನನ್ನು ನಂಬುಗೆಯಿಂದ ಅಧೀನದಲ್ಲಿರಿಸಬೇಕು. ನಂಟರನ್ನು ಆದ ರಣೆಯಿಂದ ವಶಮಾಡಿಕೊಳ್ಳಬೇಕು. ಮಡದಿಯನ್ನೂ ಊಳಿಗದವರನ್ನೂ ಮನ್ನಣೆಯಿಂದಲೂ ಔದಾರ್ಯದಿಂದಲೂ ಸ್ವಾಧೀನಪಡಿಸಿಕೊಳ್ಳಬೇಕು. ಇತರರನ್ನು ಸರಳಭಾವದಿಂದ ಮೆಚ್ಚಿಸಿ ವಶದಲ್ಲಿಟ್ಟುಕೊಳ್ಳಬೇಕು."

ಆದುದರಿಂದ ಮಹಾಪ್ರತಾಪಸಂಪನ್ನನೆನಿಸಿದ ನಮ್ಮ ಚಿತ್ರವರ್ಣ ಮಹಾರಾಜನೊಂದಿಗೆ ಸಂಧಿಗೆ ಒಡಂಬಟ್ಟು ನಮ್ಮನ್ನು ಕಳುಹು" ಎಂಬು ದಾಗಿ ಹೇಳಿದನು.

ಆಗ ಚಕ್ರವಾಕನು ಇಂತೆಂದನು.

"ಸಂಧಿಯು ಯಾವ ಬಗೆಯಿಂದ ನಡೆಯಬೇಕೋ ಅದರ ವಿವರವನ್ನು ನೀನೇ ಹೇಳಬಹುದು" ಎನಲು, ದೂರದರ್ಶಿಯು "ಬಲ್ಲಿದನಾದ ಹಗೆಯು ಕೈ ಎತ್ತಿದಾಗ, ಬೇರೊಂದು ಬಗೆಯಿಂದ ಬದಲು ಮಾಡುವುದಕ್ಕೆ ಸಾಗದ ಅರಸು, ತನಗೆ ಒದವಿದ ವಿಪತ್ತನ್ನು ತಪ್ಪಿಸಿಕೊಳ್ಳುವ ಸಲುವಾಗಿ ಹೇಗೋ ಕಾಲಹರಣ ಮಾಡುತ್ತ ಸಂಧಿಗೆ ಸಮ್ಮತಿಸಬೇಕು.

ಕಪಾಲ, ಉಪಸಂಹಾರ, ಸಂತಾನ, ಸಂಗತ, ಉಪನ್ಯಾಸ, ಪ್ರತೀ ಕಾರ, ಸಂಯೋಗ, ಪುರುಷಾಂತರ, ಅದೃಷ್ಟನರ, ಆದಿಷ್ಟ, ಆತ್ಮಾದಿಷ್ಟ, ಉಪಗ್ರಹ, ಪರಿಕ್ರಯ, ಉಚ್ಛಿನ್ನ, ಪರಿಭೂಷಣ, ಸ್ಕಂಧೋಪನೇಯ— ಎಂಬುದಾಗಿ ಹದಿನಾರು ಬಗೆಯ ಸಂಧಿಯನ್ನು ನೀತಿಜ್ಞರು ಹೇಳುವರು. ಅವುಗಳ ಸ್ವರೂಪವನ್ನು ವಿವರಿಸುವೆನು:—

(೧) ಇಬ್ಬರೂ ಒಂದೇ ಬಗೆಯ ಒಡಂಬಡಿಕೆಗೆ ಒಳಪಟ್ಟು ಸಂಧಿ ಮಾಡಿಕೊಂಡರೆ ಕಪಾಲಸಂಧಿಯೆನಿಸುವುದು.

(೨) ಏನಾದರೊಂದು ವಸ್ತುವನ್ನು ಕೊಟ್ಟು ಸಂಧಿಮಾಡಿಕೊಂಡರೆ ಉಪಸಂಹಾರಸಂಧಿಯಾಗುವುದು.

(೩) ಒಬ್ಬರ ಹೆಣ್ಣನ್ನು ಮತ್ತೊಬ್ಬನಿಗೆ ಕೊಟ್ಟು ಒಡಂಬಡಿಕೆ ಮಾಡಿ ಕೊಂಡರೆ ಸಂತಾನಸಂಧಿಯೆಂಬುದಾಗಿ ಹೇಳುವರು.

(೪) ಸ್ನೇಹವನ್ನು ಬಳೆಯಿಸಿ ಹಗೆಗಳಿಬ್ಬರೂ ಒಂದಾದರೆ ಸಂಗತ ಸಂಧಿಯೆನ್ನುತ್ತಾರೆ. ಈ ಸಂಗತಿಯನ್ನೇ ಕೆಲವರು ಕಾಂಚನಸಂಧಿಯೆನ್ನು

ತ್ತಾರೆ. ಇಬ್ಬರೂ ಬದುಕಿರುವ ವರೆಗೆ ಈ ಸಂಧಿಗೆ ಕುಂದು ಬರಲಾರದು. ಹಣಕಾಸಿನ ವಿಷಯದಲ್ಲಿ ಯಾರೊಬ್ಬರಿಗೂ ಶ್ರಮವಿಲ್ಲ. ಪ್ರಯೋಜನವು ಇಬ್ಬರಿಗೂ ಸಮಾನವಾದುದರಿಂದ, ಏಳಿಗೆಯಲ್ಲಿಯೂ ಎಡರಿನಲ್ಲಿಯೂ ಇದಕ್ಕೆ ಭಂಗವಿಲ್ಲ. ಲೋಹಗಳಲ್ಲಿ ಉತ್ತಮವಾದ ಕಾಂಚನದಂತೆ, ಮಿಕ್ಕ ಸಂಧಿಗಳಿಗಿಂತ ಶ್ರೇಷ್ಠವೆನಿಸಿದ ಕಾರಣ ಇದನ್ನು ಕಾಂಚನಸಂಧಿಯೆಂಬುದಾಗಿ ವ್ಯವಹರಿಸುವರು.

(೫) ಹಣದ ಲಾಭಕ್ಕಾಗಿ ಮಾಡಿದ ಸಂಧಿಯನ್ನು ವಿಚಕ್ಷಣರು ಉಪನ್ಯಾಸಸಂಧಿಯೆನ್ನುತ್ತಾರೆ.

(೬) 'ಮೊದಲು ನಾನು ಈತನಿಗೆ ಉಪಕಾರಮಾಡಿರುವೆನು. ಈಗ ನನಗೆ ಈತನು ಉಪಕಾರಮಾಡಬಲ್ಲನು' ಎಂಬ ಭಾವನೆಯಿಂದ ನಡೆಯತಕ್ಕ ಒಡಂಬಡಿಕೆಗೆ ಪ್ರತೀಕಾರಸಂಧಿಯೆಂಬ ಹೆಸರು.

ಅಥವಾ

'ಈಗ ನಾನು ಈತನಿಗೆ ಉಪಕಾರ ಮಾಡುತ್ತೇನೆ. ಕಾಲಾಂತರದಲ್ಲಿ ಈತನೂ ನನಗೆ ಉಪಕಾರ ಮಾಡುವನು' ಎಂಬುದು ರಾಮಸುಗ್ರೀವರ ಒಪ್ಪಂದವನ್ನು ಹೋಲುವ ಕಾರಣ ಇದನ್ನೇ ಪ್ರತೀಕಾರಸಂಧಿಯೆಂಬುದಾಗಿ ಕೆಲವರು ಅಭಿಪ್ರಾಯಪಡುವರು.

(೭) ಒಂದೇ ಪ್ರಯೋಜನವನ್ನೇ ಎರಡು ಪಕ್ಕದವರೂ ಬಯಸಿದರಾದರೆ ಆ ಸಂಧಿಗೆ ಸಂಯೋಗಸಂಧಿಯೆಂಬ ವ್ಯವಹಾರವು.

(೮) 'ಯುದ್ಧವೀರರು ಹೇಳಿದಂತೆ ನಾವಿಬ್ಬರೂ ನಡೆಯುವೆವು' ಎಂಬುದಾಗಿ ಹೇಳಿ, ಪಣವನ್ನು ಗೊತ್ತುಮಾಡಿ, ಅದರಂತೆ ಸಂಧಿಮಾಡಿಕೊಂಡರೆ ಪುರುಷಾಂತರಸಂಧಿಯೆನಿಸುವುದು.

(೯) 'ನೀನೊಬ್ಬನೇ ನಿನ್ನ ಈ ಕಾರ್ಯವನ್ನು ಸಾಧಿಸಬೇಕು' ಎಂಬುದಾಗಿ ಹಗೆಯು ಪಣವನ್ನು ಏರ್ಪಡಿಸಿದಲ್ಲಿ, ಅಂತಹ ಸಂಧಿಗೆ ಅದೃಷ್ಟಪುರುಷಸಂಧಿ ಎಂಬ ಹೆಸರು.

(೧೦) ದೇಶದ ಒಂದು ಭಾಗವನ್ನು ಹಣಕ್ಕೆ ಪ್ರತಿಯಾಗಿ ಬಿಟ್ಟುಕೊಟ್ಟು, ಪ್ರಬಲನಾದ ಹಗೆಯೊಂದಿಗೆ ಸಂಧಿಮಾಡಿಕೊಂಡರೆ ಆದಿಷ್ಟಸಂಧಿ ಎಂಬುದಾಗಿ ಕರೆಯುತ್ತಾರೆ.

(೧೧) ತನ್ನ ಸೇನೆಯ ಸಂಗಡ ಒಡಂಬಡಿಕೆ ಮಾಡಿಕೊಂಡರೆ ಆತ್ಮಾದಿಷ್ಟವೆನಿಸುವುದು.

(೧೨) ಪ್ರಾಣವನ್ನು ಉಳಿಸಿಕೊಳ್ಳುವುದಕ್ಕಾಗಿ ಸರ್ವಸ್ವವನ್ನೂ ಕೊಟ್ಟು ಸಂಧಿಮಾಡಿಕೊಳ್ಳುವುದಾದರೆ ಉಪಗ್ರಹಸಂಧಿಯೆನ್ನುವರು.

(೧೩) ಬೊಕ್ಕಸದ ನಾಲ್ಕನೆಯ ಒಂದು ಪಾಲನ್ನಾಗಲಿ, ಅರೆ ಪಾಲನ್ನಾಗಲಿ, ಸಂಪೂರ್ಣವಾಗಿಯೇ ಆಗಲಿ ಕೊಟ್ಟು, ಉಳಿದ ವಸ್ತುಗಳನ್ನೆಲ್ಲ ಕಾಪಾಡಿಕೊಳ್ಳುವುದು ಪರಿಕ್ರಯಸಂಧಿಯೆಂಬುದಾಗಿ ಹೇಳುತ್ತಾರೆ.

(೧೪) ಸಾರವತ್ತಾದ ನೆಲವನ್ನು ಬಿಟ್ಟುಕೊಟ್ಟು ಸಂಧಿ ಮಾಡಿಕೊಂಡರೆ ಉಚ್ಛಿನ್ನಸಂಧಿಯೆನಿಸಿಕೊಳ್ಳುತ್ತದೆ.

(೧೫) ಭೂಮಿಗಳ ಉತ್ಪನ್ನವನ್ನೆಲ್ಲ ಕೊಟ್ಟು ಒಡಂಬಡಿಕೆ ಮಾಡಿಕೊಂಡಲ್ಲಿ ಅದು ಪರಿಭೂಷಣಸಂಧಿಯೆಂದೆನಿಸುವುದು.

(೧೬) ಹಗೆಯ ಸೈನ್ಯದಲ್ಲಿರುವ ಒಬ್ಬೊಬ್ಬ ಭಟನೂ ತನ್ನ ಹೆಗಲ ಮೇಲೆ ಹೊರುವಷ್ಟು ಧಾನ್ಯವನ್ನು ಒಬ್ಬೊಬ್ಬನಿಗೂ ಕೊಟ್ಟು ಏರ್ಪಡಿಸಿಕೊಂಡ ಸಂಧಿಗೆ, ಸಂಧಿಯ ಗುಟ್ಟನ್ನು ಬಲ್ಲ ನೀತಿನಿಪುಣರು ಸ್ಕಂಧೋಪನೇಯಸಂಧಿಯೆಂಬುದಾಗಿ ಹೆಸರಿಟ್ಟಿರುವರು.

ಇಂತು ಮೇಲೆ ಹೇಳಿದ ಹದಿನಾರು ಸಂಧಿಗಳಲ್ಲಿ ಪರಸ್ಪರೋಪಕಾರಕ, ಸ್ನೇಹ, ಬೀಗತನ, ಉಪಹಾರಗಳೆಂಬ ನಾಲ್ಕು ಮಾತ್ರವೇ ಮುಖ್ಯವಾದುವು. ಈ ನಾಲ್ಕರಲ್ಲಿಯೂ ಉಪಕಾರವೇ ದಿಟವಾಗಿಯೂ ಸಂಧಿಯೆನಿಸಿಕೊಳ್ಳತಕ್ಕುದೆಂಬುದು ನನ್ನ ಅಭಿಪ್ರಾಯ. ಮೈತ್ರೀಸಂಧಿಯನ್ನುಳಿದು ಮಿಕ್ಕವುಗಳೆಲ್ಲ ಉಪಹಾರಸಂಧಿಯ ಪ್ರಭೇದಗಳಾಗಿಯೇ ಇವೆ.

ಈಗ ದಂಡೆತ್ತಿ ಬಂದಿರುವ ಹಗೆಯು ಪ್ರಬಲನಾಗಿರುವುದರಿಂದ ಯಾವುದೊಂದು ಲಾಭವೂ ಇಲ್ಲದೆ, ಆತನು ಹಿಂದಿರುಗುವಂತಿಲ್ಲ. ಅದರಿಂದ ಈಗ ಉಪಹಾರಕ್ಕಿಂತ ಬೇರೆ ಯಾವುದೂ ನನಗೆ ಕಂಡುಬರಲಿಲ್ಲ.” ಅದನ್ನು ಕೇಳಿ ಹಿರಣ್ಯಗರ್ಭನು “ಅಯ್ಯಾ! ನೀನು ಮಹಾಪಂಡಿತನಾಗಿರುವೆ! ಈಗ ನಮ್ಮ ಕರ್ತವ್ಯವೇನೆಂಬುದನ್ನು ನೀನೇ ವಿವರಿಸಬೇಕು” ಎನಲು, ದೂರದರ್ಶಿಯು “ಇದೇನು? ಮಾತುಮಾತಿಗೂ

ಹೀಗೇಕೆ ಹೇಳುತ್ತೀರಿ? ಮನೋವ್ಯಥೆ, ರೋಗ, ಸಂತಾಪಗಳೆಂಬ ಯಾವುದಾದರೊಂದು ನಿಮಿತ್ತದಿಂದ, ಇಂದೋ ನಾಳೆಯೋ ಕುಸಿದು ಬೀಳುವ ಈ ಹಾಳು ಒಡಲಿಗಾಗಿ ಯಾವನಾದರೂ ಅಧರ್ಮದಲ್ಲಿ ಕಾಲಿಡು ತ್ತಾನೆಯೋ? ಪ್ರಾಣಿಗಳ ಬಾಳು ನೀರಿನಲ್ಲಿ ಮಾರ್ಪೊಳೆದ ಚಂದ್ರಬಿಂಬ ದಂತೆ ಚಂಚಲವಾದುದು. ಅದರ ಸ್ವರೂಪವನ್ನು ತಿಳಿದು ಯಾವಾಗಲೂ ಒಳ್ಳೆಯ ಕೆಲಸವನ್ನೆ ಮಾಡುತ್ತಿರಬೇಕು.''

"ಸಂಸಾರವು ಬಿಸಿಲ್ಗುದುರೆಯಂತೆ ಬರಿಯದು. ನೀರಿನ ಭ್ರಾಂತಿ ಯನ್ನು ಮಾತ್ರ ಉಂಟುಮಾಡುವುದಲ್ಲದೆ, ದಿಟವಾಗಿಯೂ ಅದರಲ್ಲಿ ನೀರಿರುವುದೇ? ಒಂದು ಕ್ಷಣಕಾಲದಲ್ಲಿ ಮಾಯವಾಗುವುದು. ಈ ರಹಸ್ಯ ವನ್ನು ಚೆನ್ನಾಗಿ ನೆನಪಿನಲ್ಲಿಟ್ಟು ಸಜ್ಜನರ ಸಹವಾಸವನ್ನು ಮಾಡುತ್ತ ಧರ್ಮವನ್ನೂ ಸುಖವನ್ನೂ ಸಂಪಾದಿಸಬೇಕು. ಆದುದರಿಂದ ನನ್ನ ಸಮ್ಮತವೇನೆಂಬುದನ್ನು ತಿಳಿಸುವೆನು. ನೀವು ಅದರಂತೆಯೇ ನಡೆಯ ಬೇಕು. ಏಕೆಂದರೆ, ಸಾವಿರಗಟ್ಟಲೆಯಾಗಿ ಮಾಡಿದ ಅಶ್ವಮೇಧಯಾಗದ ಫಲವನ್ನು ಒಮ್ಮೆ ತಕ್ಕಡಿಯಲ್ಲಿ ತೂಕಮಾಡಿದೆವಾದರೆ ಸತ್ಯವೇ ಮಿಗಿ ಲೆನಿಸುವುದಲ್ಲವೇ? ಆ ಕಾರಣದಿಂದ ನೀವಿಬ್ಬರು ಅರಸರು ಸತ್ಯವನ್ನೇ ದೃಢವಾಗಿ ನಂಬಿ, ಅದರ ಭರವಸೆಯ ಮೇಲೆ ಕಾಂಚನಸಂಧಿಯನ್ನೇ ಮಾಡಿಕೊಂಡರಾಯಿತು. ಇದೇ ನನ್ನ ಸ್ವಾರಸಿಕವಾದ ಅಭಿಪ್ರಾಯ" ಎಂದನು.

"ಈ ಮಾತಿಗೆ ಸರ್ವಜ್ಞನು ಸಮ್ಮತಿಸಿ "ಅಂತೆಯೇ ಆಗಬಹುದು!' ಎಂದನು. ಬಳಿಕ ವಸ್ತ್ರಾಭರಣಾದಿಗಳಿಂದ ದೂರದರ್ಶಿಯನ್ನು ಯಥಾ ಯೋಗ್ಯವಾಗಿ ಮನ್ನಿಸಿದರು. ಆ ಬಗೆಯ ಮನ್ನಣೆಯಿಂದ ಸಂತಸಗೊಂಡ ದೂರದರ್ಶಿಯು ಸರ್ವಜ್ಞನೆನಿಸಿದ ಚಕ್ರವಾಕ ಮಂತ್ರಿಯನ್ನು ತನ್ನ ಸಂಗಡ ಕರೆದುಕೊಂಡು ಮಯೂರ ರಾಜನಾದ ಚಿತ್ರವರ್ಣನಲ್ಲಿಗೆ ತೆರಳಿದನು. ಅಲ್ಲಿ ಚಿತ್ರವರ್ಣನು ಗೃಧ್ರಮಂತ್ರಿಯ ಮಾತಿನ ಮೇರೆಗೆ ಸರ್ವಜ್ಞನನ್ನು ಸತ್ಕರಿಸಿ, ಸ್ವಲ್ಪ ಸಮಯದ ವರೆಗೆ ಆತನೊಡನೆ ಸಂಭಾಷಣೆಮಾಡಿ, ಆತನ ಇಷ್ಟಾನುಸಾರ ಆ ಬಗೆಯ ಕಾಂಚನಸಂಧಿಗೆ ಸಮ್ಮತಿಸಿ, ಸರ್ವಜ್ಞನನ್ನು ಹಿರಣ್ಯಗರ್ಭ ಮಹಾರಾಜನಲ್ಲಿಗೆ ಬೀಳ್ಕೊಟ್ಟನು. ಆಗ ದೂರದರ್ಶಿಯು ಚಿತ್ರವರ್ಣನನ್ನು ಕುರಿತು "ಸ್ವಾಮಿ! ನಮ್ಮ ಕೋರಿಕೆಯು ಈಡೇರಿತು.

ಇನ್ನು ನಾವು ನಮ್ಮ ರಾಜಧಾನಿಯಾದ ವಿಂಧ್ಯಗಿರಿಗೆ ತೆರಳುವ!'' ಎಂದನು. ಈ ಮಾತಿಗೆ ಮಯೂರ ರಾಜನು ಸಮ್ಮತಿಸಿದನು. ಬಳಿಕ ಅವರೆಲ್ಲರೂ ತಮ್ಮ ಸ್ಥಾನಗಳನ್ನು ಸೇರಿ ಸುಖದಿಂದ ಇರುತ್ತಿದ್ದರು.

ಈ ಪ್ರಕಾರವಾಗಿ ವಿಷ್ಣುಶರ್ಮನು ಕಥೆಯನ್ನು ಮುಗಿಸಿ ರಾಜಪುತ್ರರನ್ನು ನೋಡಿ ''ನಿಮಗೆ ಇನ್ನೂ ಏನನ್ನು ಹೇಳಬೇಕು?'' ಎಂಬುದಾಗಿ ಪ್ರಶ್ನೆ ಮಾಡಿದನು. ಆ ಮಾತಿಗೆ ಅರಸುಮಕ್ಕಳು ''ಆರ್ಯ! ನಿನ್ನ ಅನುಗ್ರಹದಿಂದ ನಾವು ರಾಜ್ಯತಂತ್ರಗಳನ್ನೆಲ್ಲ ಸಂಪೂರ್ಣವಾಗಿ ತಿಳಿದೆವು. ಈಗ ನಮಗೆ ಅತಿಶಯವಾದ ಸುಖವೂ ಸಂತೋಷವೂ ಕಂಡುಬಂದಿತು'' ಎಂದರು. ಆಗ ವಿಷ್ಣುಶರ್ಮನು ''ಹಾಗಾದರೆ, ಈ ಕಥೆಗೆ ಈ ಮಂಗಳವಾಕ್ಯವಿರಲಿ:-

''ಜಯಶೀಲರೆನಿಸಿದ ಅರಸರೆಲ್ಲರು ಅನುದಿನವೂ ಸಂಧಿಯಿಂದ ಸುಖಸಂತೋಷಗಳನ್ನು ಅನುಭವಿಸುತ್ತ ಬಾಳಲಿ! ಸಜ್ಜನರಿಗೆ ಯಾವ ಎಡರುಗಳೂ ಬಾರದಿರಲಿ! ಪುಣ್ಯಶಾಲಿಗಳು ಚಿರಕಾಲ ಪ್ರಖ್ಯಾತಿವೆತ್ತು ಜೀವಿಸಲಿ! ನೀತಿಯು ವಾರಾಂಗನೆಯಂತೆ ಎಲ್ಲರ ಅಂತರಂಗವನ್ನೂ ಸೂರೆಗೊಂಡು ಮೆರೆಯುತ್ತಿರಲಿ! ಭೂಮಿಯು ಅನುಗಾಲವೂ ಸಕಲ ಭೋಗಗಳನ್ನೂ ಒದವಿಸುತ್ತ ಪ್ರಜೆಗಳಿಗೆ ಯಾವ ತೊಡರೂ ಇಲ್ಲದಂತೆ ಸಂತೋಷವನ್ನೂ ಸುಖವನ್ನೂ ಒದವಿಸುತ್ತ ಕಾಪಾಡುತ್ತಿರಲಿ! ಮತ್ತು ಪರ್ವತನಂದಿನಿಯ ಪ್ರೇಮವೆಂಬ ಧನಕ್ಕೆ ನಿಧಿಯಂತಿರುವ ಚಂದ್ರಶೇಖರನೂ, ವಿಷ್ಣುವಿನ ನಾಭಿಕಮಲದಲ್ಲಿ ಕಾರ್ಮುಗಿಲಿನಲ್ಲಿ ಹೊಳೆಯುವ ಮಿಂಚಿನಂತೆ ನೆಲೆಸಿರುವ ಲಕ್ಷ್ಮಿಯೂ, ಸೂರ್ಯನ ಕಾಂತಿ ಪ್ರತಾಪಗಳಿಂದ ಬೆಳಗುವ ಮೇರು ಪರ್ವತವೂ ಎಂದಿನವರೆಗೆ ಕಂಗೊಳಿಸುವುವೋ ಅಂದಿನ ವರೆಗೆ, ಈ ಹಿತೋಪದೇಶ ಕಥಾಸಂಗ್ರಹವು ಲೋಕದಲ್ಲಿ ಪ್ರಖ್ಯಾತಿಗೊಂಡಿರಲಿ!'' ಎಂಬುದಾಗಿ ಮುಗಿಸಿದನು.

ಈ ಕಥಾಸಾರವನ್ನು ಬಾಲಕರ ಉಪಯೋಗಾರ್ಥವಾಗಿ (ಸಂಸ್ಕೃತ ಭಾಷೆಯಲ್ಲಿ) ಬರೆಯಿಸಿದ ಮಂಡಲಾಧಿಪತಿಯಾದ ಧವಳಚಂದ್ರನು ಹಗೆಗಳನ್ನು ಗೆದ್ದು ಶ್ರೀಮಂತನೆನಿಸಿ ಸುಖವಾಗಿ ಬದುಕಲಿ!

**ಇಂತು ಹಿತೋಪದೇಶ ಕರ್ಣಾಟಕ ಗದ್ಯಾನುವಾದದಲ್ಲಿ ಸಂಧಿಯೆಂಬ ನಾಲ್ಕನೆಯ ಪ್ರಕರಣಂ ಸಮಾಪ್ತಂ.**

**ಮಂಗಳಮಸ್ತು.**

